# ಚಾರ್ಲ್ಸ್ ಡಾರ್ವಿನ್

## ಜೀವನ ಚರಿತ್ರೆ

ಲೇಖಕರು :

ಎನ್. ಎಸ್. ವೀರಪ್ಪ, ಬಿ.ಎಸ್‌ಸಿ. (ಆನರ್ಸ್)

ಮೈಸೂರು ಶಿಕ್ಷಣಶಾಖೆ.

ಅಕ್ಟೋಬರ್ ೧೯೪೫ ಬೆಲೆ ೧-೧೨-೦

# ಮೊದಲ ಮಾತು

ಮೌನದಿಂದ ಬಾಳಿ, ಜನಜೀವನದಲ್ಲಿ ವಿಚಾರಕ್ರಾಂತಿಯನ್ನೆಬ್ಬಿಸಿದ ಮಹಾಪುರುಷರಲ್ಲಿ ಚಾರ್ಲ್ಸ್ ಡಾರ್ವಿನ್ ಅಗ್ರಗಣ್ಯ. ಇವನು ತನ್ನ ವಿಕಾಸತತ್ವವನ್ನು ಪ್ರಕಟಿಸಿ, ಮಾನಸಿಕ ಸ್ವಾತಂತ್ರ್ಯವನ್ನು ದೊರಕಿಸಿ ಕೊಟ್ಟನಂತರ ಮಾನವನ ಜ್ಞಾನ ನಿರಾತಂಕವಾಗಿ ಬೆಳೆಯಲವಕಾಶ ವಾಯಿತು. ಆ ತತ್ವದ ಪ್ರಭಾವ ಇಂದಿನ ಎಲ್ಲ ವಿದ್ಯಾರಂಗಗಳ ಮೇಲೂ ಬಿದ್ದು, ಹೊಸದೊಂದು ಅಭ್ಯಾಸಕ್ರಮವೇ ಏರ್ಪಟ್ಟಿದೆ. ಯಾವ ವಿಷಯ ವನ್ನೇ ಆಗಲಿ, ಅದರ ಹುಟ್ಟು, ಬೆಳವಣಿಗೆ ಇತ್ಯಾದಿ ಕ್ರಮದಿಂದ ಅಭ್ಯಾಸಿ ಸಲು ಮೊದಲಾದದು ಡಾರ್ವಿನ್ನನ ಕಾಲದಿಂದಲೇ. ಮೇಲಾಗಿ ಡಾರ್ವಿನ್ ಆದರ್ಶವಿಜ್ಞಾನಿ. ಅವನ ಸಂಶೋಧನೆಯ ದೃಷ್ಟಿಧ್ಯೇಯಗಳು ವಿಜ್ಞಾನ ಪ್ರಪಂಚದಲ್ಲಿ ಮೇಲ್ಪಂಕ್ತಿಯಾಗಿ ಪರಿಣಮಿಸಿವೆ. ನಿಸರ್ಗಶಾಸ್ತ್ರದ ಬೆಳ ವಣಿಗೆಯ ಇತಿಹಾಸದಲ್ಲಿ ಡಾರ್ವಿನ್ನನ ವ್ಯಕ್ತಿತ್ವ ಚಿರಸ್ಮರಣೀಯವಾದುದು.

ಸಮಾಜಸುಧಾರಕರಾಗಲಿ, ರಾಜಕಾರಣಪಟುಗಳಾಗಲಿ, ತಮ್ಮ ಜೀವನ ದಲ್ಲಿ ಹಲವು ಘಟನೆಗಳನ್ನನುಭವಿಸಿ, ಮಹಾಪುರುಷರಾಗುವರು. ಅವರ ಅನುಭವ ಮತ್ತು ವ್ಯಕ್ತಿಧ್ಯೇಯಗಳ ಪರಿಚಯವೇ ಒಂದು ದೊಡ್ಡ ಜ್ಞಾನ. ವಿಜ್ಞಾನಿಗಳ ಜೀವನದಲ್ಲಿ ಅಂಥ ಘಟನೆಗಳು ಸಂಭವಿಸಿದರೂ ಅವೇ ಅಷ್ಟೊಂದು ಪ್ರಧಾನವಲ್ಲ; ಜನತೆಯ ಕಲ್ಯಾಣದೃಷ್ಟಿಯಿಂದ ಅವರು ನಡೆಸಿರುವ ಸಂಶೋಧನೆ ಗಳು ಹೆಚ್ಚು ಆಕರ್ಷಣೀಯವಾದವು ಆದುದರಿಂದ ಈ ಗ್ರಂಥದಲ್ಲಿ ಜೀವನ ಚರಿತ್ರೆಗೆ ಪ್ರಾಧಾನ್ಯ ಕೊಟ್ಟಿರುವಂತೆ ಸಂಶೋಧನಾಂಶಗಳಿಗೂ ಪ್ರಾಧಾನ್ಯ ಕೊಟ್ಟು ಕಥನಕಾರ್ಯವನ್ನು ಸಾಗಿಸಿದೆ.

ವಿಜ್ಞಾನಿಗಳ ಜೀವನಕಥನಗಳು ನಮ್ಮ ಸಾಹಿತ್ಯದೇವಿಗೆ ಹೊಸ ಆಭರಣ. ಈಗಿನ ನಮ್ಮ ನಾಡಿನಲ್ಲಿ ವಿಜ್ಞಾನಶಾಸ್ತ್ರದ ವಿಷಯವಾದ ಗ್ರಂಥಗಳು ಹೊರಬೀಳುತ್ತಿವೆ. ಹಾಗೆಯೇ ವಿಜ್ಞಾನಿಗಳ ಜೀವನವನ್ನು ನಾವು ತಿಳಿದುಕೊಳ್ಳಬೇಕು. ಕಲಾವಿದರ ಗ್ರಂಥಗಳು ನಾಡ ಸಂಪದ ವನ್ನು ಸಾರುವಂತೆ ವೈಜ್ಞಾನಿಕ ಗ್ರಂಥಗಳೂ ಬೆಳಕಿಗೆ ಬಂದು ನಾಡ ಪಕ್ಷ

ಮನಸ್ಸಿನಲ್ಲಿ ವಿಜ್ಞಾನಪ್ರೇಮ ಹುಟ್ಟುವಂತಾಗಬೇಕು. ನ್ಯೂಟನ್, ಪಾಸ್ಟರ್, ಲಿಸ್ಟರ್, ಜೆನ್ನರ್, ಮಾರ್ಕೋನಿ ಮುಂತಾದವರ ಜೀವನಕಥನಗಳು ಆದಷ್ಟು ಬೇಗ ಕನ್ನಡದಲ್ಲಿ ಪ್ರಚುರವಾಗಲೆಂದು ಎಲ್ಲರೂ ಹಾರೈಸುವ.

ಗ್ರಂಥದ ಕೈಬರಹದ ಪ್ರತಿಯನ್ನು ಪರಿಶೀಲಿಸಿ ಇದಕ್ಕೆ ದೇವರಾಜ ಬಹದ್ದೂರ್ ಸಾಹಿತ್ಯನಿಧಿಯಿಂದ ಪ್ರಥಮ ಬಹುಮಾನವನ್ನು ದಯಪಾಲಿಸಿ ಉತ್ತೇಜನವಿತ್ತುದಕ್ಕಾಗಿ ಶಿಕ್ಷಣಶಾಖಾಧಿಕಾರಿಗಳಿಗೆ ನಾನು ಚಿರಋಣಿ.

ಪುಸ್ತಕವನ್ನು ಆದಷ್ಟು ಬೇಗ ಅಂದವಾಗಿ ಮುದ್ರಿಸಿಕೊಟ್ಟ ಉಷಾ ಮುದ್ರಣಾಲಯದವರಿಗೂ ನನ್ನ ವಂದನೆಗಳು.

೧—೧೦—೧೯೪೫,<br>
೧೩, ಕೃಷ್ಣರಾಜವನಂ<br>
ಮೈಸೂರು

ಎನ್. ಎಸ್. ವೀರಪ್ಪ

# ವಿಷಯ ಸೂಚಿಕೆ

# ಚಾರ್ಲ್ಸ್ ಡಾರ್ವಿನ್

## ೧. ವಿಜ್ಞಾನ ಪ್ರಪಂಚದ ಮೂವರು ಮಹಾವ್ಯಕ್ತಿಗಳು

ವಿಚಾರಸಮ್ಮತವೂ ಸುವ್ಯವಸ್ಥಿತವೂ ಆದ ತಿಳಿವಳಿಕೆಗೆ ವಿಜ್ಞಾನ ಎನ್ನುತ್ತೇವೆ. ಇದರ ಅಭ್ಯಾಸ ಮೂರು ನಿರ್ದಿಷ್ಟ ಮಾರ್ಗಗಳಲ್ಲಿ ನಡೆಯಬೇಕು. ಮೊದಲು ಆ ವಿಷಯಕ್ಕೆ ಸಂಬಂಧಿಸಿದ ಪ್ರಯೋಗಗಳನ್ನು ನಡೆಸುವುದು; ಆಗ ಕಂಡುಬರುವ ಅಂಶಗಳನ್ನು ವೀಕ್ಷಿಸುವುದು;

ವಿಜ್ಞಾನ ಶಾಸ್ತ್ರ

ಅನಂತರ ಇವೆರಡಂಶಗಳ ಆಧಾರದ ಮೇಲೆ ತಿಳಿಯುತಕ್ಕ ವಿಷಯ. ಇಲಿಯೊಂದನ್ನು ಗಾಳಿ ಹೋಗದ ಗಾಜಿನ ಪಾತ್ರೆಯಲ್ಲಿ ಹಾಕಿ ಮುಚ್ಚಿದಾಗ ಅದು ಗಾಳಿಯಿಲ್ಲದೆ ಸ್ವಲ್ಪ ಹೊತ್ತಿನನಂತರ ಹೋರಾಡಿ ಸಾಯುವುದನ್ನು ವೀಕ್ಷಿಸುತ್ತೇವೆ. ಹೀಗೆ ಇನ್ನೂ ಹಲವಾರು ಪ್ರಾಣಿಗಳನ್ನು ಅಭ್ಯಾಸಿಸಿ ಗಾಳಿಯಿಲ್ಲದಿದ್ದರೆ ಪ್ರಾಣಿಗಳು ಸಾಯುವುವೆಂದು ಒಂದು ಸಾಮಾನ್ಯ ನಿರೂಪಣೆಯನ್ನು ಮಾಡುತ್ತೇವೆ

ಪ್ರಕೃತಿಯಲ್ಲಿ ಕಂಡುಬರುವ ವಿವಿಧವಿಚಾರಗಳಿಗೂ ದೃಶ್ಯಗಳಿಗೂ ಸಂಬಂಧಿಸಿದ ಸಾಮಾನ್ಯನಿಯಮಗಳನ್ನು ಕಂಡು ಹಿಡಿದು ಆ ಮೂಲಕ ಆ ನಿಯಮಗಳ ದೃಷ್ಟಿಯಿಂದ ಆದಷ್ಟು ಸುಲಭಮಾರ್ಗದಲ್ಲಿ ವಿಷಯವನ್ನು ವಿವರಿಸುವುದು ವಿಜ್ಞಾನದ ಗುರಿ. ಪ್ರಯೋಗಗಳಿಂದ

ವಿಜ್ಞಾನ ಮತ್ತು ಮತ

ನೋಡಿ ಅರಿತ ಸತ್ಯಾಂಶಗಳ ಬೆಂಬಲ ಆ ವರ್ಣನೆಗಿರುವುದಲ್ಲದೆ ಪದಾರ್ಥ ಇದ್ದ ರೀತಿಯಲ್ಲಿ ಮತ್ತು ಇರುವ ರೀತಿಯಲ್ಲಿ ವಿವರಿಸುತ್ತದೆ. ವಿಜ್ಞಾನೋಪಾಸನೆಗೆ ನಿರ್ದಿಷ್ಟ ಕ್ರಮಗಳುಂಟು. ಅದು ಜಗತ್ತಿನ ಯಾವ ವಿಷಯದ ಮೇಲಾಗಲಿ ಅಂತ್ಯತೀರ್ಪನ್ನು ಕೊಡಲು ಸಿದ್ಧವಾಗಿಲ್ಲ. ಏಕೆಂದರೆ ವಿಜ್ಞಾನ ಚಿರಂತನವೂ ವೃದ್ಧಿಯಾಗುವ ಸ್ಥಿತಿಯಲ್ಲೇ ಇದೆ. ಮತದ ಗುರಿಯೇ ಬೇರೆ. ನಮ್ಮ ಪಂಚಜ್ಞಾನೇಂದ್ರಿಯಗಳಿಗೆ ಅತೀತವಾಗಿರುವ ಹಲವಂಶಗಳನ್ನು ಪಾರಮಾರ್ಥಿಕದೃಷ್ಟಿಯಿಂದ ಅರಿತುಕೊಳ್ಳುವುದು ಮತತತ್ತ್ವವೆಂದು ಹೇಳುವರು. ಎಲ್ಲ ಮತಗಳೂ ಅತಿಮಾನುಷ ಪ್ರಪಂಚವುಂಟೆಂದೂ ಆ ಪ್ರಪಂಚದ ಬೆಳಕಿನಲ್ಲೇ ಈ ಭೂಮಿಗೆ

ಸಂಬಂಧಿಸಿದ ವಿವಿಧಕಾರ್ಯಗಳು ಮತ್ತು ಜ್ಞಾನದ ಸಮಸ್ಯೆಗಳು ಇತ್ಯರ್ಥ ವಾಗುವುವೆಂದೂ ತಿಳಿಯುವುವು. ಮತಧರ್ಮದ ತತ್ವಗಳು ಸಾಮಾನ್ಯ ವಾಗಿ ಅಂತ್ಯಸಿದ್ಧಾಂತದ ರೂಪದಲ್ಲಿರುತ್ತವೆ. ಮತಧರ್ಮೋಪಾಸನೆಗೆ ಒಂದು ನಿರ್ದಿಷ್ಟ ಮಾರ್ಗವಿಲ್ಲ; ಅನೇಕ ಮಾರ್ಗಗಳುಂಟು. ಮೇಲೆ ವಿವರಿ ಸಿದ ದೃಷ್ಟಿಯಿಂದ ವಿಜ್ಞಾನ ಮತ್ತು ಮತ ಉತ್ತರ-ದಕ್ಷಿಣ ಧ್ರುವಗಳಿದ್ದ ಹಾಗೆ. ಆದರೂ ಜನಜೀವನದ ಮೇಲೆ ಮತಧರ್ಮದ ಕೈವಾಡ ಅಗಾಧವಾಗಿ ಬಿದ್ದಿದೆ. ಅದು ಮಾನವನ ಬುದ್ಧಿಸ್ಫೂರ್ತಿಯಿಂದ ಹುಟ್ಟಿದ ಮಹಾಜ್ಞಾನ ಗಳಲ್ಲೊಂದೆಂದು ಹೇಳುವರು.

ನಮ್ಮ ಮುಂದಿನ ಸಮಸ್ಯೆಗಳನ್ನು ಪ್ರಯೋಗಫಲಿತಾಂಶಗಳ ಬೆಂಬಲದ ಮೇಲೆ ವಿಚಾರ ಸಮ್ಮತವಾಗಿ ವಿಮರ್ಶಿಸುವುದಕ್ಕೆ ವಿಜ್ಞಾನದೃಷ್ಟಿಯೆನ್ನು ತ್ತೇವೆ. ನಾವು ಬಾಳುತ್ತಿರುವ ಈ ಕಾಲವನ್ನು ವಿಜ್ಞಾನಯುಗವೆಂದು ಹೇಳುವುದುಂಟು. ಆದುದರಿಂದ ನಮ್ಮ ಪೂರ್ವಿಕರಿ ವಿಜ್ಞಾನ ದೃಷ್ಟಿ ದ್ದುದು ವಿಜ್ಞಾನಯುಗವಲ್ಲವೆಂದು ಅರ್ಥವಾಗಬಹುದು. ನಮ್ಮ ಮುಂದಿನ ಪೀಳಿಗೆಯವರು ಇಂದಿನವರಾದ ನಮ್ಮನ್ನೂ ಹಾಗೆಯೇ ದೃಷ್ಟಿಸುವುದರಲ್ಲಿ ಸಂದೇಹವಿಲ್ಲ. ಅಂದರೆ ಹಿಂದಿ ನವರನ್ನು ಗಣನೆಗೆ ತೆಗೆದುಕೊಂಡಾಗ ಇಂದಿನವರು ಹೆಚ್ಚು ವಿಜ್ಞಾನಿ ಗಳೆಂದು ಹೇಳಬಹುದು. ಹಾಗಾದರೆ ಜನಜೀವನದಲ್ಲಿ ವಿಜ್ಞಾನದೃಷ್ಟಿ ಎಂದು ಹುಟ್ಟಿತೆಂಬ ಪ್ರಶ್ನೆಯೇಳುತ್ತದೆ. ಮಾನವನು ಯಾವುದೋ ಒಂದು ಗೊತ್ತಾದ ದಿನದಲ್ಲಿ ವಿಜ್ಞಾನಯುಗಕ್ಕೆ ಕಾಲಿಡಲಿಲ್ಲ. ಆದಿ ಮಾನವನಿಗೆ ವಿಚಾರಬುದ್ಧಿ ಅಂಕುರಿಸಿದಂದಿನಿಂದಲೂ ವಿಜ್ಞಾನದೃಷ್ಟಿ ಕ್ರಮಕ್ರಮವಾಗಿ ಬೆಳೆಯುತ್ತಾ ಬಂದಿದೆಯೆಂದು ಹೇಳಬಹುದು. ಮೃಗಪೂರ್ವಜನಿಂದ ಮಾನವತ್ವ ಮೂಡಿ ದಂತೆ ವಿಚಾರಬುದ್ಧಿಯೂ ಸ್ಫುರಿಸಿರಬೇಕು.

ವಿಜ್ಞಾನಶಾಸ್ತ್ರ ಒಂದು ಕ್ರಮವಾದ ಜ್ಞಾನಶಾಖೆಯಾಗಿ ಬೆಳೆಯಲಾರಂಭ ವಾದುದು ಮಾತ್ರ ಹದಿನೇಳನೆಯ ಶತಮಾನದ ಆದಿಭಾಗದಿಂದ. ಹಾಗೂ ಜನಜೀವನದಲ್ಲಿ ಅದಕ್ಕೆ ಒಂದು ಸ್ಥಾನಕೊಟ್ಟು, ಔದ್ಯೋಗಿಕ ಪ್ರಗತಿಯಲ್ಲಿ ಆ ಶಾಸ್ತ್ರಜ್ಞಾನದ ನೆರವನ್ನು ದೊರಕಿಸಿಕೊಂಡುದು ಹದಿನೆಂಟನೆಯ ಶತಮಾನದ ಮಧ್ಯಕಾಲದಿಂದೀಚೆಗೆ. ಪ್ರಾಚೀನ ಈಜಿಪ್ಟಿನವರ ಕಾಲದಿಂದ

ಯೂರೋಪಿನಲ್ಲಿ ಹದಿನೈದ-ಹದಿನಾರನೆಯ ಶತಮಾನಗಳಲ್ಲಿ ನಡೆದ ಮಹಾ ಕ್ರಾಂತಿಯ ನವೋದಯದ ಕಾಲದವರೆಗೂ ವಿಜ್ಞಾನದೃಷ್ಟಿ ಬೆಳೆಯಲಿಲ್ಲ. ಹಾಗೆಯೇ ಔದ್ಯೋಗಿಕ ಪ್ರಗತಿಗೂ ಯಾವ ಪ್ರಚೋದನೆಯೂ ದೊರೆತಿರಲಿಲ್ಲ. ಆದಿಮಾನವನಿಗೆ ವಾಕ್ಶಕ್ತಿ ಬಂದ ಮೇಲೆ, ಬೆಂಕಿಯನ್ನು ನಿರ್ಮಿಸಿಕೊಳ್ಳುವುದು, ವ್ಯವಸಾಯವನ್ನು ಮಾಡುವುದು, ಕಾಡುಪ್ರಾಣಿಗಳನ್ನು ಪಳಗಿಸಿಕೊಳ್ಳುವುದು ಮುಂತಾದ ಕೆಲಸಗಳು ತಿಳಿದ, ಕ್ರಮವಾಗಿ ಬೆಳೆದು ಬಂದಿರಬೇಕು. ಆವನು ಸಮಾಜಜೀವಿಯಾಗಿ ಮಾರ್ಗಗಳನ್ನು ನಿರ್ಮಿಸಿಕೊಳ್ಳುವುದು, ಲೋಹಗಳಂಥ ಪದಾರ್ಥಗಳನ್ನು ತಯಾರಿಸಿಕೊಳ್ಳುವುದು ಮುಂತಾದ ಕಾರ್ಯಗಳನ್ನರಿತಂತೆ ಆತನ ಜೀವನ ಒಂದು ಕ್ರಮವಾದ ತಳಹದಿಯ ಮೇಲೆ ಬೆಳೆಯಲಾರಂಭಿಸಿತು. ಇವೆಲ್ಲದರ ಪರಿಣಾಮವಾಗಿ ಸಂಸ್ಕೃತಿ ಬೆಳೆದು, ಮದ್ದು-ಗುಂಡುಗಳ ತಯಾರಿಕೆ, ಮುದ್ರಣ ಯಂತ್ರದ ನಿರ್ಮಾಣ ಮುಂತಾದವು ಗೊತ್ತಾದಂತೆ ಆವನ ಜ್ಞಾನ ಮತ್ತು ಅನುಭವ ಹೆಚ್ಚುತ್ತಾ ಬಂದವು. ಹೀಗೆ ವಿಸ್ತರಿಸಿದ ಮಾನವಸಮಾಜದ ಆಡಳಿತಕ್ಕಾಗಿ ಸರ್ಕಾರವೇರ್ಪಟ್ಟಿತು. ರೈಲು, ತಂತೀವಾರ್ತೆ ಮುಂತಾದ ವಾಹನ ಸೌಕರ್ಯಗಳಾದಂತೆ ನಾಡಿನ ಕೇಂದ್ರದಲ್ಲಿ ಸರ್ಕಾರವಿದ್ದುಕೊಂಡು ಸುತ್ತಣ ಆಡಳಿತಗಳನ್ನು ಕೇಂದ್ರೀಕರಿಸಿಕೊಂಡು ಆಳುವ ಶಕ್ತಿ ಬಂದಿತು. ಇವೆಲ್ಲದರ ಆವಶ್ಯಕತೆಗಾಗಿ ನಾಡಿನಲ್ಲಿ ವಿವಿಧ ಉದ್ಯೋಗಗಳು ಬೆಳೆಯಲಾರಂಭವಾದುವು. ಪ್ರಕೃತಿಯ ಶಕ್ತಿಯನ್ನು ಲಾಭದಾಯಕವಾಗಿ ಉಪಯೋಗಿಸಿಕೊಂಡು ಜೀವನಪ್ರಗತಿಯನ್ನು ಮುಟ್ಟುವುದೇ ವಿಜ್ಞಾನಯುಗದ ಔದ್ಯೋಗಿಕ ಲಕ್ಷಣವಾಯಿತು.

ಜನಜೀವನದಲ್ಲಿ ವಿಜ್ಞಾನದೃಷ್ಟಿ ಬೆಳೆದು ಬಂದುದನ್ನು ಮೂರು ಘಟ್ಟಗಳಾಗಿ ವಿಂಗಡಿಸಿ ಅಭ್ಯಾಸಿಸಬಹುದು. ಪ್ರಾಚೀನ ಗ್ರೀಕರು ಜೀವನದ ವಿವಿಧಕ್ಷೇತ್ರಗಳಲ್ಲಿ ಬಹುವಾಗಿ ಮುಂದುವರಿದು ತಮ್ಮದೇ ಒಂದಾದ ಸಂಸ್ಕೃತಿಯನ್ನು ನಿರ್ಮಿಸಿದ್ದರೆಂಬುದು ಪ್ರಸಿದ್ಧಿ ಪಡೆದ ವಿಷಯ. ಆದರೆ ವಿಜ್ಞಾನ ಕ್ಷೇತ್ರದಲ್ಲಿ ಮಾತ್ರ ಅವರು ಹಿಂದುಳಿದಿದ್ದರು. ಆ ಶಾಸ್ತ್ರದಲ್ಲಿ ಅವರು ಅಷ್ಟಿಷ್ಟು ಮುಂದುವರಿದಿದ್ದರೆಂದರೆ ರೇಖಾಗಣಿತ ಮತ್ತು ನಕ್ಷತ್ರಶಾಸ್ತ್ರಗಳಲ್ಲಿ ಮಾತ್ರ.

ಭೂಮಿ ಸೂರ್ಯನ ಸುತ್ತ ಸುತ್ತುವುದೇ ಹೊರತು ಸೂರ್ಯ ಸುತ್ತುವುದಿಲ್ಲವೆಂದು ನಿರ್ಧರಿಸಿದವರು ಗ್ರೀಕರೇ. ಅವರಲ್ಲೊಬ್ಬನಾದ ಅರಿಸ್ಟಾಟ್ಲ್ (ಕ್ರಿ ಪೂ ೩೮೪-೩೨೨) ಎಂಬ ತತ್ವಜ್ಞಾನಿ ಒಂದು ಹೆಜ್ಜೆ ಮುಂದೆ ಸಾಗಿ, ಭೂಮಿ ಸೂರ್ಯನ ಸುತ್ತ ಚಕ್ರಾಕಾರವಾಗಿ ಸುತ್ತುವುದೆಂದು ವಿವರಿಸಿ ನಿರೂಪಣೆಯನ್ನು ಹೊರಡಿಸಿದನು.

**ಗ್ರೀಕರು**

ಇದು ಅಷ್ಟು ಸಾಧುವಲ್ಲದಿದ್ದರೂ ಈ ನಿರೂಪಣೆಯ ಆಧಾರದ ಮೇಲೆಯೇ ಬೈಬಲ್ಲಿನ ಹಲವು ವಾಕ್ಯಗಳನ್ನು ಅವನ ನಂತರ ಬರೆದಿರುವಂತೆ ತೋರುತ್ತದೆ. ಗ್ರೀಕರು ತತ್ವಗಳನ್ನೂ ನಿಯಮಗಳನ್ನೂ ನಿರೂಪಿಸಲು ಯತ್ನಿಸಿದ್ದರೂ, ಪ್ರಯೋಗಗಳನ್ನು ನಡೆಸಿ ತಮ್ಮ ತತ್ವಗಳನ್ನು ಫಲಿತಾಂಶಗಳೊಡನೆ ಹೋಲಿಸಿ ನೋಡುವ ದೃಷ್ಟಿ ಅವರಿಗಿರಲಿಲ್ಲ. ಹಾಗೆ ಪರೀಕ್ಷಿಸುವುದು ಪಾಪಕರವೆಂದು ಅನೇಕರು ಭಾವಿಸಿದ್ದರು. ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಬದುಕಿದ್ದ ಆರ್ಕಿಮಿಡೀಸ್ ಎಂಬಾತನೇ ಪ್ರಾಚೀನ ಗ್ರೀಕರಲ್ಲೆಲ್ಲ ಉತ್ತಮ ವಿಜ್ಞಾನಿಯೆನ್ನಬೇಕು. ಅವನು ಪದಾರ್ಥಗಳು ನೀರಿನಲ್ಲಿ ಮುಳುಗಿದಾಗ ಭಾರದಲ್ಲಿ ಕಡಮೆಯಾಗುವುದೆಂದೂ, ಹಾಗೆ ಕಡಮೆಯಾದ ಭಾರ, ಆ ಪದಾರ್ಥದ ಗಾತ್ರದ ನೀರಿನ ಭಾರಕ್ಕೆ ಸಮನೆಂದೂ ಮಹತ್ತರವಾದ ಭೌತಶಾಸ್ತ್ರದ ತತ್ವವೊಂದನ್ನು ಕಂಡುಹಿಡಿದು ಪ್ರಯೋಗ ಫಲಿತಾಂಶಗಳಿಂದ ಪರಿಷ್ಕರಿಸಿ ನೋಡಿದನು. ಆದುದರಿಂದ ಪ್ರಯೋಗ ಪರಿಶೀಲನಾಕಾಂಕ್ಷೆ ಗ್ರೀಕ್ ವಿಜ್ಞಾನಿಗಳಲ್ಲಿ ಉಂಟಾದುದು ಆರ್ಕಿಮಿಡೀಸನಿಂದೀಚೆಗೆ. ಆದರೆ ಅವನನಂತರ ವಿಜ್ಞಾನ ದೃಷ್ಟಿ ಗ್ರೀಕರಲ್ಲಿ ಎರಡು ಸಹಸ್ರ ವರ್ಷಗಳ ತನಕ ಬೆಳೆಯದೆ ನಿಂತಲ್ಲಿಯೇ ನಿಂತುಬಿಟ್ಟಿತು. ಈ ಹೊಸ ದೃಷ್ಟಿ ಅಪವಿತ್ರವೂ ನಾಸ್ತಿಕವೂ ಎಂದು ಮತಪೀಠದವರು ಖಂಡಿಸಿದುದೇ ಇದಕ್ಕೆ ಕಾರಣವೆನ್ನಬಹುದು.

ಆ ಕಾಲದಲ್ಲಿ ವಿಜ್ಞಾನದೃಷ್ಟಿಯ ಬೆಳವಣಿಗೆಗೆ ಅಷ್ಟಿಷ್ಟು ನೆರವಾದ ಇತರರಲ್ಲಿ ಅರಬರ ಹೆಸರನ್ನು ಉಲ್ಲೇಖಿಸಬಹುದು. ಕ್ರಿ. ಶ. ೫ ೬ ನೆಯ ಶತಮಾನಗಳಲ್ಲೇ ಹಿಂದೂಸ್ಥಾನದ ಜನರಿಗೆ ವೈದ್ಯಶಾಸ್ತ್ರ, ವನಸ್ಪತಿ ಶಾಸ್ತ್ರ, ರಸಾಯನಶಾಸ್ತ್ರಗಳಲ್ಲಿ ಪರಿಚಯವಿತ್ತೆಂದೂ

**ಅರಬರು**

ಅರಬರು ಅವರೊಡನೆ ವ್ಯಾಪಾರ ಮಾಡುತ್ತಿದ್ದುದರಿಂದ

ಅವುಗಳನ್ನು ಕಲಿತುಕೊಂಡರೆಂದೂ ಹೇಳುವರು. ಅರಬರಲ್ಲಿ "ಆಲ್ಕೆಮಿ"
ಗಳೆಂಬ ರಸವಿದ್ಯೋಪಾಸಕರು ಹೇರಳವಾಗಿದ್ದರು. ಸಾಮಾನ್ಯಲೋಹ
ಗಳನ್ನು ಹಲವು ಪ್ರಯೋಗಗಳಿಂದ ಚಿನ್ನಕ್ಕೆ ಮಾರ್ಪಡಿಸಬಹುದೆಂಬ
ನಂಬಿಕೆ ಅವರಿಗೆ ತುಂಬ ಇತ್ತು. ಇದಕ್ಕಾಗಿ ಅವರು ವಿಧವಿಧವಾದ ಪ್ರಯೋಗ
ಗಳನ್ನು ನಡೆಸುತ್ತಿದ್ದರು. ಆದರೆ ಅವರು ತತ್ತ್ವನಿರೂಪಣೆಯ ಕಡೆ
ಹೆಚ್ಚು ಗಮನಕೊಡುತ್ತಿರಲಿಲ್ಲ. ಅಲ್ಲಲ್ಲಿ ಅಷ್ಟಿಷ್ಟು ಕೆದಕಿ ಬೆದಕಿ ಪ್ರಯೋಗ
ಗಳನ್ನು ನಡೆಸುವ ಆಸೆ ಮಾತ್ರ ತುಂಬ ಇತ್ತು. ಯಾವ ಕಾಲದಲ್ಲಿ
ಯುರೋಪು ಮತಪೀಠದವರ ಕಠಿಣಶಾಸನಗಳಿಗೆ ತುತ್ತಾಗಿ ಜೀವನ
ಅಂಧಕಾರದಲ್ಲಿತ್ತೋ ಆ ಕಾಲದಲ್ಲಿ ತಮ್ಮ ರಸವಿದ್ಯೆಯ ಚಟದಿಂದ ಅರಬರು
ಸಲ್ಲಿಸಿದ ಸೇವೆ ರಸಾಯನಶಾಸ್ತ್ರದ ಬೆಳವಣಿಗೆಯ ಇತಿಹಾಸದಲ್ಲಿ
ಚಿರಸ್ಮರಣೀಯವಾದುದು. ಹದಿನೈದು–ಹದಿನಾರನೆಯ ಶತಮಾನಗಳಲ್ಲಿ
ಯುರೋಪಿನಲ್ಲಿ ಮಹಾಕ್ರಾಂತಿಯೆದ್ದು ಸಾಮಾಜಿಕ ನವೋದಯವುಂಟಾದ
ಮೇಲೆ ಅರಬರು ಹಾಕಿದ್ದ ರಸವಿದ್ಯೆಯ ತಳಹದಿಯ ಮೇಲೆ ರಸಾಯನ
ಶಾಸ್ತ್ರದ ಭವ್ಯಜ್ಞಾನಮಂದಿರವನ್ನು ನಿರ್ಮಿಸಲು ಸಾಧ್ಯವಾಯಿತೆಂದು ಹೇಳ
ಬಹುದು.

ಗ್ರೀಕರಿಗೆ ಪ್ರಯೋಗಗಳ ಕಡೆ ಆಸಕ್ತಿಯಿರಲಿಲ್ಲ. ಹಾಗೆಯೇ ಅರಬರಿಗೆ
ತತ್ತ್ವನಿರೂಪಣೆಯ ಕಡೆಗೆ ಲಕ್ಷ್ಯವಿರಲಿಲ್ಲ. ಯುರೋಪಿನ ನವಜನಾಂಗ ಇವ
ರಿಬ್ಬರ ಸತ್ವಗಳನ್ನೂ ಹೀರಿಕೊಂಡು ಕ್ರಮಪಾದ ತಳಹದಿಯ ಮೇಲೆ ವಿಚಾರ
ದೃಷ್ಟಿಯನ್ನು ಬೆಳಸಿಕೊಂಡು ವಿಜ್ಞಾನಶಾಸ್ತ್ರದ ಬೆಳ
ಯೂರೋಪಿನವರು ಕಣ್ಣುಕಂಡಿತು ಯುರೋಪಿನಲ್ಲುಂಟಾದ ನವೋದಯದ
ಕಾಲದಲ್ಲಿ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಪ್ರಗತಿಪರ
ಭಾವನೆ ಮೂಡಿ, ಹಿಂದಿನ ನಂಬಿಕೆಗಳು ವಿಚಾರಸಮ್ಮತವೇ ಎಂದು ವಿಮರ್ಶೆ
ಗೆಡೆಗೊಟ್ಟಿತು. ಹೀಗೆ ಜನಜೀವನದಲ್ಲಿ ವಿಜ್ಞಾನದೃಷ್ಟಿ ಎರಡು ಸಹಸ್ರ
ವರ್ಷಗಳಿಂದಲೂ ಕುಂಠಿತವಾಗಿದ್ದು ಮತ್ತೊಮ್ಮೆ ವಿದ್ಯುದ್ವೇಗದಿಂದ ಬೆಳೆ
ಯುವಂತಾಯಿತು. ನವೋದಯ ಕಾಲದ ವಿಜ್ಞಾನಕ್ಷೇತ್ರದ ಮಹಾವ್ಯಕ್ತಿ
ಗಳಲ್ಲಿ ಲಿಯನಾರ್ಡೊ ಮತ್ತು ಕೋಪರ್ನಿಕಸ್ ಎಂಬಿಬ್ಬರ ಹೆಸರನ್ನು ಹೇಳ
ಬಹುದು. ಲಿಯನಾರ್ಡೊ ಭೂಮಿಯಲ್ಲಿ ಹುದುಗಿದ್ದ ಗತಕಾಲದ ಪ್ರಾಣಿ

ಗಳ ಅವಯುವಶೇಷಗಳನ್ನು ತೆಗೆದು ಹಿಂದಿನ ಪ್ರಾಣಿಗಳಿಗೂ ಈ ದಿನದ ಅದೇ ಜಾತಿಯ ಪ್ರಾಣಿಗಳಿಗೂ ಇದ್ದ ಸಾಮ್ಯಾಸಾಮ್ಯಗಳನ್ನು ತೋರಿಸಿ ಕೊಟ್ಟು, ಬೈಬಲ್ ಹೇಳುವಂತೆ ಜೀವಜಾತಿಗಳು ಸ್ಥಿರವಾಗಿರುವುದಿಲ್ಲ ವೆಂಬುದನ್ನು ಪ್ರಚುರಪಡಿಸಿದನು. ಕೋಪರ್ನಿಕಸ್ಸನು ಅರಿಸ್ಟಾಟ್ಲನ ತತ್ತ್ವ ವನ್ನು ಖಂಡಿಸಿ ಆ ಮೂಲಕ ಬೈಬಲ್ಲಿನಲ್ಲಿದ್ದ ಹಲವು ವಾಕ್ಯಗಳನ್ನು ಸುಳ್ಳೆಂದು ತೋರಿಸಿದನು. ಅವರನಂತರ ೧೫೬೪ರಿಂದ ೧೬೪೨ರವರೆಗೂ ಬದುಕಿದ್ದ

**ಗೆಲಿಲಿಯೋ**

ಗೆಲಿಲಿಯೋ ಎಂಬ ರೋಮಿನ ವಿಜ್ಞಾನಿ ಹಿಂದಿನ ಅರಿಸ್ಟಾಟ್ಲ್ ಮೊದಲಾದ ಅನೇಕ ಆಚಾರ್ಯಪುರುಷರ ತತ್ತ್ವಜ್ಞಾನವನ್ನು ತಲೆಕೆಳಗು ಮಾಡಿಬಿಟ್ಟನು. ಅವನ ಸಮಕಾಲೀನನಾದ ಕೆಪ್ಲರ್ ಎಂಬ ಮತ್ತೊಬ್ಬ ವಿಜ್ಞಾನಿ ಅವನ ಆ ಕಾರ್ಯದಲ್ಲಿ ಬಹುವಾಗಿ ನೆರವಾದನು. ಅರಿಸ್ಟಾಟ್ಲ್ ನುಡಿದಿದ್ದ 'ಭೂಮಿ ಮತ್ತು ಇತರ ಗ್ರಹಗಳು ಸೂರ್ಯನ ಸುತ್ತ ಚಕ್ರಾಕಾರವಾಗಿ ಸುತ್ತುತ್ತವೆ' ಎಂಬುದು ಸರಿಯಲ್ಲವೆಂದೂ ಅವು ಅಂಡಾಕಾರವಾಗಿ ಸುತ್ತುತ್ತವೆಂದೂ ಪ್ರಕಟಿಸಿದನು. 'ಅತಿಮಾನುಷವೂ, ದೈವಾಂಶವೂ ಎಂದು ಗಣಿಸಿದ್ದ ಗ್ರಹಗಳು ವಕ್ರಾಕಾರವಾಗಿ ಸುತ್ತುವುದೆಂದರೇನು?' ಎಂದು ಸಮಾಜ ಆಗ್ರಹಗೊಂಡಿತು. ಜೊತೆಗೆ ಗೆಲಿಲಿಯೋ ದೂರ ದರ್ಶಕ ಯಂತ್ರವೊಂದನ್ನು ತಯಾರಿಸಿ, ಗ್ರಹ ತಾರೆಗಳನ್ನು ಜನರಿಗೆ ತೋರಿಸಿಕೊಟ್ಟು, ಪ್ರಯೋಗಸಾಕ್ಷಿಯಾಗಿ ಹಿಂದಿನವರ ಹಲವು ಅಭಿ ಪ್ರಾಯಗಳನ್ನು ಖಂಡಿಸಿದನು. ಪ್ರಾಚೀನ ಗ್ರೀಕರು ಯಾವ ಪ್ರಯೋಗ ಪರೀಕ್ಷೆಗಳನ್ನು ಪಾಪಕರವೆಂದು ಘೋಷಿಸಿದ್ದರೋ ಆ ಕಾರ್ಯವನ್ನು ಅವನು ನಡೆಸಿದ್ದಕ್ಕಾಗಿ ಅವರು ಗೆಲಿಲಿಯೋವಿನ ದೂರದರ್ಶಕಯಂತ್ರವೇ ತಪ್ಪು ಸೃಷ್ಟಿಯೆಂದು ಸಾರಿ ಅವನಿಗೆ ಶಿಕ್ಷೆ ವಿಧಿಸಿದರು. ಅವನನ್ನು ಶಿಕ್ಷಿಸಿದ್ದರಿಂದ ಜನಜೀವನದಲ್ಲಿ ಬೆಳೆಯಲನುವಾಗಿದ್ದ ವಿಚಾರಪ್ರೇಮವನ್ನು ತಡೆಯು ಲಾಗಲಿಲ್ಲ. ಅವನಿಗೆ ಕೊಟ್ಟ ಶಿಕ್ಷೆ ಕೇವಲ ಒಂದು ವ್ಯಕ್ತಿಗೆಂದು ಯಾರೂ ಭಾವಿಸಲಿಲ್ಲ. ಅದು ಮತಪೀಠದವರು ವಿಚಾರಪರರ ಮೇಲೆತ್ತಿದ ಗದಾಘಾತವೆಂದು ಗಣನೆಗೆ ಬಂತು. ಆಗ ಯುರೋಪಿನಲ್ಲಿ ಗೆಲಿಲಿಯೋವಿ ನಂಥ ಪ್ರಗತಿಪರ ತತ್ತ್ವಜ್ಞಾನಿಗಳು ಕೆಲವೇ ಮಂದಿ ಇದ್ದರೆಂದೂ ಅವರೆಲ್ಲ

ರನ್ನೂ ಶಿಶುತ್ವದಲ್ಲೇ ನಾಶಮಾಡಿದ್ದ ಪಕ್ಷದಲ್ಲಿ ವಿಜ್ಞಾನದ ಬೆಳವಣಿಗೆ ಬಹುವಾಗಿ ಕುಂಠಿತವಾಗುತ್ತಿತ್ತೆಂದೂ ಹಲವರು ಹೇಳುವರು. ಹೇಗೇ ಆಗಲಿ, ನವೋದಯದನಂತರ ಎಚ್ಚರಗೊಂಡ ಯೂರೋಪು ಸಾಂಪ್ರದಾಯಿಕ ನಂಬಿಕೆಗಳನ್ನು ನಿರ್ದಾಕ್ಷಿಣ್ಯವಾಗಿ ಬೆದಕಿ ನೋಡಲು ಶಕ್ತವಾಯಿತು ; ವಿಜ್ಞಾನಯುಗದ ಅರುಣೋದಯ ಜನಜೀವನವನ್ನು ಬೆಳಗಿಸುವಂತಾಯಿತು. ಮತಪ್ರೇಮಿಗಳನೇಕರು ಹೊಸದೃಷ್ಟಿಯನ್ನು ಬಹಿರಂಗವಾಗಿ ಪ್ರತಿಭಟಿಸುತ್ತಿದ್ದರೂ ಒಳಗೊಳಗೆ ಅದರ ಸತ್ಯದೃಷ್ಟಿಯನ್ನು ಒಪ್ಪಿಯೇ ಇದ್ದರು. ಗೆಲಿಲಿಯೋವಿನ ಸಾಹಸವನ್ನು ಕಂಡು ಕ್ರಮಕ್ರಮವಾಗಿ ವಿಜ್ಞಾನದೃಷ್ಟಿ ಬೆಳೆಯಲವಕಾಶವಾಯಿತು. ಈ ದೃಷ್ಟಿಯಿಂದ ನೋಡಿದರೆ ಗೆಲಿಲಿಯೋ ವಿಜ್ಞಾನಯುಗದ ಪಿತಾಮಹನೆಂದು ಹೇಳಬಹುದು.

ವಿಜ್ಞಾನಯುಗದ ಇನ್ನೊಬ್ಬ ಸೀಮಾಪುರುಷನೆನಿಸಿಕೊಂಡ ನ್ಯೂಟನ್ (ಕ್ರಿ. ಶ. ೧೬೪೨-೧೭೨೭) ಗೆಲಿಲಿಯೋ ಸತ್ತವರ್ಷವೇ ಹುಟ್ಟಿದನು.

**ನ್ಯೂಟನ್**

ಎಲ್ಲ ಗ್ರಹಗಳೂ ಒಂದು ಆಕರ್ಷಣ ಶಕ್ತಿಗೊಳಪಟ್ಟು ಚಲಿಸುತ್ತವೆಂಬುದನ್ನು ಪ್ರಕಟಿಸಿದುದಲ್ಲದೆ ಅವನು ಚಲನೆಗೆ ಸಂಬಂಧಿಸಿದ ತನ್ನ ಮೂರು ವಿಖ್ಯಾತ ತತ್ವಗಳನ್ನೂ ಪ್ರಕಟಿಸಿದನು. ಗೆಲಿಲಿಯೋ ಸಾಧಿಸಲಾಗದಿದ್ದ ಅಥವ ತಪ್ಪಿದ್ದ ಹಲವಂಶಗಳನ್ನು ಸಂಶೋಧಿಸಿ ಪ್ರಸಿದ್ಧಿಪಡಿಸಿದನು.

ಅಂದಿನವರೆಗೂ ಜೀವಶಾಸ್ತ್ರದಲ್ಲಿ ಅಂಥ ಮಹತ್ತರ ಸಂಶೋಧನೆಗಳಾಗಿರಲಿಲ್ಲ. ಸಮಾಜದಲ್ಲಿ ಜೀವಕ್ಕೆ ಸಂಬಂಧಿಸಿದ ಹಲವು ಸಮಸ್ಯೆಗಳು ವಿಜ್ಞಾನ

**ಡಾರ್ವಿನ್**

ದೃಷ್ಟಿಯಿಂದ ಪರಿಹಾರಗೊಂಡಿರಲಿಲ್ಲ. ಆ ಕಾರ್ಯವನ್ನು ಚಾರ್ಲ್ಸ್ ಡಾರ್ವಿನ್ ನೆರವೇರಿಸಿ ವಿಜ್ಞಾನಯುಗದ ಮತ್ತೊಬ್ಬ ಸೀಮಾಪುರುಷನೆನಿಸಿಕೊಂಡನು.

## ೨. ಡಾರ್ವಿನ್ನನ ಮನೆತನ, ಬಾಲ್ಯ ಮತ್ತು ವಿದ್ಯಾಭ್ಯಾಸ

ಕ್ರಿಸ್ತಶಕ ೧೮೦೯ ನೆಯ ವರ್ಷದಲ್ಲಿ ಮಹಾಪುರುಷರನೇಕರು ಜನ್ಮವೆತ್ತಿದರು. ಅವರೆಲ್ಲರೂ ಒಂದಲ್ಲ ಒಂದು ವಿಧದಲ್ಲಿ ಜನಜೀವನಕ್ಕೆ ಹೊಸ ಹುರುಪನ್ನು ತುಂಬಿ, ವಿಶ್ವಕಲ್ಯಾಣವನ್ನು ಸಾಧಿಸಿದರು. ರಾಜಕಾರಣ ಪಟುಗಳಾಗಿ ಬಾಳಿ, ಜಗದ್ವಿಖ್ಯಾತರಾದ ಏಬ್ರಹಾಂ ಲಿಂಕನ್ ಮತ್ತು ಗ್ಲಾಡ್‌ಸ್ಟನ್ ಉದಿಸಿದುದು ಆ ವರ್ಷದಲ್ಲೇ. ಆಂಗ್ಲ ಸಾಹಿತ್ಯಗಗನದಲ್ಲಿ ಧ್ರುವತಾರೆಯಂತೆ ವಿರಾಜಿಸುತ್ತಿರುವ ಕವಿಪುಂಗವ ಟೆನ್ನಿಸನ್ನನೂ, ಫಿಟ್ಸ್‌ಜರಾಲ್ಡ್, ಎಡ್ಗರ್ ಅಲ್ಲನ್ ಪೋ, ಎಲಿಜಬೆತ್ ಮಾರ್ಗರೆಟ್ ಬ್ರೌನಿಂಗ್ ಮುಂತಾದ ಪ್ರಸಿದ್ಧ ಸಾಹಿತಿಗಳೂ, ಜರ್ಮನಿಯ ಸಂಗೀತ ವಿಶಾರದನಾದ ಮೆಂಡಲ್‌ಷಾನನೂ ಹುಟ್ಟಿದುದು ಆ ವರ್ಷವೇ. ಲಿಂಕನ್ನನು ಹುಟ್ಟಿದ ದಿನವೇ ಚಾರ್ಲ್ಸ್ ಡಾರ್ವಿನ್ನನೂ ಹುಟ್ಟಿದನು. ಡಾರ್ವಿನ್ನನನ್ನು ಮೇಲಣ ಯಾವ ವ್ಯಕ್ತಿಯೊಡನೆಯೂ ಹೋಲಿಸಲಾಗದಿದ್ದರೂ, ಅದೇ ದಿನ ಉದಿಸಿದ ಲಿಂಕನ್ನನೊಡನೆ ಹೋಲಿಸಬಹುದು. ಅಮೆರಿಕದಲ್ಲಿ ಅಂದು ಪ್ರಚಾರದಲ್ಲಿದ್ದ ದಾಸ್ಯವನ್ನು ನಿರ್ಮೂಲಮಾಡಿ ಲಿಂಕನ್ನನು ಮಾನವ ಕುಲೋದ್ಧಾರಕನಾದಂತೆ ಡಾರ್ವಿನ್ ಶತಶತಮಾನಗಳಿಂದ ಜನಮನವನ್ನು ಬಿಗಿದಿದ್ದ ಮೌಢ್ಯವನ್ನು ಹರಿದು ಜ್ಞಾನಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟನು.

ಡಾರ್ವಿನ್ ಜನ್ಮವೆತ್ತಿದುದು ಯೂರೋಪಿನ ಸಂಸ್ಕೃತಿಯ ಇತಿಹಾಸದ ಸಂದಿಗ್ಧ ಸಮಯದಲ್ಲಿ. ಅಂದಿಗಾಗಲೇ ವಿಜ್ಞಾನದೃಷ್ಟಿ ಜೀವನದ ಎಲ್ಲ ರಂಗಗಳ ಮೇಲೂ ಬಿದ್ದು ವಿಚಾರಕ್ರಾಂತಿಯ ಯುಗ ಆರಂಭವಾಗಿತ್ತು. ಹೊಸ ಶೋಧನೆಗಳು ನಡೆದು ಹೊಸಹೊಸ ಜೀವನ ಮಾರ್ಗಗಳು ಗೋಚರವಾಗಲು ಮೊದಲಾಗಿತ್ತು. ವಿವಿಧ ರೀತಿಯ ಪ್ರಚಾರಕ್ರಮಗಳು ಹುಟ್ಟಿಕೊಂಡು ಮೂಲೆಮೂಲೆಗೂ ನವೋದಯದ ಹೊಂಬೆಳಕು ಬೀಳಲು ಅನುಕೂಲವಾಗಿತ್ತು. ಒಬ್ಬೊಬ್ಬರಲ್ಲೇ ಹುದುಗಿ ತುಕ್ಕು ಹಿಡಿಯುತ್ತಿದ್ದ ಜ್ಞಾನವನ್ನು ಎಲ್ಲರೂ ಅನುಭವಿಸಲು ಅವಕಾಶವಾಯಿತು. ಯಾವ ವಿಷಯವನ್ನು ತೆಗೆದುಕೊಂಡರೂ ಅದನ್ನು ವಿಚಾರ ದೃಷ್ಟಿಯಿಂದ ವಿಮರ್ಶಿಸಿ, ವಿಜ್ಞಾನಸಮ್ಮತವಾದುದೇ ಎಂದು ಪರೀಕ್ಷಿಸುವ ಕಾಲ ಒದಗಿತು. ಸನಾತನ

ಕಾಲದಿಂದಲೂ ಪವಿತ್ರವೆಂದು ಗಣಿಸಿದ್ದ ಮೂಢ ನಂಬಿಕೆಗಳು ನಿರ್ದಾಕ್ಷಿಣ್ಯವಾಗಿ ವಿಮರ್ಶಿತವಾಗಿ ಅವುಗಳ ಪೊಳ್ಳುತನ ಹೊರಬೀಳಲು ಅವಕಾಶವಾಯಿತು. ನವಜೀವನರಂಗದಲ್ಲಿ ವಿಜ್ಞಾನಕ್ಕೆ ಹೆಚ್ಚು ಹೆಚ್ಚು ಗೌರವ ದೊರೆಯಿತು. ಅಂದಿನವರೆಗೂ ಜನರ ತತ್ವದೃಷ್ಟಿಯನ್ನು ಪೋಷಿಸಿದ್ದ ಮತ ಧರ್ಮದ ಸ್ಥಳದಲ್ಲಿ ವಿಜ್ಞಾನ ಪ್ರತಿಭಟಿಸಿ ಬಂದು ನಿಂತಿತು. ಮಾನವನಿಗೂ ಪ್ರಕೃತಿಗೂ ಇರುವ ನಿಜವಾದ ಬಾಂಧವ್ಯವನ್ನು ವಿಜ್ಞಾನ ತೋರಿಸಿಕೊಟ್ಟು, ಜೀವ ಜಡಗಳಿಗಿರುವ ಅಂತರವನ್ನು ಬೆಸೆಯುವ ಮಹಾಕಾರ್ಯ ಆಗಲೇ ಅಂಕುರವಾಗಿತ್ತು. ಒಟ್ಟಿನಲ್ಲಿ ಹೇಳುವುದಾದರೆ ವಿಜ್ಞಾನ ಬೆಳೆದಂತೆಲ್ಲ ಹೊಸ ತತ್ವದೃಷ್ಟಿಯೊಂದು ರೂಪಗೊಳ್ಳುತ್ತಾ ಬಂದಿತು. ಅಂಥ ಪರಿವರ್ತನ ಸಮಯದಲ್ಲಿ ಡಾರ್ವಿನ್ ಜನ್ಮವೆತ್ತಿ ಸುಮಾರು ಅರ್ಧ ಶತಮಾನದವರೆಗೂ ವಿಜ್ಞಾನರಂಗದಲ್ಲಿ ದುಡಿದು ಮೌನವಾಗಿ ಬಾಳಿ ಜನಜೀವನದಲ್ಲಿ ವಿಚಾರ ಕ್ರಾಂತಿಯ ಬೆಳಕನ್ನು ಬೀರಿ ಮಹಾಪುರುಷನಾದನು.

ಡಾರ್ವಿನ್ನನ ಪೂರ್ವಿಕರು ಲಿಂಕನ್‌ಷೈರಿಗೆ ಸೇರಿದವರು. ಅವರು ಹದಿನಾರನೆಯ ಶತಮಾನದ ಆದಿಯಿಂದಲೂ ಇಂಗ್ಲೆಂಡಿನ ಸಾರ್ವಜನಿಕ ಜೀವನದಲ್ಲಿ ವಿವಿಧ ರೂಪದಲ್ಲಿ ದುಡಿದು ಪ್ರಖ್ಯಾತರಾಗಿದ್ದರು. ಕ್ರಾಮ್ವೆಲ್ಲನ ಕಾಲದಿಂದ ಆ ವಂಶದ ಮೂರು ಸಂತತಿಯವರು ಬ್ಯಾರಿಸ್ಟರ್ ವೃತ್ತಿಯನ್ನವಲಂಬಿಸಿ ಪ್ರಖ್ಯಾತರಾಗಿದ್ದುದಲ್ಲದೆ ರಾಜಕೀಯರಂಗದಲ್ಲಿ ದುಡಿದು, ಹೋರಾಟ ನಡೆಸಿ ಅಖಂಡ ಪ್ರಗತಿಯನ್ನುಂಟುಮಾಡಿದ್ದರು. ಆ ಮನೆತನದ ಮೂರನೆಯ ಸಂತತಿಯವನು ತನ್ನ ಬ್ಯಾರಿಸ್ಟರ್ ವೃತ್ತಿಯನ್ನುಳಿದು ವಿಜ್ಞಾನಕಾತರನಾಗಿ ಎಲ್‌ಸ್ಟನ್ ಪ್ರದೇಶದಲ್ಲಿದ್ದ ತನ್ನ ಭೂಮಿಯನ್ನು ನೋಡಿಕೊಳ್ಳಲು ಗ್ರಾಮ ಜೀವನಕ್ಕೆ ತೆರಳಿದನು. ಆವನ ಹೆಂಡತಿ ಸಾಹಿತ್ಯಪ್ರೇಮಿಯಾಗಿದ್ದುದಲ್ಲದೆ ಕಲೆಯಲ್ಲೂ ಅಭಿರುಚಿಯುಳ್ಳವಳಾಗಿದ್ದಳು. ಈ ಸುಸಂಸ್ಕೃತ ದಂಪತಿಗಳಿಗೆ ಇಬ್ಬರು ಮಕ್ಕಳಾದರು. ಕಿರಿಯವನೇ ಪ್ರಸಿದ್ಧಿ ಪಡೆದ ಇರಾಸ್ಮಸ್ ಡಾರ್ವಿನ್.

ಡಾರ್ವಿನ್ನನ ಪೂರ್ವಿಕರು

ನಮ್ಮ ಕಥಾನಾಯಕನ ತಾತನಾದ ಇರಾಸ್ಮಸ್ಸನು ೧೮ ನೆಯ ಶತಮಾನದ ಆದಿಯಲ್ಲಿ ಲಿಚ್‌ಫೀಲ್ಡ್ ಎಂಬ ನಗರದಲ್ಲಿ ವೈದ್ಯನಾಗಿದ್ದನು.

ಅವನು ತನ್ನ ವ್ಯಕ್ತಿನಿಪುಣತೆಯಿಂದ ಸುತ್ತಮುತ್ತಣ ಊರಿನ ಜನರ ಅನು ರಾಗವನ್ನೂ ಮೆಚ್ಚಿಗೆಯನ್ನೂ ಪಡೆದಿದ್ದನು. ಆಗ ಇರಾಸ್ಮಸ್ ಡಾರ್ವಿನ್ ಬ್ರಿಟಿಷ್ ಸಾಮ್ರಾಟನಾಗಿದ್ದ ಮೂರನೆಯ ಜಾರ್ಜನೇ ಅವನ ಪ್ರತಿಭಾಶಕ್ತಿಗೂ ಕಾರ್ಯಚತುರತೆಗೂ ಮೆಚ್ಚಿ ಲಂಡನ್ನಿಗೆ ಬಂದು ಅರಮನೆಯ ವೈದ್ಯನಾಗಿರುವಂತೆ ಆಹ್ವಾನಿಸಿದ್ದನು. ಆದರೆ ಇರಾಸ್ಮಸ್ಸನು ಲಿಚ್‌ಫೀಲ್ಡಿನಲ್ಲೊಂದು ಸಸ್ಯಾಲಯವನ್ನೇರ್ಪಡಿಸಿಕೊಂಡು ಸಂಶೋಧನೆ ನಡಸುತ್ತಿದ್ದುದರಿಂದ ತನ್ನ ಎರಡನೆಯ ವಿವಾಹವಾಗುವವರೆಗೂ ಅಲ್ಲಿಯೇ ಉಳಿಯಬೇಕಾಯಿತು.

ಡಾರ್ವಿನ್ನರ ಸಂತತಿಯಲ್ಲಿ ವಿಜ್ಞಾನಪಥವನ್ನು ಹಿಡಿದು ವಿಖ್ಯಾತರಾದವರಲ್ಲಿ ಇರಾಸ್ಮಸ್ಸನೇ ಮೊದಲನೆಯವನು. ಅವನಿಗೆ ಪ್ರಕೃತಿಯೆಂದರೆ ತುಂಬ ಪ್ರೇಮ. ಅದರಲ್ಲಡಗಿರುವ ತತ್ತ್ವಗಳನ್ನು ಎರಡು ವಿಧದಲ್ಲಿ ಹುಡುಕುತ್ತಿದ್ದನು: ಒಂದು ಕಡೆ ಸಸ್ಯ ಮತ್ತು ಪ್ರಾಣಿಗಳ ಅಂಗರಚನಾದಿ ವೈಚಿತ್ರ್ಯಗಳನ್ನು ವಿಜ್ಞಾನ ದೃಷ್ಟಿಯಿಂದಲೂ, ಇನ್ನೊಂದು ಕಡೆ ಸೃಷ್ಟಿಯ ತತ್ತ್ವಾರ್ಥಗಳನ್ನು ಕಾವ್ಯದೃಷ್ಟಿಯಿಂದಲೂ ವಿಮರ್ಶಿಸುತ್ತಿದ್ದನು. 'ಸಸ್ಯಾಲಯ' ಎಂಬ ತನ್ನ ಗ್ರಂಥವೊಂದರಲ್ಲಿ ಸಸ್ಯವಿಜ್ಞಾನವನ್ನು ಕಾವ್ಯವಾಣಿಯಲ್ಲಿ ಹಾಡಿರುವನು. 'ನಿಸರ್ಗದೇಗುಲ' ವೆಂಬ ಇನ್ನೊಂದು ಗ್ರಂಥದಲ್ಲಿ ಸಮಾಜದ ಹುಟ್ಟನ್ನು ವಿವರಿಸಿರುವನು. 'ಜೀವ ಜಂತುಗಳ ನಿಯಮ' ವೆಂಬ ಮತ್ತೊಂದು ವಿಜ್ಞಾನ ಗ್ರಂಥವನ್ನು ವಚನದಲ್ಲೂ ರಚಿಸಿರುವನು. ಹೀಗೆ ವಿಜ್ಞಾನ ಮತ್ತು ಕಲೆ ಒಬ್ಬನಲ್ಲಿ ಹೆಣೆದುಕೊಂಡಿರುವುದು ಅಪರೂಪ. ಮೇಲಾಗಿ, ವಿಜ್ಞಾನದ ವಿಷಯವನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡರೆ ಕೃತಿ ನೀರಸವಾಗುವುದೆಂದು ಅನೇಕರು ಭಾವಿಸುವರು. ಇರಾಸ್ಮಸ್ಸನು ತನ್ನ ಸಂಶೋಧನೆಗಳನ್ನು ಕಾವ್ಯದಲ್ಲಿ ಹಾಡಿ ವಿಜ್ಞಾನಕವಿಯಾದುದಲ್ಲದೆ ಆಂಗ್ಲ ಸಾಮ್ರಾಟನ ಆಶ್ರಯದ ಕವಿಯಾಗಿ ಮನ್ನಣೆಯನ್ನೂ ಪಡೆದಿದ್ದನು. ಆಂಗ್ಲ ಸಾಹಿತ್ಯದಲ್ಲವನು ಉತ್ತಮ ಕವಿಯೆನಿಸದಿದ್ದರೂ ಅವನ ಕವಿತೆಗಳು ಹೊಸ ಹುಟ್ಟಿನವು ಜರ್ಮನಿಯ ಕೀರ್ತಿಯ ಕವೀಶ್ವರನಾದ ಗಯಟೆಯಂತೆ ಇರಾಸ್ಮಸ್ಸನೂ ಸೃಷ್ಟಿ ಸರಳರೂಪದಿಂದ ಸಂಕೀರ್ಣ ರೂಪವನ್ನು ತಾಳಿತೆಂಬ ವಿಕಾಸದೃಷ್ಟಿಯನ್ನು ತನ್ನ ಕೃತಿಗಳಲ್ಲಿ ಸಾರಿರುವನು. ಅವನ

ಕಾವ್ಯರಾಶಿಯಲ್ಲಿ ಕಲಾದೇವಿಯೂ ವಿಜ್ಞಾನದೇವಿಯೂ ಸಮ್ಮಿಳಿತರಾಗಿ ಒಗ್ಗೊರಲಿನಿಂದ ಹಾಡುತ್ತಿರುವ ಭವ್ಯವಾಣಿ ಕೇಳಬರುತ್ತದೆ. ಅಂದಿನ ವಿಜ್ಞಾನಿಗಳಲ್ಲನೇಕರು 'ಜೀವಿಗಳು ಆದಿಯಲ್ಲಿ ಸೃಷ್ಟಿಯಾದ ರೂಪದಲ್ಲೇ ಇವೆ' ಎಂಬ ಬೈಬಲಿನಲ್ಲಿ ಹೇಳಿರುವ ಸೃಷ್ಟಿಕ್ರಮವನ್ನು ನಂಬಿದ್ದರು. ಅಂಥ ಸಮಯದಲ್ಲಿ ಇರಾಸ್ಮಸ್ಸನು ಮತವಾದಿಗಳ ಆಗ್ರಹಕ್ಕೆ ಬೆದರದೆ 'ಸೃಷ್ಟಿ ವಿಕಾಸಾತ್ಮಕವಾದುದು' ಎಂದು ವಿಜ್ಞಾನದೃಷ್ಟಿಯನ್ನು ಪ್ರತಿಪಾದಿಸಿ ಬೈಬಲ್ಲನ್ನು ಪ್ರತಿಭಟಿಸಿ ನಿಂತನು. ಆದರೆ ತನ್ನ ವಾದವನ್ನು ಸಾಕ್ಷ್ಯಗಳಿಂದ ಸಿದ್ಧಪಡಿಸಲು ಸಾಧ್ಯವಾಗಲಿಲ್ಲ. ಮೇಲಾಗಿ ಆ ವಿಚಾರವನ್ನು ಬರಮಾಡಿಕೊಂಡು ಒಪ್ಪಿಕೊಳ್ಳಲು ಕಾಲವೂ ಸಿದ್ಧವಾಗಿರಲಿಲ್ಲ. ಹಾಗೆ ಆತನು ಸಲಹೆಯ ರೂಪದಲ್ಲಿ ಪ್ರತಿಪಾದಿಸಿದ್ದ ವಿಕಾಸತತ್ವವನ್ನು ಮುಂದೆ ಅವನ ಮೊಮ್ಮಗನೇ ಸಿದ್ಧಾಂತಪಡಿಸಿ ಪ್ರಚಾರಮಾಡಿದುದು ಆಶ್ಚರ್ಯವೆನಿಸುತ್ತದೆ.

**ರಾಬರ್ಟ್ ವಾರಿಂಗ್ ಡಾರ್ವಿನ್**

ಇರಾಸ್ಮಸ್ಸನ ಮೊದಲನೆಯ ಹೆಂಡತಿಯಾದ ಮೇರಿ ಓವಾಲ್ಡಳ ಹೊಟ್ಟೆಯಲ್ಲಿ ರಾಬರ್ಟ್ ವಾರಿಂಗ್ ಡಾರ್ವಿನ್ ಹುಟ್ಟಿದನು. ಅವನು ಬಾಲ್ಯದಿಂದಲೂ ತನ್ನ ತಂದೆಯ ಪರಮಮಿತ್ರರಾದ ವೆಡ್ಜ್‌ವುಡ್ ಮನೆತನದವರೊಡನೆ ಕಲಿತು ಆಟಪಾಟಗಳಲ್ಲಿ ಭಾಗವಹಿಸುತ್ತಿದ್ದನು. ಅವರಲ್ಲಿ ಜೋಸೇಯಿ ವೆಡ್ಜ್‌ವುಡ್ ಎಂಬವನನ್ನು ಕಂಡರೆ ರಾಬರ್ಟನಿಗೆ ತುಂಬ ಪ್ರೇಮ. ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ವೈದ್ಯವಿದ್ಯೆಯಲ್ಲಿ ಪದವೀಧರನಾಗಿ ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳಲ್ಲಿ ಸಂಚರಿಸಿ ರಾಬರ್ಟನು ತನ್ನ ಜ್ಞಾನಭಂಡಾರವನ್ನು ಹೆಚ್ಚಿಸಿಕೊಂಡನು. ೧೭೮೬ರಲ್ಲಿ ಷ್ರೂಸ್ಬರಿಯೆಂಬ ನಗರದಲ್ಲಿ ವೈದ್ಯಾಲಯವನ್ನು ತೆರೆದು ವೃತ್ತಿನಿರತನಾದನು. ತನಗಿದ್ದ ಜನಾನುರಾಗದಿಂದಲೂ, ವೃತ್ತಿನೈಪುಣ್ಯದಿಂದಲೂ ತನ್ನ ತಂದೆಯಂತೆ ಪ್ರಖ್ಯಾತನಾದನು. ಆದರೆ ಇರಾಸ್ಮಸ್ಸನಂತೆ ರಾಬರ್ಟನಿಗೆ ಶುದ್ಧವಿಜ್ಞಾನದಲ್ಲಾಗಲಿ ಕಾವ್ಯಕಲೆಯಲ್ಲಾಗಲಿ ಆಸಕ್ತಿಯಿರಲಿಲ್ಲ. ತನ್ನ ಜೀವನವನ್ನೆಲ್ಲ ವೈದ್ಯವೃತ್ತಿಯಲ್ಲೇ ಕಳೆದು ಆ ಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಸಂಶೋಧನೆಗಳನ್ನು ನಡೆಸಿ ಪ್ರಕಟಿಸಿದನು. ರೋಗಿಗಳಿಗೆ ಚಿಕಿತ್ಸೆಗಾರಂಭಿಸುವ ಮುನ್ನ ಅವರ ಮನಸ್ಸಿನಲ್ಲಿ ರೋಗನಿವಾರಣೆಯಾಗುವದೆಂಬ ನಂಬಿಕೆಯನ್ನು ಹುಟ್ಟಿಸುವುದು ವೈದ್ಯನ

ಮೊದಲ ಕೆಲಸವೆಂದು ರಾಬರ್ಟನು ಹೇಳುತ್ತಿದ್ದನು. ಅವನು ಸೂಕ್ಷ್ಮಜ್ಞಾನಿ; ಸಮಾಜಪ್ರೇಮಿ; ವೈದ್ಯವೃತ್ತಿಯಿಂದಲೇ ಜೀವಿಸುತ್ತಿದ್ದರೂ ಬಡಬಗ್ಗರಿಗೆ ಉಚಿತವಾಗಿ ಚಿಕಿತ್ಸೆ ನಡೆಸುತ್ತ ಉದಾರಿಯಾಗಿದ್ದನು.

**ರಾಬರ್ಟನ ವಿವಾಹ**

ಡಾರ್ವಿನ್ನರ ಪರಮ ಮಿತ್ರನಾದ ಜೋಸೇಯಿ ವೆಡ್ಜ್‌ವುಡ್ಡನಿಗೆ ಸುಸಾನಳೆಂಬ ಮಗಳಿದ್ದಳು. ಅವಳು ೧೭೬೫ ರಲ್ಲಿ ಬ್ರಸ್ಲೇಮಿನಲ್ಲಿ ಹುಟ್ಟಿ, ಲಂಡನ್ನಿನಲ್ಲಿ ಶಿಕ್ಷಣ ಪಡೆದಿದ್ದಳು. ಅನೇಕ ಗ್ರಂಥಗಳನ್ನು ಓದಿ ಪ್ರತ್ಯೇಕವಾಗಿ ಜ್ಞಾನಾರ್ಜನೆ ಮಾಡಿದ್ದಳು. ದೇಶಾದ್ಯಂತವೂ ಸಂಚರಿಸಿ ಅಪಾರ ಅನುಭವವನ್ನು ಪಡೆದಿದ್ದಳು. ಅವಳ ತಂದೆಯ ಸಾಹಸ ಸಹನೆಗಳೂ ಶ್ರಮಸಹಿಷ್ಣುತೆಯೂ ಕಲಾಕೌಶಲ್ಯವೂ ಅವಳಲ್ಲೂ ಮೂರ್ತಿವತ್ತಾಗಿ ಪ್ರತಿಬಿಂಬಿಸಿದ್ದುವು. ರಾಬರ್ಟನೂ ಅವಳೂ ಬಾಲ್ಯದಿಂದಲೂ ಆಟವಾಡುತ್ತ ಒಬ್ಬರೊಡನೊಬ್ಬರು ಮಿಳಿತು ಪರಿಚಿತರಾಗಿದ್ದರು. ಇರಾಸ್ಮಸ್ಸನಿಗೆ ಅವಳಲ್ಲಿ ತುಂಬ ಆಸಕ್ತಿ. ಒಟ್ಟಿನಲ್ಲಿ ದಕ್ಷವೈದ್ಯನಾದ ರಾಬರ್ಟನಿಗೆ ಸುಶಿಕ್ಷಿತಳಾದ ಸುಸಾನಳು ತಕ್ಕ ಕನ್ಯೆಯಾಗಿದ್ದಳು. ೧೭೯೬ರಲ್ಲಿ ರಾಬರ್ಟನು ಸುಸಾನಳನ್ನು ಮದುವೆಯಾದನು.

ಸ್ವತಂತ್ರವಾಗಿ ಗಳಿಸಿದ್ದ ತನ್ನ ಹಣದಿಂದ ಷ್ರೂಸ್ಬರಿಯಲ್ಲೊಂದು ಸ್ಥಳವನ್ನು ಕೊಂಡುಕೊಂಡು ಆತನು ಹೊಸದಾಗಿ ಮನೆಯನ್ನು ಕಟ್ಟಿಸಿದನು. ಅನಂತರ ಸುಸಾನಳೊಡನೆ ಆ ಮನೆಯಲ್ಲಿ ಸ್ವತಂತ್ರ ಜೀವನವನ್ನು ಮೊದಲು ಮಾಡಿದನು. ಇಂಥ ಸುಸಂಸ್ಕೃತ ದಂಪತಿಗಳಿಗೆ ಕಾಲ

**ಡಾರ್ವಿನ್ನನ ಜನನ**

ಕಳೆದಂತೆ ಐದು ಮಕ್ಕಳಾದುವು. ಅವರಲ್ಲಿ ಹಿರಿಯ ಮಗ ಪ್ರಸಿದ್ಧ ಸಾಹಿತಿಗಳಾದ ಕಾರ್ಲೈಲರ ಗೆಳೆಯನಾಗಿದ್ದನು. ತನಗಿದ್ದ ಅಪಾರ ಪ್ರತಿಭೆಯನ್ನು ಪ್ರದರ್ಶಿಸತಕ್ಕ ಯಾವ ಕೃತಿಯನ್ನೂ ಅವನು ರಚಿಸಿದಂತೆ ತೋರುವುದಿಲ್ಲ. ಕಿರಿಯ ಮಗನೇ ಚಾರ್ಲ್ಸ್ ಡಾರ್ವಿನ್. ಅವನು ೧೮೦೯ ನೆಯ ವರ್ಷದ ಫೆಬ್ರವರಿ ೧೨ನೆಯ ದಿನ ಷ್ರೂಸ್ಬರಿಯಲ್ಲಿ ಜನಿಸಿದನು.

ಡಾರ್ವಿನ್ ಹುಟ್ಟಿದ ಮೇಲೆ ಅವನ ತಾಯಿ ರೋಗದಿಂದ ನರಳುತ್ತಲೇ ಇದ್ದಳು. ತನ್ನ ಗೆಳತಿಯೊಬ್ಬಳಿಗೆ ಕಾಗದವೊಂದನ್ನು ಒರೆದು, ಅವಳೊಮ್ಮೆ

ಎಲ್ಲರೂ ನನ್ನ ಮುಂದೆ ತಾರುಣ್ಯದ ಸೊಬಗಿನಲ್ಲಿರುವರು. ನಾನು ಮಾತ್ರ ವೃದ್ಧಾಪ್ಯವನ್ನು ಸವಿಸುತ್ತಿರುವೆನು ' ಎಂದು ತನ್ನ ದೇಹದ ವೇದನೆಯನ್ನು ವಿವರಿಸಿರುವಳು. ದಿನದಿನಕ್ಕೂ ರೋಗ ಹೆಚ್ಚುತ್ತಾ ಬಂದು ಶರೀರ ಕೃಶವಾಗಿ ಬಲ ಕಡಮೆಯಾಯಿತು. ಹೊರಗಡೆ ಚಲಿಸುವುದೂ ಕಷ್ಟವಾಗಿ ಮನೆಯಲ್ಲೇ ಉಳಿದು ಮಕ್ಕಳುಮರಿಗಳನ್ನು ವಿಚಾರಿಸುವುದು, ಅವುಗಳೊಡನೆ ಸುಳಿದಾಡುವುದು, ಅಷ್ಟಿಷ್ಟು ಓಡಾಡುವುದ, ಇತ್ಯಾದಿ ಶ್ರಮರಹಿತ ಕಾರ್ಯಗಳನ್ನು ಮಾತ್ರ ಮಾಡುತ್ತಿದ್ದಳು. ಡಾರ್ವಿನ್ನನಿಗೆ ಒಂಬತ್ತು ವರ್ಷ ತುಂಬುವ ಮುನ್ನ ಸುನಾನಳು ಕಾಲವಾದಳು. ಅವಳಿಗೆ ಆಗ ಇಬ್ಬರು ಗಂಡು ಮಕ್ಕಳೂ ನಾಲ್ಕು ಹೆಣ್ಣು ಮಕ್ಕಳೂ ಇದ್ದರು

ತಾಯ ಮರಣ

ತಾಯಿಯ ಅವಸಾನಕಾಲ ಸಮೀಪಿಸುವುದಕ್ಕೆ ಸ್ವಲ್ಪ ಮುಂಚೆ, ಎಂದರೆ ೧೮೧೭ನೆಯ ವರ್ಷದ ಆದಿಭಾಗದಲ್ಲಿ ಡಾರ್ವಿನ್ನನನ್ನು ಷ್ರೂಸ್ಬರಿಯಲ್ಲಿದ್ದ ಯೂನಿಟೇರಿಯನ್ ಚರ್ಚಿಗೆ ವಿದ್ಯಾಭ್ಯಾಸಕ್ಕೆ ಸೇರಿಸಿದರು ವೆಡ್ಜ್‌ವುಡ್ ಮನೆತನದ ಮಕ್ಕಳೂ ಸಾಮಾನ್ಯವಾಗಿ ಅಲ್ಲಿಯೇ ವಿದ್ಯಾಭ್ಯಾಸ ಮಾಡುತ್ತಿದ್ದರು. ಡಾರ್ವಿನ್ ಒಂದು ವರ್ಷದನಂತರ ಆ ಶಾಲೆಯನ್ನು ಬಿಟ್ಟು ಅದೇ ಊರಿನಲ್ಲಿದ್ದ ಮತ್ತೊಂದು ಶಾಲೆಗೆ ಸೇರಿದನು. ತನ್ನ ತಾಯಿ ಕಾಲವಾಗುವ ಮುಂದೆ ಮನೆಯಲ್ಲಿಯೇ ಡಾರ್ವಿನ್ನನಿಗೆ ಅಷ್ಟಿಷ್ಟು ಶಿಕ್ಷಣವನ್ನು ಕೊಟ್ಟಿದ್ದಳು. ಆಗ ಶಾಲೆಯ ಉಪಾಧ್ಯಾಯರಾಗಿದ್ದ ಸ್ಯಾಮುಯಲ್ ಬಟ್ಲರ್ ಎಂಬವರು ಹಳೆಯ ಪಂಥದವರಾಗಿದ್ದು ಸಾಂಪ್ರದಾಯಿಕ ಶಿಕ್ಷಣವನ್ನು ಮಾತ್ರ ಕೊಡುತ್ತಿದ್ದರು. ಆ ಶಾಲೆಯಲ್ಲಿ ಡಾರ್ವಿನ್ ಯಾವ ಪ್ರಯೋಜನವನ್ನೂ ಪಡೆಯಲಿಲ್ಲವೆಂದರೆ ತಪ್ಪಾಗಲಾರದು. ಮನೆಯಲ್ಲಿ ಪ್ರತ್ಯೇಕವಾಗಿ ಯೂಕ್ಲಿಡ್ಡನ ರೇಖಾಗಣಿತ ಶಾಸ್ತ್ರವನ್ನು ಅಭ್ಯಾಸಿಸುತ್ತಿದ್ದನಂತೆ. ಅಣ್ಣನು ಅವನಿಗಾಗಿ ಪುಟ್ಟದೊಂದು ರಸಾಯನ ಶಾಸ್ತ್ರದ ಪ್ರಯೋಗ ಮಂದಿರವನ್ನು ಕಟ್ಟಿಕೊಟ್ಟಿದ್ದನು. ಡಾರ್ವಿನ್ ಹೆಚ್ಚುಕಾಲ ಅಲ್ಲೇ ಉಳಿದು ರಸಾಯನಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಪ್ರಯೋಗಗಳನ್ನು ನಡೆಸುತ್ತಿದ್ದನು. ಶಾಲೆಯ ಉಪಾಧ್ಯಾಯರು ಇದನ್ನರಿತಾಗ ಶುಷ್ಕಪ್ರಯೋಗಗಳಲ್ಲಿ ಕಾಲಹರಣ ಮಾಡುತ್ತಿದ್ದುದಕ್ಕಾಗಿ

ಷ್ರೂಸ್ಬರಿಯಲ್ಲಿ ವಿದ್ಯಾಭ್ಯಾಸ

ಅವನನ್ನು ಕಟುವಾಗಿ ಬೈಯುತ್ತಿದ್ದರು. ವಿದ್ಯಾರ್ಥಿಗಳೂ ಇತರರೂ ಅವನನ್ನು ಸೋಮಾರಿಯೆಂದು ಹಾಸ್ಯ ಮಾಡುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಸಾಂಪ್ರದಾಯಿಕ ಶಿಕ್ಷಣ ಡಾರ್ವಿನ್ನನಿಗೆ ರುಚಿಸಲಿಲ್ಲ. ಅಲ್ಲಿ ಹೇಳಿ ಕೊಡುತ್ತಿದ್ದ ವ್ಯಾಕರಣ, ಲಕ್ಷಣಶಾಸ್ತ್ರ ಮೊದಲಾದುವು ಅವನಿಗೆ ಆಕರ್ಷಣೀಯವಾಗಿರಲಿಲ್ಲ. ಹುದಗಿದ್ದ ಅವನ ಪ್ರತಿಭೆಯನ್ನು ಬೆಳೆಯಿಸಲು ಅವಕಾಶ ದೊರೆಯಲಿಲ್ಲ.

ಡಾರ್ವಿನ್ನನಿಗೆ ತನ್ನ ತಾತನ ಮತ್ತು ತಂದೆತಾಯಿಗಳ ಪ್ರತಿಭಾ ಶಕ್ತಿಯೂ ವಿಜ್ಞಾನ ಪ್ರೇಮವೂ ಸೂಕ್ಷ್ಮದರ್ಶನ ಶಕ್ತಿಯೂ ಇನ್ನಿತರ ಸದ್ಗುಣಗಳೂ ವಂಶಗತವಾಗಿ ಬಂದಿದ್ದುವು. ತನ್ನ ಮನೆತನದ ಹಿರಿಯರು ಪ್ರತಿಪಾದಿಸಿದ್ದ ವಿಕಾಸ ತತ್ವದ ವಾಸನೆ ಡಾರ್ವಿನ್ನನ ವಿಜ್ಞಾನ ಪ್ರೇಮ ರಕ್ತದಲ್ಲೂ ಹರಿದು ಬಂದಿತ್ತೆನ್ನಬಹುದು. ವಂಶಪರಂಪರೆಯಾಗಿ ಬಂದಿದ್ದ ವಿಜ್ಞಾನದೃಷ್ಟಿಯ ಜೊತೆಗೆ ಅವನು ಬೆಳೆದ ವಾತಾವರಣವೂ ವಿಜ್ಞಾನಿಗಳಿಂದ ತುಂಬಿತ್ತು. ತನ್ನ ತಾಯಿ ತಂದೆಯಾದ ಜೋಸೇಯಿ ವೆಡ್ಜ್‌ವುಡ್ಡನು ಪಿಂಗಾಣಿಪಾತ್ರೆಯ ದೊಡ್ಡದೊಂದು ಉದ್ಯೋಗವನ್ನು ಸ್ಥಾಪಿಸಿ ನಿರ್ವಹಿಸುತ್ತಿದ್ದನು. ಮುಂದೆ ವಿಖ್ಯಾತ ಜೀವ ವಿಜ್ಞಾನಿಯಾದ ಫ್ರಾನ್ಸಿಸ್ ಗಾಲ್ಟನ್, ಡಾರ್ವಿನ್ನನ ಹತ್ತಿರದ ಸಂಬಂಧಿ. ಮೇಲಾಗಿ ತನ್ನ ತಂದೆ ವೈದ್ಯವೃತ್ತಿಯಲ್ಲಿದ್ದನು. ಆದುದರಿಂದ ವಂಶಗತವಾಗಿ ಬಂದ ಅವನ ವಿಜ್ಞಾನ ಪ್ರೇಮ ವಾತಾವರಣದ ಕೈವಾಡದಿಂದ ಮತ್ತಷ್ಟು ಹೆಚ್ಚಿ ಬೆಳೆಯಲವಕಾಶವಾಯಿತು. ಡಾರ್ವಿನ್ ಹುಟ್ಟುವ ಹೊತ್ತಿಗೆ ಇರಾಸ್ಮಸ್ಸನು ಸತ್ತು ಏಳು ವರ್ಷಗಳಾಗಿದ್ದುವು. ಆದುದರಿಂದ ಹಿರಿಯ ಮತ್ತು ಕಿರಿಯ ವಿಕಾಸವಾದಿಗಳು ಒಬ್ಬರನ್ನೊಬ್ಬರು ನೋಡಿಯೇ ಇರಲಿಲ್ಲ. ತನ್ನ ತಾತನನ್ನು ಕಾಣದಿದ್ದರೂ ಡಾರ್ವಿನ್ ತನ್ನ ತಂದೆಯೊಡನೆ ಹೆಚ್ಚು ಮಿಳಿತವಾಗಿರಲು ತನ್ನ ಮನೆತನದ ಹಿರಿಯರ ಸದ್ಗುಣಗಳು ತಂದೆಯ ಆದರ್ಶದ ಮೂಲಕ ಅವನಲ್ಲಿ ಮೂಡಿ ಬೆಳೆಯಲವಕಾಶವಾಯಿತು.

ಡಾರ್ವಿನ್ ಬಾಲ್ಯದಲ್ಲಿಯೇ ತಬ್ಬಲಿಯಾದುದರಿಂದ ಅಣ್ಣನೂ ಅಕ್ಕಂದಿರೂ ಅವನ ಆಟಪಾಟಗಳಲ್ಲಿ ಪ್ರೇಮದಿಂದ ನೆರವಾಗುತ್ತಿದ್ದರು. ತಾಯಿ

**ಪ್ರಕೃತಿ ಪ್ರೇಮ**

ವಿಯೋಗದಿಂದ ನೊಂದ ಅವನ ಎಳೆಯ ಹೃದಯವನ್ನು ಸಂತೈಸಲು ಅವರೆಲ್ಲರೂ ನಡುಕಟ್ಟಿ ನಿಂತಿದ್ದರು. ತಂದೆಯ ಮನೆಗೆ ಸೇರಿದ್ದ ವಿಶಾಲವಾದ ತೋಟದಲ್ಲಿ ಅವನನ್ನು ಕರೆದು ಕೊಂಡು ಹೋಗಿ ಆಟವಾಡಿಸುವಾಗ ಅಲ್ಲಿದ್ದ ಬಗೆಬಗೆ ಗಿಡಗಳ ಹಚ್ಚನೆಯ ಹಸುರೂ ಅವುಗಳನ್ನು ಸಿಂಗರಿಸಿದ್ದ ವಿವಿಧ ವರ್ಣದ ಹೂಗುತ್ತಿಗಳೂ ಡಾರ್ವಿನ್ನನ ಎಳೆಯ ಮನವನ್ನಾಕರ್ಷಿಸುತ್ತಿದ್ದುವು. ಹಸುರು ಹುಲ್ಲಿನ ಮೇಲೆ ಚಿಗಿದು ಚಿಮ್ಮಿ ಹಾರಾಡುತ್ತಿದ್ದ ಪಾರಿವಾಳಗಳನ್ನು ನೋಡಿ ಅವನು ಹಿಗ್ಗಿ ನಲಿಯುತ್ತಿದ್ದನಂತೆ. ಅಲ್ಲಿ ಬೆಳೆದಿದ್ದ ವಿಚಿತ್ರತರ ಸಸ್ಯಗಳೂ ಬಗೆಬಗೆಯ ಸಾಕುಪ್ರಾಣಿಗಳೂ ಅವನ ಹೃದಯದಲ್ಲಿ ದಿನ ದಿನವೂ ಆವೇಶವನ್ನು ತುಂಬಿ ಪ್ರಕೃತಿಯಲ್ಲಿ ಪ್ರೇಮಾಸಕ್ತಿಗಳನ್ನು ಹುಟ್ಟಿಸುತ್ತಿದ್ದುವು; ಸಸ್ಯಗಳನ್ನು ಮತ್ತು ಪ್ರಾಣಿಗಳನ್ನು ಕುರಿತು ಆಲೋಚಿಸುವ ಶಕ್ತಿಯನ್ನೂ ತುಂಬುತ್ತಿದ್ದುವು. ಡಾರ್ವಿನ್ ಮುಂದೆ ದೊಡ್ಡವನಾಗಿ ವಿಖ್ಯಾತ ವಿಜ್ಞಾನಿಯಾದಾಗ ತನ್ನ ಎಳೆಯ ದಿನದ ಈ ಸವಿ ನೆನಪುಗಳನ್ನು ಮಾನಸಪಟದ ಮೇಲೆ ಚಿತ್ರಿಸಿಕೊಂಡು ತನ್ನ ಜೀವನದ ಗುರಿಯನ್ನು ನಿರ್ಮಿಸಿ ಪೋಷಿಸಲು ಅವೆಷ್ಟು ನೆರವಾದುವೆಂಬುದನ್ನು ಭಕ್ತಿಯಿಂದಲೂ ಹೆಮ್ಮೆಯಿಂದಲೂ ಸ್ಮರಿಸಿಕೊಳ್ಳುತ್ತಿದ್ದನು.

ಡಾರ್ವಿನ್ ತನ್ನ ಶಾಲೆಯಲ್ಲಿ ಚತುರನಾಗಿರದಿದ್ದರೂ ಸೋಮಾರಿಯಾಗಿರಲಿಲ್ಲ. ಲೀರ್ಟ್, ಯಾಡ್ಲಿರ್, ಚಾಡರ್ ಮೊದಲಾದ ಅವನ ಜೊತೆಗಾರರು ಹೇಳುವಂತೆ ಸುಮ್ಮನೆ ಕೂಡುವ ಸ್ವಭಾವ ಅವನದಲ್ಲ; ಬಲಾಢ್ಯನಾಗಿಯೂ ಚುರುಕಾಗಿಯೂ ಇದ್ದನು. ಮನವೊಪ್ಪಿದ ಪ್ರತಿಭೆಯ ಕುರುಹು ಯಾವುದಾದರೂ ಕೆಲಸವನ್ನು ಆಸಕ್ತಿಯಿಂದ ಮಾಡುತ್ತಿದ್ದನು. ನುಡುಕಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಯಾವಾಗಲೂ ಮೌನವಾಗಿ ಯೋಚಿಸುತ್ತಿದ್ದರೂ ಜೊತೆಗಾರರೊಡನೆ ಸರಳತೆಯಿಂದಿರುತ್ತಿದ್ದನು. ಶಾಲೆಯ ಕಟ್ಟಿನೊಳಗಿರವುದೆಂದರೆ ಅವನಿಗೆ ಕಷ್ಟವಾಗುತ್ತಿತ್ತು. ಹೊರಗಡೆ ಪ್ರಕೃತಿಯೆಡೆಗೆ ಬಂದೊಡನೆ ಹರ್ಷಚಿತ್ತನಾಗಿ, ಕಣ್ಣಿಗೆ ಕಾಣುವ ಪದಾರ್ಥಗಳನ್ನು ಆಸಕ್ತಿಯಿಂದ ಪರಿಶೀಲಿಸುತ್ತಾ ಅವುಗಳ ಮೇಲೆ ಅನಂತವಾಗಿ ಯೋಚಿಸುತ್ತಿದ್ದನು. ಈ ಹಿರಿಯ

ಗುಣಗಳೇ ಮುಂದೆ ಅವನು ಪ್ರಕೃತಿಯ ಗೂಢ ತತ್ವಗಳನ್ನು ಸಂಶೋಧಿಸಲು ಅಪಾರವಾಗಿ ನೆರವಾದುವು.

ಡಾರ್ವಿನ್ ಚಿಟ್ಟೆಗಳನ್ನೂ ಹಕ್ಕಿಗಳನ್ನೂ ಸಂಗ್ರಹಿಸುತ್ತಿದ್ದನು. ಹಕ್ಕಿಗಳನ್ನು ತನ್ನ ಕೋವಿಯಿಂದ ಹೊಡೆದು ತರುತ್ತಿದ್ದನು. ಬೇಟೆಯಾಡುವುದೆಂದರೆ ಅವನಿಗೆ ಬಲು ಆಸೆ. ಅವುಗಳನ್ನು ಹೊಡೆಯುವಾಗ ನಿಖರವಾದ ಗುರಿಯಿಟ್ಟು ಹೊಡೆಯುವುದರಲ್ಲಿ ತನ್ನ ಚಮತ್ಕಾರವನ್ನೆಲ್ಲ ಉಪಯೋಗಿಸುತ್ತಿದ್ದನಂತೆ. ದೊಡ್ಡವನಾದ ಮೇಲೆ 'ನನಗೆ ಬೇಟೆಯಾಡುವುದರಲ್ಲೆಷ್ಟು ಆಸಕ್ತಿಯಿತ್ತು! ಸರಿಯಾದ ಗುರಿಯನ್ನು ಅಭ್ಯಾಸಿಸುವುದು ಒಂದು ಕೌಶಲ್ಯವೆಂದು ಗಣಿಸಿ ಆ ಕಾರ್ಯದಲ್ಲಿ ಭಾಗವಹಿಸುತ್ತಿದ್ದುದು ವಿಚಿತ್ರವಾಗಿತ್ತೆ'ಂದುಕೊಂಡಿರುವನು. ಬೇಟೆಯಿಂದ ಡಾರ್ವಿನ್ನನ ದರ್ಶನಶಕ್ತಿ ಹೆಚ್ಚಿ ಕಡೆಗೆ ಅದು ಪದಾರ್ಥ ಪರಿಶೀಲನೆಯ ಕಾರ್ಯಕ್ಕೆ ನೆರವಾಯಿತು.

ಬೇಟೆಯಾಡುವುದರಲ್ಲಿ ಆಸಕ್ತಿ

ಹೊರಗಡೆ ತಿರುಗುವುದೆಂದರೆ ಅವನಿಗೆ ತುಂಬ ಆಸೆ ಅಲ್ಲಲ್ಲಿ ಕಂಡ ಸಸ್ಯಗಳನ್ನೂ ಪ್ರಾಣಿಗಳನ್ನೂ ಕುತೂಹಲದಿಂದ ನೋಡುತ್ತಿದ್ದನು. ದಾರಿಯಲ್ಲಿ ಸಿಕ್ಕಿದ ಬೇರೆಬೇರೆ ಪದಾರ್ಥಗಳನ್ನು ಆರಿಸಿ ತಂದು ಮನೆಯಲ್ಲಿ ಶೇಖರಿಸುತ್ತಿದ್ದನು. ಪದಾರ್ಥಸಂಗ್ರಹಕಾರ್ಯ ಕ್ರಮೇಣ ಬೆಳೆಯುತ್ತಾ ಬಂದು ಅವನ ದಿನಚರಿ ಕಾರ್ಯಗಳಲ್ಲಿ ಪ್ರಧಾನವಾಗಿ ಹೋಯಿತು. ಶಾಲೆಯ ಶಿಕ್ಷಣ ಡಾರ್ವಿನ್ನನಿಗೆ ಅನುಕೂಲವಾಗದಿದ್ದರೂ ಸಂಗ್ರಹಾಸಕ್ತಿಯ ಬೆಳವಣಿಗೆ ಅವನ ವಿಚಾರ ಜ್ಞಾನವನ್ನು ಹೆಚ್ಚಿಸುತ್ತಿತ್ತು. ಹೊರಗಿನಿಂದ ಎಂದು ಮನೆಗೆ ಬಂದರೂ ಚಿಪ್ಪುಗಳನ್ನೋ ಲೋಹದ ಚೂರುಗಳನ್ನೋ ನಾಣ್ಯಗಳನ್ನೋ ಸಂಗ್ರಹಿಸಿ ತರುತ್ತಿದ್ದನು. ಅವುಗಳ ಚಟ ಮುಗಿದ ಮೇಲೆ ಎಸೆದುಬಿಡದೆ ದೊಡ್ಡ ನಿಧಿಯಂತೆ ನೋಕೊಡಿಳ್ಳುತ್ತಿದ್ದನು. ಬಿಡುವಾದಾಗ ತಾನು ಸಂಗ್ರಹಿಸಿ ತಂದ ಪದಾರ್ಥಗಳ ರೂಪುರಚನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವುಗಳ ಇತಿಹಾಸವನ್ನು ಅರಿತುಕೊಳ್ಳಲು ಭಗೀರಥಪ್ರಯತ್ನ ಮಾಡುತ್ತಿದ್ದನು. ಅವುಗಳ ರೂಪು, ರಚನೆ, ವರ್ಣ ಇತ್ಯಾದಿಗಳನ್ನು ಅನುಸರಿಸಿ ಬೇರೆ ಬೇರೆ ಪಂಗಡಗಳನ್ನಾಗಿ ಮಾಡಿಕೊಂಡು ಅಭ್ಯಾಸಿಸುತ್ತಿದ್ದನು. ಹುಡುಗರಾಟದ

ಪದಾರ್ಥ ಸಂಗ್ರಹ

ಪದಾರ್ಥಸಂಗ್ರಹ ಕಾರ್ಯ ಡಾರ್ವಿನ್ನನ ಪರಿಶೀಲನೆಯ ಶಕ್ತಿಯನ್ನೂ ವಿಚಾರಶಕ್ತಿಯನ್ನೂ ಬೆಳೆಸುತ್ತಿದ್ದುದೇ ಅವನಿಗೆ ಬಾಲ್ಯದಲ್ಲಿ ದೊರೆತ ಮುಖ್ಯ ವಿದ್ಯಾಭ್ಯಾಸವೆನ್ನಬಹುದು.

ಸ್ವಾಭಿಮಾನ

ಹೊರಗಡೆ ದಿನವೆಲ್ಲ ಅಲೆದು, ಸಂಜೆಯಲ್ಲಿ ಮನೆಗೆ ಬರುತ್ತಿದ್ದ ಡಾರ್ವಿನ್ನನ ಮೇಲೆ ಅವನ ತಂದೆ ಅನೇಕ ವೇಳೆ ಕೋಪಿಸುತ್ತಿದ್ದನು. ಶಾಲೆಯಲ್ಲಿ ಅವನಿಗೆ ಆಸಕ್ತಿಯೇ ಇಲ್ಲದಿರುವುದನ್ನು ಕಂಡು ಸೋಮಾರಿಯೆಂದು ಬೈಯುತ್ತಿದ್ದನು. ಮನೆತನದ ಮಹಾಪುರುಷರ ಕೀರ್ತಿಗೆ ಡಾರ್ವಿನ್ ಕಳಂಕ ತರುವನೆಂದು ಹಿಯ್ಯಾಳಿಸುತ್ತಿದ್ದನು. ಹಾಗೆಯೇ ಅವನ ಅಕ್ಕ ಅಣ್ಣಂದಿರೂ ಸಹಪಾಠಿಗಳೂ ಇತರ ಸ್ನೇಹಿತರೂ ಅವನು ಸಿಕ್ಕಿದ ಕಡೆಯಲ್ಲಿ ಅಲೆಯುತ್ತಾ ಪದಾರ್ಥಗಳನ್ನು ಕೂಡಿಟ್ಟುಕೊಳ್ಳುತ್ತಿದ್ದುದನ್ನು ಕಂಡು ಅವನನ್ನು ಹುಚ್ಚನೆಂದೂ ಜಿಪುಣನೆಂದೂ ಹಾಸ್ಯಮಾಡುತ್ತಿದ್ದರು. ಆದರೆ ಅದರಿಂದ ಡಾರ್ವಿನ್ನನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಉಂಟಾದಂತೆ ತೋರುವುದಿಲ್ಲ. ತನ್ನ ಮನೆಯವರು ತನ್ನ ಮೇಲೆ ಕೋಪಿಸುತ್ತಿದ್ದರೂ ಅವರೊಡನೆ ಯಾವ ರೀತಿಯಲ್ಲೂ ಅವಿಧೇಯತೆಯಿಂದ ವರ್ತಿಸುತ್ತಿರಲಿಲ್ಲ. ತಂದೆ ಬೈಯುತ್ತಿದ್ದುದನ್ನು ಸ್ಮರಿಸಿಕೊಂಡು, ಮುಂದೆ, 'ನಮ್ಮ ತಂದೆ ದಯಾಮಯ ಹೃದಯಿ; ಅವನನ್ನು ನಾನು ಹೃದಯಪೂರ್ವಕವಾಗಿ ಸ್ಮರಿಸುವೆನು. ಬಾಲ್ಯದಲ್ಲಿ ನನ್ನನ್ನು ಕೋಪದಿಂದ ಹಾಗೆ ಬೈದಿರಬೇಕು; ಅಷ್ಟೆ' ಎಂದುಕೊಳ್ಳುವನು. ತನ್ನ ಸಹಪಾಠಿಗಳೊಡನೆ ಜಗಳ ಕಾಯುತ್ತಿರಲಿಲ್ಲ. ಯಾರು ಏನನ್ನು ಹೇಳಿದರೂ ಮೌನದಿಂದ ತನ್ನ ಸಂಗ್ರಹ ಕಾರ್ಯವನ್ನು ಎಂದಿನಂತೆ ಮಾಡುತ್ತಿದ್ದನು. ಆ ಕಾರ್ಯದಲ್ಲಿ ತನಗೆ ಮೆಚ್ಚಿಗೆಯೂ ಹೆಮ್ಮೆಯೂ ಸ್ವಾಭಿಮಾನವೂ ಮೇಲಾಗಿ ಭಕ್ತಿ ಆಸಕ್ತಿಗಳೂ ಇದ್ದುದೇ ಇದಕ್ಕೆ ಕಾರಣವೆನ್ನಬಹುದು ತನ್ನ ಜೀವನಪಥದ ದೂರದಿಗಂತದಲ್ಲಿ ತನ್ನ ಸಂಗ್ರಹಕಾರ್ಯ ಯಾವುದೋ ಒಂದು ಹೊಂಬೆಳಕನ್ನು ತೋರಿಸಿರಬೇಕು. ಜಗತ್ತಿಗೆ ತಾನು ಮುಂದೆ ನೀಡಲಿರುವ ಮಹಾತತ್ತ್ವೋಪದೇಶದ ಸಂದೇಶ ಅಲ್ಲಿ ಗೋಚರವಾಗಿ ತನ್ನ ಎಳೆಯ ಹೃದಯದಲ್ಲಿ ಆಸೆ ತುಂಬಿರಬೇಕು; ಉತ್ಸಾಹ ಹುಟ್ಟಿಸಿರಬೇಕು ಅಂಥ ದಿವ್ಯ

ಭಾವನೆಯಿಂದ ಕಾರ್ಯಮಗ್ನನಾಗಿದ್ದ ಡಾರ್ವಿನ್ ಇತರರ ಹಾಸ್ಯಕ್ಕಾಗಲಿ ನಿಂದೆಗಾಗಲಿ ಕಿವಿಗೊಟ್ಟು ಹಿಂದೆಗೆಯದಿದ್ದುದು ಆಶ್ಚರ್ಯವಲ್ಲ.

ಜೀವಶಾಸ್ತ್ರದ ಪರಿಚಯ

ಸಸ್ಯಗಳ ಮತ್ತು ಪ್ರಾಣಿಗಳ ವಿಚಾರವನ್ನು ತಿಳಿದುಕೊಳ್ಳುವ ಆಸಕ್ತಿ ಅವನಲ್ಲಿ ದಿನದಿನಕ್ಕೂ ಬೆಳೆಯುತ್ತಿದ್ದಿತು; ಅವುಗಳನ್ನು ಕುರಿತು ಬರೆದಿರುವ ಸಣ್ಣಸಣ್ಣ ಗ್ರಂಥಗಳನ್ನು ಮನೆಯಲ್ಲಿ ಓದಿ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ತಾನು ಸಂಗ್ರಹಿಸಿ ತಂದ ಪ್ರಾಣಿಗಳ ಮತ್ತು ಸಸ್ಯಗಳ ಭಾಗಗಳನ್ನು ಗ್ರಂಥಜ್ಞಾನದ ಸಹಾಯದಿಂದ ಪರಿಶೀಲಿಸುತ್ತಿದ್ದನು. ಷ್ರೂಸ್ಬರಿಯನ್ನು ಬಿಟ್ಟು ಮುಂದೆ ಅವನು ಎಡಿನ್ಬರೋಕ್ಕೆ ಹೋಗುವಹೊತ್ತಿಗೆ ಆ ಶಾಸ್ತ್ರದಲ್ಲಿ ಅಷ್ಟಿಷ್ಟು ಜ್ಞಾನವನ್ನು ಪಡೆದಿದ್ದುದಲ್ಲದೆ ಆ ಮಾರ್ಗದಲ್ಲಿ ತನ್ನ ಅಭಿರುಚಿಯನ್ನೂ ಬೆಳೆಸಿಕೊಂಡಿದ್ದನು.

ಎಡಿನ್ಬರೋ ವಿದ್ಯಾಭ್ಯಾಸ

ಡಾರ್ವಿನ್ ತನ್ನ ಹದಿನಾರನೆಯ ವಯಸ್ಸಿನಲ್ಲಿ ಎಡಿನ್ಬರೋಕ್ಕೆ ವಿದ್ಯಾಭ್ಯಾಸಕ್ಕೆ ಹೊರಟನು. ಇಲ್ಲಿನ ವಿಶ್ವವಿದ್ಯಾನಿಲಯದಲ್ಲಿಯೇ ಅವನ ತಂದೆಯೂ ಅಣ್ಣನೂ ಪದವೀಧರರಾಗಿದ್ದುದು. ಮನೆತನದ ಹಿರಿಯರಂತೆ ಅವನೂ ವೈದ್ಯ ವೃತ್ತಿಯನ್ನವಲಂಬಿಸಬೇಕೆಂಬುದು ಮನೆಯವರ ಇಷ್ಟವಾಗಿತ್ತು. ಷ್ರೂಸ್ಬರಿಯಲ್ಲಿದ್ದಾಗ ಡಾರ್ವಿನ್ ತನ್ನ ತಂದೆಯ ವೈದ್ಯ ವೃತ್ತಿಯಲ್ಲಿ ಅಷ್ಟಿಷ್ಟು ನೆರವಾಗುತ್ತಿದ್ದನು. ಬಡಬಗ್ಗರಿಗೆ ಅಲ್ಪಸ್ವಲ್ಪ ಚಿಕಿತ್ಸೆ ನಡೆಸುವುದರಲ್ಲಿ ಉತ್ಸಾಹ ತೋರಿಸುತ್ತಿದ್ದನು. ಇದನ್ನು ಕಂಡು ರಾಬರ್ಟನು ತನ್ನ ಮಗ ವೈದ್ಯವೃತ್ತಿಯಲ್ಲಿ ನಿಪುಣನಾಗುವನೆಂದುಕೊಳ್ಳುತ್ತಿದ್ದನು. ತಂದೆಯ ಮತ್ತು ಅಣ್ಣನ ಕಟ್ಟುಬಲುಮೆಯ ಮೇಲೆ ಅವನು ಎಡಿನ್ಬರೋದಲ್ಲಿ ವೈದ್ಯಶಿಕ್ಷಣಕ್ಕೆ ಸೇರಿದ್ದರೂ ಕೆಲವು ದಿನಗಳಲ್ಲೇ ಆ ಶಾಸ್ತ್ರದಲ್ಲಿ ತನಗೆ ಅಭಿರುಚಿಯಿಲ್ಲವೆಂದು ತಿಳಿದುಕೊಂಡನು. ಅಷ್ಟು ಹೊತ್ತಿಗೆ ಅವನ ವಿಚಾರಶಕ್ತಿಯೂ ಬೆಳೆದಿದ್ದುದರಿಂದ ತನ್ನ ಮನಸ್ಸೊಪ್ಪಿದ ವಿದ್ಯೆಯಲ್ಲಿ ಮಾತ್ರ ಆಸಕ್ತಿಯಿಟ್ಟು ಓದುತ್ತಿದ್ದುದಲ್ಲದೆ ತನಗೆ ಹಿಡಿಯದ ಶಿಕ್ಷಣದ ಕಡೆಗೆ ಮನಸ್ಸು ಕೊಡುತ್ತಿರಲಿಲ್ಲ. ಮೇಲಾಗಿ ತನ್ನ ತಂದೆ ಬೇಕಾದಹಾಗೆ ಹಣ ಗಳಿಸಿಟ್ಟಿದ್ದುದರಿಂದ ಜೀವನೋಪಾಯಕ್ಕೆ ಆವಶ್ಯಕವಾದ ವೈದ್ಯವಿದ್ಯೆಯನ್ನು ಕಲಿಯಲೇಬೇಕೆಂಬ ನಿರ್ಬಂಧವೂ

ಅವನ ಮನಸ್ಸಿನಿಂದ ದೂರವಾಯಿತು. ವೈದ್ಯಶಾಸ್ತ್ರವನ್ನು ಅಭ್ಯಾಸಿಸುವಾಗ ಶರೀರದ ಬೇರೆಬೇರೆ ಭಾಗಗಳನ್ನು ಕೊಯ್ದು ಪರೀಕ್ಷಿಸಬೇಕಷ್ಟೆ. ಮಾನವ ದೇಹವನ್ನು ಶಸ್ತ್ರಗಳಿಂದ ವಿಚ್ಛೇದಿಸಿ ಅಭ್ಯಾಸಿಸುವುದಂತೂ ಡಾರ್ವಿನ್ನನಿಗೆ ಒಗ್ಗುತ್ತಿರಲಿಲ್ಲ. ಅಂದಿನ ಪ್ರಯೋಗಶಾಲೆಗಳು ಈ ದಿನದವುಗಳಂತೆ ಎಲ್ಲ ವಿಧಗಳಲ್ಲೂ ಸುಸಜ್ಜಿತವಾಗಿರಲಿಲ್ಲ. ಪ್ರಾಣಿಗಳನ್ನು ವಿಚ್ಛೇದಿಸಿ, ಪ್ರಯೋಗ ಗಳನ್ನು ನಡೆಯಿಸಿ ಪರೀಕ್ಷಿಸಲು ಆವಶ್ಯಕವಾದ ಪ್ರಜ್ಞೆ ತಪ್ಪಿಸುವ ಧೃತಿಗಳೂ ನಿರ್ಮಾಣವಾಗಿರಲಿಲ್ಲ. ಆದುದರಿಂದ ಆ ಪ್ರಯೋಗವಂದಿರ ಡಾರ್ವಿನ್ನನ ಮನಸ್ಸಿನಲ್ಲಿ ಕಟುಕರಂಗಡಿಯ ನೆನಪನ್ನು ತಂದಿದ್ದರೆ ಆಶ್ಚರ್ಯವಲ್ಲ. ಆ ವಾತಾವರಣವನ್ನು ನೆನಸಿಕೊಂಡರೆ ಸಾಕ, ಅವನ ಮೈ ಜುಮ್ಮೆನ್ನುತ್ತಿತ್ತಂತೆ. ಅಲ್ಲದೆ ವಿಶ್ವವಿದ್ಯಾನಿಲಯದ ವೈದ್ಯಶಾಖೆಯ ಗುರುವರ್ಗದವರೂ ಡಾರ್ವಿನ್ನನ ಮನಸ್ಸನ್ನಾಕರ್ಷಿಸುವಂಥವರಾಗಿರಲಿಲ್ಲ. ಆಲ್ಲಿನ ನಿಸರ್ಗವಿಜ್ಞಾನ ಶಾಖೆ ಯಲ್ಲಾದರೋ ಪ್ರತಿಭಾಶಾಲಿಗಳೂ ಸಂಶೋಧನಧುರೀಣರೂ ಶಿಕ್ಷಣ ಚತುರರೂ ಆದ ಗುರುಗಳಿದ್ದರು. ಅವರ ಪ್ರಭಾವಕ್ಕೊಳಗಾಗಿ ಡಾರ್ವಿನ್ ಬೇಗ ವೈದ್ಯ ಶಾಸ್ತ್ರವನ್ನು ಬಿಟ್ಟು ನಿಸರ್ಗ ವಿಜ್ಞಾನವನ್ನಭ್ಯಾಸಿಸಲು ಮೊದಲು ಮಾಡಿದನು. ವಿಶ್ವವಿದ್ಯಾನಿಲಯದ ಪ್ಲಿನಿಯನ್ ಸಂಘವನ್ನು ಸೇರಿ, ತನ್ನ ಗೆಳೆಯರೊಡನೆಯೂ ಗುರು ವರ್ಗದವರೊಡನೆಯೂ ಹತ್ತಿರದ ದ್ವೀಪಗಳಿಗೂ ಸಮುದ್ರತೀರಕ್ಕೂ ಹೋಗಿ ಅಲ್ಲಿಯ ಪ್ರಾಣಿ ಮತ್ತು ಸಸ್ಯ ವರ್ಗಗಳನ್ನು ಪರಿಶೀಲಿಸುತ್ತಿದ್ದನು. 'ಸಾಗರದ ಚಾಪೆ' ಎಂಬ ಪ್ರಾಣಿಯ ಚಲನೆಯನ್ನೂ ಸಾಮಾಜಿಕ ಜೀವನವನ್ನೂ ಸಂಶೋಧಿಸಿ ಜೀವ ವಿಜ್ಞಾನದಲ್ಲಿ ಒಂದು ಹೊಸ ಜ್ಞಾನವನ್ನು ಆಗಲೇ ಹರಡಿದ್ದನು. ಅಷ್ಟುಹೊತ್ತಿಗೆ ಅವನು ಕೇವಲ ಹುಡುಗರಂತೆ ಪದಾರ್ಥಗಳನ್ನು ಸಂಗ್ರಹಿಸಿ ಪರಿಶೀಲಿಸ ವುದರಲ್ಲೇ ತೃಪ್ತನಾಗದೆ ವಿಜ್ಞಾನಿಯಂತೆ ಹೊಸಹೊಸ ವಿಷಯಗಳನ್ನು ಸಂಶೋಧಿಸು ತ್ತಿದ್ದನು. ಅವಕಾಶ ದೊರೆತಾಗ ತನ್ನ ಸಂಶೋಧನೆಗಳನ್ನು ಪ್ಲಿನಿಯನ್ ಸಂಘದಲ್ಲಿ ಓದಿ ಸಾರ್ವಜನಿಕವಾಗಿ ಪ್ರಕಟಿಸುತ್ತಿದ್ದನು.

ಎಡಿನ್ಬರೋ ವಿಶ್ವವಿದ್ಯಾನಿಲಯದ ನಿಸರ್ಗ ಶಾಸ್ತ್ರಶಿಕ್ಷಕರಾಗಿದ್ದ ಗ್ರ್ಯಾಂಟರನ್ನು ಕಂಡರೆ ಡಾರ್ವಿನ್ನನಿಗೆ ತುಂಬ ಆಸಕ್ತಿ ಮತ್ತು ಭಕ್ತಿ. ಅವರ

ಬಳಿಯಲ್ಲುಳಿದು ಅವರ ಸಲಹೆಯನ್ನು ಪಡೆದು, ಹಲವು ಸಂಶೋಧನೆಗಳನ್ನಾರಂಭಿಸಿದ್ದನು. ಜೇವ್ಸನ್ನರೆಂಬ ಮತ್ತೊಬ್ಬ ನಿಸರ್ಗ ಶಾಸ್ತ್ರಪಂಡಿತರು ಅನೇಕ ಗ್ರಂಥಗಳನ್ನು ರಚಿಸಿದ್ದರು. ಅವುಗಳನ್ನು ಡಾರ್ವಿನ್ ಆಸಕ್ತಿಯಿಂದ ಓದುತ್ತಿದ್ದನು. ಹಾಗೆ ಅವರ ಗ್ರಂಥವೊಂದನ್ನು ಓದುತ್ತಿರುವಾಗ 'ಜೀವಿಗಳಲ್ಲಿ ಬೇರೆಬೇರೆ ಜಾತಿಗಳು ಹುಟ್ಟಿದ ಬಗೆ ಹೇಗೆ?' ಎಂಬ ಸಮಸ್ಯೆ ಅವನ ಮನಸ್ಸಿನಲ್ಲಿ ಹುಟ್ಟಿತಂತೆ.

**ಗ್ರಂಥ ಪರಿಚಯ**

ವೈದ್ಯಶಾಸ್ತ್ರವನ್ನು ಬಿಟ್ಟು ನಿಸರ್ಗ ಶಾಸ್ತ್ರಾಭ್ಯಾಸವನ್ನು ಮೊದಲು ಮಾಡಿರುವುದನ್ನು ಕಂಡ ಡಾರ್ವಿನ್ನನ ಮನೆಯವರು ಮತಧರ್ಮದ ಶಿಕ್ಷಣವನ್ನಾದರೂ ಪಡೆದು ಪಾದ್ರಿಯಾಗೆಂದು ಅವನನ್ನು ಒತ್ತಾಯ ಪಡಿಸಿದರು. ಆ ಸಲಹೆಯಂತೆ ಮತಧರ್ಮವನ್ನು ಅಭ್ಯಾಸಿಸಲು ಡಾರ್ವಿನ್ ಕೇಂಬ್ರಿಡ್ಜಿಗೆ ಹೋಗಬೇಕಾಯಿತು. ಮೊದಮೊದಲು ಆಸಕ್ತಿಯಿಂದ ಧರ್ಮಗ್ರಂಥಗಳನ್ನು ಓದಿ ಬೈಬಲಿನಲ್ಲಿ ಹೇಳಿರುವ ವಿಚಾರಗಳನ್ನು ತಿಳಿದುಕೊಂಡುದಲ್ಲದೆ ಪೂರ್ಣವಾಗಿ ನಂಬುತ್ತಲೂ ಬಂದನು. ಮತವಾದಿಯಾಗಿ ಮುಂದೆ ತಾನು ಹಳ್ಳಿಯಲ್ಲಿ ನೆಲಸಬಹುದಾದ್ದರಿಂದ ಕಾಡುಮೇಡುಗಳಲ್ಲಿ ತಿರುಗಿ ಬೇಟೆಯಾಡುವುದಕ್ಕನುಕೂಲವಾಗುವುದೆಂದು ಅವನಿಗೂ ಆಸೆಯಿತ್ತು. ಆದರೆ ಹಲವು ದಿನಗಳಲ್ಲೇ ಆ ಶಿಕ್ಷಣದಲ್ಲೂ ತನಗೆ ಅಭಿರುಚಿಯಿಲ್ಲವೆಂದು ಮನಗಂಡು ಡಾರ್ವಿನ್ ತನ್ನ ಮನಸ್ಸನ್ನು ಸೆಳೆದಿದ್ದ ನಿಸರ್ಗ ಶಾಸ್ತ್ರವನ್ನೇ ಮರಳಿ ಅಭ್ಯಾಸಿಸಿ ಪದವೀಧರನಾಗಲು ಸಿದ್ಧನಾದನು. ಅವನು ಹಿಂದೆ ಅಭ್ಯಾಸಿಸಿದ್ದ ಸಾಹಿತ್ಯ, ಲಕ್ಷಣ ಶಾಸ್ತ್ರ ಮೊದಲಾದ ಭಾಗಗಳೆಲ್ಲ ಅಂದಿಗೆ ಪೂರ್ತಿಯಾಗಿ ಮರೆತು ಹೋಗಿದ್ದುದರಿಂದ ಒಬ್ಬ ಪ್ರತ್ಯೇಕ ಉಪಾಧ್ಯಾಯರನ್ನಿಟ್ಟುಕೊಂಡು ಮನೆಯಲ್ಲೇ ಅಭ್ಯಾಸಿಸಿಕೊಂಡು ಅನಂತರ ಕಾಲೇಜಿಗೆ ಸೇರಿದನು. ಆಗ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ಗಣಿತಶಾಸ್ತ್ರಕ್ಕೂ ಸಾಹಿತ್ಯಕ್ಕೂ ಹೆಚ್ಚು ಪ್ರಾಧಾನ್ಯವಿತ್ತು. ನಿಸರ್ಗಶಾಸ್ತ್ರಕ್ಕೆ ಅಷ್ಟು ಪ್ರಾಮುಖ್ಯತೆ ಇರದಿದ್ದರೂ ಆ ಶಾಲೆಯಲ್ಲಿದ್ದ ಹಲವು ವಿಖ್ಯಾತ ವಿಜ್ಞಾನಿಗಳು ಡಾರ್ವಿನ್ನನ ಮನಸ್ಸನ್ನಾಕರ್ಷಿಸಿದರು. ಭೂಮಿಶಾಸ್ತ್ರವನ್ನು ಬಹುವಾಗಿ ಬೆಳಸಿ ಕೀರ್ತಿ ಗಳಿಸಿದ್ದ ಸೆಡ್ಜ್‌ವಿಕ್ಕರು

**ಕೇಂಬ್ರಿಡ್ಜಿನಲ್ಲಿ ವಿದ್ಯಾಭ್ಯಾಸ**

ಅವರಲ್ಲೊಬ್ಬರು. ಸಸ್ಯಶಾಸ್ತ್ರಶಿಕ್ಷಕರಾಗಿದ್ದ ಹೆನ್ಸ್ಲೋರವರು ಶಿಕ್ಷಣ ಚತುರರೆಂದು ಹೆಸರು ಪಡೆದಿದ್ದರು. ದೀನವರ್ಗದ ಹೂವೊಂದರಲ್ಲೂ ಸಹ ಅಡಗಿರುವ ದಿವ್ಯತತ್ವಗಳನ್ನು ಮನರಂಜಿಸುವಂತೆ ಅವರು ಬೋಧಿಸುತ್ತಿದ್ದರು. ಇಂಥ ಉದ್ದಾಮ ವಿಜ್ಞಾನಿಗಳೂ ಉತ್ತಮ ವಾಗ್ಮಿಗಳೂ ಇದ್ದ ವಿದ್ಯಾಕೇಂದ್ರದಲ್ಲಿ ಡಾರ್ವಿನ್ ತನ್ನ ಶಾಸ್ತ್ರಾಭ್ಯಾಸವನ್ನು ಮುಂದುವರಿಸಿದನು. ಅಲ್ಲಿಯೂ ಅವನಿಗೆ ಕೇವಲ ತರಗತಿಯ ವ್ಯಾಸಂಗದಲ್ಲಿ ಬೇಸರಹುಟ್ಟಿದ್ದರೂ ಅಲ್ಲಿನ ಗುರುವರ್ಗದವರ ವ್ಯಕ್ತಿವೈಶಿಷ್ಟ್ಯಗಳು ಅವನ ಮನಸ್ಸಿಗೆ ಉಲ್ಲಾಸವನ್ನೀಯುತ್ತಿದ್ದುವು. ಹಾಗೂ ಹೀಗೂ ಮಾಡಿ ಪದವೀಧರನಾಗಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ಅಭ್ಯಾಸಿಸುತ್ತ ಮಿಕ್ಕ ಕಾಲದಲ್ಲಿ ಕುದುರೆ ಸವಾರಿ, ಸಮಾಜದಲ್ಲಿ ನಿಲುಯುವುದು, ಪದಾರ್ಥಸಂಗ್ರಹಣ ಮೊದಲಾದ ಮನರಂಜನ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದನು. ಅವನು ಅನೇಕ ಜನ ಸ್ನೇಹಿತರನ್ನು ಮಾಡಿಕೊಂಡು ಅವರೊಡನೆ ಕಾಲಕಳೆಯುತ್ತಾ ಇದ್ದನು. ಅವರಲ್ಲಿ ಹಲವರು ಸಂಗೀತಪ್ರೇಮಿಗಳೂ ಕಲಾವಿದರೂ ಇದ್ದರು. ಡಾರ್ವಿನ್ ಕಲಾಪ್ರೇಮಿ; ಸಂಗೀತಪ್ರಿಯ. ಫಿಟ್ಸ್‌ವಿಲಿಯಂ ಎಂಬ ಕಲಾವಿದನ ಬಳಿ ಹಲವು ದಿನ ಕೆತ್ತನೆಯ ಕಲೆಯನ್ನು ಅಭ್ಯಾಸಿಸುತ್ತಿದ್ದನು. ಆಗಾಗ ಕಾಲೇಜಿನಲ್ಲಿ ನಡೆಯುತ್ತಿದ್ದ ಸಂಗೀತ ಕಚೇರಿಗೆ ತಪ್ಪದೆ ಹೋಗುತ್ತಿದ್ದನು. ಆದರೆ ಅವನಿಗೆ ಸಂಗೀತಜ್ಞಾನವೇನೂ ಇರಲಿಲ್ಲ ಯಾವ ರಾಗ ಪರಿಚಯವಿಲ್ಲದಿದ್ದರೂ ಆಸಕ್ತಿಯಿಂದ ಸಂಗೀತ ಕೇಳುವುದನ್ನು ಕಂಡು ಅವನ ಸ್ನೇಹಿತರು ತಮಾಷೆ ಮಾಡುತ್ತಿದ್ದರು. ಹೀಗೆ ಡಾರ್ವಿನ್ ವಿವಿಧಕಾರ್ಯಗಳ ಕಡೆ ಗಮನವೀಯುತ್ತಿದ್ದರೂ ಚಿಟ್ಟೆಗಳನ್ನು ಹಿಡಿಯುವುದನ್ನು ಮಾತ್ರ ನಿಲ್ಲಿಸಿದವನಲ್ಲ. ಎಡಿನ್ಬರೋದಲ್ಲಿ ಆರಂಭಿಸಿದ್ದ ಕೆಲವು ಸಂಶೋಧನೆಗಳನ್ನು ಮುಂದುವರಿಸುತ್ತಿದ್ದನು. ತನ್ನ ಚಿಟ್ಟೆಯ ಪರಿಶೀಲನೆಯ ಕಾರ್ಯವನ್ನಂತೂ ಇನ್ನೂ ಹೆಚ್ಚು ಆಸಕ್ತಿಯಿಂದ ಮಾಡುತ್ತಿದ್ದನು.

ಡಾರ್ವಿನ್ ಎಲ್ಲಿದ್ದರೂ ಸಂಗ್ರಹ ಕಾರ್ಯವನ್ನು ಮಾತ್ರ ಬಿಡುತ್ತಿರಲಿಲ್ಲ ಬೇರೆ ಬೇರೆ ಜಾತಿಯ ಅನೇಕ ಚಿತ್ರವಿಚಿತ್ರರೂಪಿನ ಚಿಟ್ಟೆಗಳನ್ನು ಅವನು ಕೇಂಬ್ರಿಡ್ಜಿನಲ್ಲಿ ಶೇಖರಿಸಿದ್ದನು. ಸಗಣಿಯ ಚಿಟ್ಟೆಗಳನ್ನು ಶೇಖರಿಸುವುದರಲ್ಲಂತೂ ಅವನ ಆಸಕ್ತಿ ದಿನದಿನಕ್ಕೂ ಬೆಳೆಯುತ್ತಲೇ ಇತ್ತು. ಇದಕ್ಕೆ

ಸಂಬಂಧಿಸಿದಂತೆ ತನ್ನ ಆತ್ಮಕತೆಯಲ್ಲೊಂದು ಪ್ರಸಂಗವನ್ನು ಅವನೇ ವಿವರಿಸಿರುವನು. ಒಂದುಸಲ ಸಗಣಿಯ ಚಿಟ್ಟೆಗಳನ್ನು ಹಿಡಿಯುವ ಉದ್ದೇಶದಿಂದ ಒಂದು ಮರದ ಚಕ್ಕೆಯನ್ನು ಕಿತ್ತನಂತೆ. ಆಗ ಕೂಡ ಚಿಟ್ಟೆಗಳ ಸಂಗ್ರಹ ಎರಡು ಚಿಟ್ಟೆಗಳನ್ನು ಎರಡು ಕೈಗಳಲ್ಲಿ ಹಿಡಿದುಕೊಂಡನು. ಅಷ್ಟು ಹೊತ್ತಿಗೆ ಮತ್ತೊಂದು ವಿಜಾತೀಯ ಚಿಟ್ಟೆ ಕಾಣಿಸಿಕೊಂಡಿತು. ಅವನು ಹೇಗಾದರೂ ಆ ವಿಚಿತ್ರ ಚಿಟ್ಟೆಯನ್ನು ಹಿಡಿಯಬೇಕೆಂದು ಮನಸ್ಸುಮಾಡಿದನು. ಆದರೆ ಒಂದೊಂದು ಕೈಯಲ್ಲೂ ಒಂದೊಂದು ಚಿಟ್ಟೆಯಿತ್ತು. ಆಗ ಒಂದನ್ನು ತನ್ನ ಬಾಯಲ್ಲಿ ಹಾಕಿಕೊಂಡು ಮೂರನೆಯದನ್ನು ಹಿಡಿಯಲು ಪ್ರಯತ್ನಿಸಿದನು. ಅಷ್ಟು ಹೊತ್ತಿಗೆ ಬಾಯಲ್ಲಿದ್ದ ಚಿಟ್ಟೆ ಒಂದು ವಿಧವಾದ ನಂಜನ್ನು ಕಾರಿಬಿಟ್ಟಿತಂತೆ! ಪಾಪ ಡಾರ್ವಿನ್ನನಿಗೆ ಎಷ್ಟು ಜಿಗುಪ್ಸೆಯಾಗಿರಬೇಕು! ಗಂಟಲಲ್ಲಿ ಉರಿಯುವಂತಾಗಿ ನಾಲಗೆ ಚುರುಚುರುಗುಟ್ಟಿತಂತೆ ಇಷ್ಟೊಂದು ಆಸಕ್ತಿಯಿಂದ ಚಿಟ್ಟೆಗಳನ್ನು ಸಂಗ್ರಹಿಸುತ್ತಿದ್ದರೂ ಅವನೆಂದೂ ಅವುಗಳನ್ನು ಹಿಂಸಿಸುತ್ತಿರಲಿಲ್ಲ. ಅವುಗಳ ಅಂಗರಚನೆ, ಗಾತ್ರ, ಬಣ್ಣ ಮೊದಲಾದ ಸ್ವಭಾವಗಳನ್ನು ಪರಿಶೀಲಿಸುತ್ತಿದ್ದನು. ಆ ಚಿಟ್ಟೆಯ ಶರೀರ ರಚನೆಗೂ ಗ್ರಂಥದಲ್ಲಿ ಕೊಟ್ಟಿರುವ ಆ ಪ್ರಾಣಿಯ ಶರೀರದ ಚಿತ್ರಗಳಿಗೂ ಹೋಲಿಸಿ ವ್ಯತ್ಯಾಸಗಳನ್ನು ಗುರುತಿಸುತ್ತಿದ್ದನು. ಆ ಚಿಟ್ಟೆ ಹೊಸ ಜಾತಿಯದಾಗಿದ್ದರೆ, ಅದಕ್ಕನ್ವಯಿಸುವ ತಕ್ಕ ಹೆಸರೊಂದನ್ನು ಕೊಡುತ್ತಿದ್ದನು ಮೊದಮೊದಲು ಸಂಗ್ರಹಕಾತರದಿಂದ, ಜೀವವಾಗಿರುವ ಚಿಟ್ಟೆಗಳನ್ನೇ ಹಿಡಿದ, ಕೊಂದು ತುಂಬಿಕೊಳ್ಳುತ್ತಿದ್ದರೂ ಅವನ ಸಹೋದರಿ ಕ್ಯಾಥರೀನಳ ಬುದ್ಧಿಮಾದದಂತೆ ಅನಂತರ ಸತ್ತ ಚಿಟ್ಟೆಗಳನ್ನು ಮಾತ್ರ ಆರಿಸಿ ಸಂಗ್ರಹಿಸುತ್ತಿದ್ದನು.

ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ಭೂಮಿಶಾಸ್ತ್ರ ಎಂಬಿವು ಪ್ರಕೃತಿಶಾಸ್ತ್ರದ ಮೂರು ಶಾಖೆಗಳು. ಎಡಿನ್ಬರೋವನ್ನು ಬಿಡುವಹೊತ್ತಿಗೆ ಡಾರ್ವಿನ್ನನಿಗೆ ಸಸ್ಯ ಸಾಸ್ತ್ರದಲ್ಲೂ ಪ್ರಾಣಿಶಾಸ್ತ್ರದಲ್ಲೂ ಪ್ರವಾಸದಲ್ಲಿ ಆಸಕ್ತಿ ಸಾಕಾದಷ್ಟು ಪರಿಚಯವಾಗಿ, ಕೇಂಬ್ರಿಡ್ಜಿಗೆ ಬಂದ ಮೇಲೆ ಅವುಗಳಿಗೆ ಸಂಬಂಧಿಸಿದ ಉಚ್ಚಜ್ಞಾನವನ್ನು ಪಡೆದಂತೆ ಅವನ ಮನಸ್ಸಿನಲ್ಲಿ ಭೂಮಿಯ ಬೇರೆಬೇರೆ ಭಾಗಗಳಿಗೆ ಹೋಗಿ

ಅಲ್ಲಿನ ಸಸ್ಯವರ್ಗವನ್ನೂ ಪ್ರಾಣಿವರ್ಗವನ್ನೂ ಕಣ್ಣಾರ ನೋಡಿ ಗ್ರಂಥ ದಿಂದ ಪಡೆದಿದ್ದ ಜ್ಞಾನವನ್ನು ಪ್ರಾಯೋಗಿಕವಾಗಿ ಪರಿಷ್ಕರಿಸಬೇಕೆಂಬ ಕಾತ ರತೆ ಬೆಳೆಯುತ್ತಿತ್ತು. ಅದಕ್ಕಾಗಿ ತನ್ನ ಮಿತ್ರರೊಡನೆ ಒಂದು ಸಂಘವನ್ನೇ ಏರ್ಪಡಿಸಿಕೊಂಡು ಆಗಾಗ ಹತ್ತಿರದ ದ್ವೀಪಗಳಿಗೆ ಹೋಗಿ ಅಲ್ಲಿನ ಸಸ್ಯ ಗಳನ್ನೂ ಪ್ರಾಣಿಗಳನ್ನೂ ಪರಿಶೀಲಿಸಿ ಹೊಸಹೊಸ ವಿಷಯಗಳನ್ನರಿತು ಕೊಂಡು ಹೆನ್ಸ್ಲೋರವರ ಮೆಚ್ಚಿಗೆಯನ್ನು ಪಡೆದನು.

ಹೆನ್ಸ್ಲೋರವ ರೊಡನೆ ಸಂಬಂಧ

ಡಾರ್ವಿನ್ನನಲ್ಲಿ ಹುದುಗಿದ್ದ ಮಹಾ ಪ್ರತಿಭೆಯನ್ನರಿತುಕೊಂಡವರಲ್ಲಿ ಹೆನ್ಸ್ಲೋರವರೇ ಮೊದಲನೆಯವರು. ವಿದ್ಯಾರ್ಥಿಗಳನ್ನು ಸೂಕ್ಷ್ಮವಾಗಿ ಅರಿತುಕೊಂಡು ಅವರ ಪ್ರತಿಭೆಗೊಪ್ಪುವ ಶಿಕ್ಷಣಕೊಡುವುದರಲ್ಲಿ ಅವರಿಗೆ ತುಂಬ ಪರಿಜ್ಞಾನವಿತ್ತು. ವಿಶ್ವವಿದ್ಯಾನಿಲಯದಲ್ಲಿ ಅವರು ಸಸ್ಯಶಾಸ್ತ್ರಪಂಡಿತರಾಗಿದ್ದರೂ ಪ್ರಕೃತಿಶಾಸ್ತ್ರದ ಇನ್ನೆರಡು ಶಾಖೆಗಳಲ್ಲೂ ಅವರಿಗೆ ನಾಕಾದಷ್ಟು ಪರಿ ಚಯವಿತ್ತು. ಅವರ ಸಲಹೆಯಂತೆ ಡಾರ್ವಿನ್ ಭೂಮಿಶಾಸ್ತ್ರವನ್ನು ಆಸಕ್ತಿ ಯಿಂದ ಅಭ್ಯಾಸಮಾಡಲು ಮೊದಲು ಮಾಡಿದನು. ಹೆನ್ಸ್ಲೋರವರ ಸರಳ ಸ್ವಭಾವ ಅವನ ಮನಸ್ಸನ್ನಾಕರ್ಷಿಸಿ ಅವರೊಡನೆ ಪರಿಚಯವನ್ನು ಹೆಚ್ಚಿಸಿ ಕೊಳ್ಳಲು ಅವಕಾಶಕೊಟ್ಟಿತು. ವಿದ್ಯಾರ್ಥಿಗಳೆಂದರೆ ಅವರಿಗೆ ಪ್ರಾಣ. ಅವರೊಡನೆ ಆದರದಿಂದಿದ್ದು ನಿರ್ವಂಚನೆಯಿಂದ ಜ್ಞಾನದಾನಮಾಡುತ್ತಿ ದ್ದರು ಅಂಥ ಮಹಾನುಭಾವರು ಡಾರ್ವಿನ್ನನಂಥ ಪ್ರಕೃತಿವಿಜ್ಞಾನಿಗೆ ಹೆಚ್ಚು ಅಭಿರುಚಿ ಹುಟ್ಟಿಸಿ ಮಾರ್ಗದರ್ಶಕರಾದದು ಆಶ್ಚರ್ಯವಲ್ಲ. ವಿಜ್ಞಾನ ಶಾಸ್ತ್ರದಲ್ಲಿ ಅವರಿಗಿದ್ದ ವಿಶಾಲ ಪರಿಚಯವನ್ನು ಕಂಡು ಡಾರ್ವಿನ್ನನ ಮನಸ್ಸಿ ನಲ್ಲಿ ಭಕ್ತಿ ಮಮತೆಗಳು ಹೆಚ್ಚಿದುವು. ದೊಡ್ಡಪದವಿಯನ್ನಲಂಕರಿಸಿದ್ದರೂ ಅವರಲ್ಲಿ ಆತ್ಮಪ್ರಶಂಸೆಯಿಲ್ಲದುದನ್ನು ಕಂಡು ಅವನು ಚಕಿತನಾಗಿ ಹೋಗಿ ದ್ದನು. ಅವನ ಪುರೋಭಿವೃದ್ಧಿಗೆ ಅವಶ್ಯಕವಾದ ಎಲ್ಲ ಸಹಾಯಗಳನ್ನೂ ನೀಡುವುದರಲ್ಲಿ ತಾವೇ ಮುಂದೆ ಬರುತ್ತಿದ್ದುದನ್ನು ಅರಿತಾಗ ಡಾರ್ವಿನ್ನನ ತರುಣ ಹೃದಯ ಆನಂದದಿಂದ ಹಿಗ್ಗಿತು.

ಹೆನ್ಸ್ಲೋರವರು ಸರಳ ಜೀವನವನ್ನು ನಡೆಸುತ್ತ ಉದಾರಿಗಳಾಗಿದ್ದರು. ವಿದ್ಯಾರ್ಥಿಗಳ ಉಪಯೋಗಕ್ಕಾಗಿ ತಮ್ಮ ಮನೆಯಲ್ಲೇ ಉಪನ್ಯಾಸಗಳನ್ನು

ಮಾಡುತ್ತಿದ್ದರು. ಅನೇಕ ವಿದ್ಯಾರ್ಥಿಗಳಂತೆ. ಡಾರ್ವಿನ್ನನು ತಪ್ಪದೆ ಉಪನ್ಯಾಸಗಳಿಗೆ ಹೋಗುತ್ತಿದ್ದನು. ಇತರ ಹಲವು ಪ್ರಸಿದ್ಧ ವಿಜ್ಞಾನಿಗಳೂ ಅಲ್ಲಿಗೆ ಬಂದು ವಿದ್ಯಾರ್ಥಿಗಳಿಗೆ ತಮ್ಮ ಸಲಹೆಗಳನ್ನು ಕೊಡುತ್ತಿದ್ದರು. ಆ ಮೂಲಕ ಡಾರ್ವಿನ್ನನಿಗೆ ವಿಜ್ಞಾನಿಗಳೊಡನೆ ಪರಿಚಯವಾಯಿತು. ಆಗಾಗ ಹತ್ತಿರದ ದ್ವೀಪಗಳಿಗೆ ಹೆನ್ಸ್ಲೋರವರು ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ಆವಶ್ಯಕವಾದ ತಿಳಿವಳಿಕೆ ಹೇಳುತ್ತಿದ್ದರು. ಅಷ್ಟುಹೊತ್ತಿಗೆ ಡಾರ್ವಿನ್ ಭೂವಿಜ್ಞಾನಶಾಸ್ತ್ರದಲ್ಲಿ ಸಾಕಷ್ಟು ಪರಿಚಯ ಪಡೆದಿದ್ದುದರಿಂದ ಹೊರಗಡೆ ಹೋದಾಗ ಭೂಲಕ್ಷಣಾದಿಗಳನ್ನು ಪರಿಶೀಲಿಸಲು ಹೆಚ್ಚು ಸಹಾಯವಾಯಿತು. ತನ್ನ ಗುರುಗಳೊಡನೆ ಕೈಗೊಳ್ಳುತ್ತಿದ್ದ ವಿಜ್ಞಾನಯಾತ್ರೆಯ ಅನುಭವದ ಸವಿನೆನಪು ಅವನ ಮನಸ್ಸಿನಲ್ಲಿ ಯಾವಾಗಲೂ ಹೊಸದಾಗುಳಿದು ಆನಂದವುಂಟುಮಾಡುತ್ತಿತ್ತಂತೆ. ಪ್ರವಾಸ ಕಾಲದಲ್ಲಿ ತಾನು ಸಂಗ್ರಹಿಸಿದ್ದ ವಸ್ತುಗಳನ್ನು ಕುರಿತು ಅವನು ಹೆನ್ಸ್ಲೋರವರೊಡನೆಯೂ ಗೆಳೆಯರೊಡನೆಯೂ ವಿಚಾರಪೂರಿತವಾದ ಪುಟ್ಟಪುಟ್ಟ ಭಾಷಣಗಳನ್ನು ಮಾಡಿ ಎಲ್ಲರ ಮೆಚ್ಚಿಗೆಯನ್ನೂ ಪಡೆಯುತ್ತಿದ್ದನು.

ಹೆನ್ಸ್ಲೋರವರೊಡನೆ ಸಂಬಂಧ ಹೆಚ್ಚಿದಂತೆ ಡಾರ್ವಿನ್ನನ ಜ್ಞಾನ ಭಂಡಾರವೂ ಬೆಳೆಯುತ್ತ ಹೋಯಿತು. ತರಗತಿಯ ಪಾಠಗಳಿಗಿಂತ ಪ್ರಕೃತಿಯಲ್ಲಿ ಅವನಿಗಿದ್ದ ಆಸಕ್ತಿಯನ್ನು ಅವರು ಅರಿತುಕೊಂಡು ಅವನಿಂದ ಮಹಾ

**ಹೆನ್ಸ್ಲೋರವರ ಕೈವಾಡ**

ಕಾರ್ಯವೊಂದರ ಸಾಧನೆಯಾಗುವುದೆಂದು ದೃಢವಾಗಿ ನಂಬಿದ್ದರು. ಸಮಯ ದೊರೆತಾಗ ಅವರು ವಿಜ್ಞಾನಕ್ಕೂ ಮತಗಳಿಗೂ ಇರುವ ಅಂತರವನ್ನು ವಿವರಿಸಿ ಹೇಳುತ್ತಿದ್ದರು. ಡಾರ್ವಿನ್ ಮುಂದೆ ವಿಚಾರಕ್ರಾಂತಿಯನ್ನುಪದೇಶಿಸಿದ ಮಹಾಕಾರ್ಯಕ್ಕೆ ಹೆನ್ಸ್ಲೋರವರು ತುಂಬುತ್ತಿದ್ದ ಈ ತೇಜಸ್ಸು ತಕ್ಕಮಟ್ಟಿಗೆ ನೆರವಾಯಿತೆನ್ನಬಹುದು. ಅವರ ನೇತೃತ್ವದಲ್ಲೇ 'ಸಿರಿಪೀಡಿಯ' ಜಾತಿಗೆ ಸೇರಿದ 'ಬಾರ್ನಕಲ್' ಎಂಬ ಸಮುದ್ರನಳ್ಳಿಯೊಂದರ ಜೀವನ ಚರಿತ್ರೆಯನ್ನು ಸಂಶೋಧಿಸಿ ಪ್ರಕಟಿಸಿದನು.

೧೮೩೧ರಲ್ಲಿ ಡಾರ್ವಿನ್ ಬಿ ಎ ಪದವೀಧರನಾದನು. ತನ್ನ ಗುರುಗಳ ಸಲಹೆ ಸಹಕಾರಗಳನ್ನು ಪಡೆದು ಹಲವು ಸಂಶೋಧನೆಗಳನ್ನು ನಡೆಯಿಸುತ್ತಲೇ

ಇದ್ದನು. ತರಗತಿಯ ವ್ಯಾಸಂಗವನ್ನು ಮುಂದುವರಿಸಿ ಎಂ. ಎ. ಪದವಿಯನ್ನೂ ಪಡೆದನು. ಅಷ್ಟು ಹೊತ್ತಿಗೆ ಅವನ ಶಾಸ್ತ್ರಜ್ಞಾನ ಅಪಾರ ಪದವೀಧರನಾದನು ವಾಗಿ ಬೆಳೆದು, ಉದ್ದಾಮ ಪಂಡಿತನಾಗಿದ್ದನು. ಒಟ್ಟಿನಲ್ಲಿ ನೋಡಿದರೆ ಕೇಂಬ್ರಿಡ್ಜಿನ ವಿದ್ಯಾಭ್ಯಾಸ ಹೆಚ್ಚು ಫಲಪ್ರದ ವಾಯಿತು. ಅವನು ತನ್ನ ಗುರುವರ್ಯರ ನೇತೃತ್ವದಲ್ಲಿ ದುಡಿದು ಜಗದ್ವಿಖ್ಯಾತ ತತ್ವಜ್ಞಾನಿಯಾಗಲು ಅವಕಾಶ ದೊರೆಯಿತು. ತನಗೂ ತನ್ನ ಗುರುಗಳಿಗೂ ಇದ್ದ ಮಧುರ ಬಾಂಧವ್ಯವನ್ನೂ, ಅವರು ತನ್ನ ಮನಸ್ಸಿನ ಮೇಲೆ ಚಿತ್ರಿಸಿದ ಜೀವನದ ಗುರಿಯನ್ನೂ ಡಾರ್ವಿನ್ ಆಜೀವವೂ ಸ್ಮರಿಸಿಕೊಂಡು ಗುರುವರ್ಯರ ಕೀರ್ತಿಗೌರವಗಳನ್ನು ಹೊಗಳುತ್ತಿದ್ದನು.

## ೩. ಬೀಗಲ್ ವಿಜ್ಞಾನಯಾತ್ರೆ

ದೇಶಯಾತ್ರೆಯೂ ಒಂದು ಶಿಕ್ಷಣಕ್ರಮ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋದಾಗ ನಾವು ಕೇಳಿರುವ ಅನೇಕ ವಸ್ತುಗಳನ್ನು ಕಣ್ಮನಗಳೊಪ್ಪುವಂತೆ ಪರಿಶೀಲಿಸಿ ತಿಳಿದುಕೊಳ್ಳಬಹುದು. ಪದಾರ್ಥಗಳ ಮತ್ತು ಸನ್ನಿವೇಶಗಳ ಪ್ರತ್ಯಕ್ಷ ಪರಿಶೀಲನೆಯು ಶಿಕ್ಷಣ ದೃಷ್ಟಿಯಿಂದ ತುಂಬ ಅಮೂಲ್ಯವಾದುದು. ಗ್ರಂಥಜ್ಞಾನದಿಂದ ತಿಳಿದ ವಿಷಯಗಳನ್ನು ಪ್ರಾಯೋಗಿಕವಾಗಿ ನೋಡಿ ತಿಳಿದುಕೊಳ್ಳಬಹುದು. ಯಾತ್ರಿಕರು ಉತ್ಸಾಹಿಗಳೂ ಕಾರ್ಯತತ್ಪರರೂ ಸೂಕ್ಷ್ಮಜ್ಞಾನಿಗಳೂ ಆದರೆ ಆ ಶಿಕ್ಷಣದಿಂದ ಇನ್ನೂ ಹೆಚ್ಚು ಫಲಪಡೆಯಬಹುದು. ಮಹಾಪುರುಷರನೇಕರು ದೇಶಯಾತ್ರೆಯನ್ನು ಒಂದಲ್ಲ ಒಂದು ಕಾರಣದಿಂದ ಮಾಡಿಯೇ ಇರುವರು. ಡಾರ್ವಿನ್ನನಿಗೆ ಬಾಲ್ಯದಿಂದಲೂ ದೇಶಾಟನೆಯಲ್ಲಿ ಆಸಕ್ತಿಯಿತ್ತು. ವಿದ್ಯಾರ್ಥಿಯಾಗಿದ್ದಾಗ ಹತ್ತಿರದ ಸ್ಥಳಗಳಿಗೆ ಸಂಶೋಧನೆಗಾಗಿ ಹೋಗಿಬರುತ್ತಿದ್ದನು. ಅವಕಾಶ ದೊರೆತರೆ ಬಹು ದೂರ ಪ್ರದೇಶಗಳನ್ನೂ ಸಂದರ್ಶಿಸಿ, ಅಲ್ಲಿನ ಜೀವವರ್ಗವನ್ನು ಪರಿಶೀಲಿಸಬೇಕೆಂಬ ಹೆಬ್ಬಯಕೆ ಅವನ ಮನಸ್ಸಿನಲ್ಲಿ ಬೆಳೆಯುತ್ತಿತ್ತು.

**ದೇಶಯಾತ್ರೆಯೂ ಒಂದು ಶಿಕ್ಷಣ ಕ್ರಮ**

ದಕ್ಷಿಣ ಅಮೆರಿಕದ ಪ್ರಕೃತಿ ಶಾಸ್ತ್ರವನ್ನು ಅಭ್ಯಾಸಿಸಿಕೊಂಡು ಬರಲು ವಿಜ್ಞಾನಪ್ರೇಮಿಗಳೂ ಬ್ರಿಟಿಷ್ ಸರಕಾರದವರೂ ಸಹಕರಿಸಿ ಬೀಗಲ್ ಎಂಬ ೨೪೨ ಟನ್ ತೂಕದ ಹಡಗೊಂದನ್ನು ಸಿದ್ಧಪಡಿಸಿದರು. ಫಿಟ್ಸ್‌ರಾಯ್ ಎಂಬುವನ ಮುಖಂಡತನದಲ್ಲಿ ನಾವೆ ಯಾತ್ರೆಗೆ ಹೊರಡುವಂತೆ ನಿಶ್ಚಯವಾಯಿತು. ಅಂಥ ವಿಜ್ಞಾನಯಾತ್ರೆಯ ಮಹಾಕಾರ್ಯವನ್ನು ನೆರವೇರಿಸಲು ದಕ್ಷರಾದ ನಿಸರ್ಗ ವಿಜ್ಞಾನಿಗಳೊಬ್ಬರು ಬೇಕಾಗಿತ್ತು. ಆ ವೇಳೆಗೆ ಡಾರ್ವಿನ್ ಉತ್ತರ ವೇಲ್ಸಿನ ಭೂಶಾಸ್ತ್ರವನ್ನು ಅಭ್ಯಾಸಿಸಿಕೊಂಡು ಮನೆಗೆ ಹಿಂದಿರುಗಿದ್ದನು. ಹೆನ್ಸ್ಲೋರವರು ಡಾರ್ವಿನ್ನನ ಸ್ವಭಾವ, ಯೋಗ್ಯತೆ ಮತ್ತು ಪಾಂಡಿತ್ಯಗಳನ್ನು ಚೆನ್ನಾಗಿ ಅರಿತಿದ್ದುದರಿಂದ ಬೀಗಲ್ ವಿಜ್ಞಾನ ಯಾತ್ರೆಯ ಸ್ಥಾನಕ್ಕೆ ಅವನ

**ಬೀಗಲ್ ಯಾತ್ರೆಯ ನಿಸರ್ಗ ವಿಜ್ಞಾನಿ**

ಹೆಸರನ್ನು ಸೂಚಿಸಿದರು. ತನಗೆ ಅಪಾರ ಪಾಂಡಿತ್ಯವಿದ್ದರೂ ತನ್ನದು ಅತ್ಯಲ್ಪವೆಂದೇ ಭಾವಿಸಿ ಸಂಕೋಚಪಡುವ ಸ್ವಭಾವ ಡಾರ್ವಿನ್ನನದು. ಆದುದರಿಂದ ಹೆನ್ಸ್ಲೋರವರು ಅವನಿಗೊಂದು ಕಾಗದ ಬರೆದು, 'ಈ ಸ್ಥಾನಕ್ಕೆ ನೀನು ಅನರ್ಹನೆಂದು ಎಂದೂ ಯೋಚಿಸದಿರು; ನಿನ್ನ ಸ್ವಭಾವವೂ ಪಾಂಡಿತ್ಯವೂ ಆ ಕಾರ್ಯಕ್ಕೆ ತಕ್ಕವಾಗಿವೆಯೆಂಬುದರಲ್ಲಿ ನನಗೆ ನಂಬಿಕೆಯಿದೆ. ನಿನಗಿಂತ ಉತ್ತಮ ವಿಜ್ಞಾನಿಗಳು ದೊರೆಯುವುದು ದುರ್ಲಭ. ನೀನು ಸ್ವಲ್ಪವೂ ಸಂಕೋಚಪಡದೆ ಯಾತ್ರೆಗೆ ಹೊರಡಲು ಸಿದ್ಧನಾಗು' ಎಂದು ಹಿತಚಿಂತಕರಂತೆ ಅಭಯವನ್ನು ಕೊಟ್ಟರು. ಅವರ ಸೂಚನೆಯಂತೆ ಫಿಟ್ಸ್ ರಾಯನೂ ಡಾರ್ವಿನ್ನನಿಗೆ ಒಂದು ಕಾಗದವನ್ನು ಬರೆದು, ಆ ಕಾರ್ಯಕ್ಕೊಪ್ಪಿಕೊಂಡು ಯಾತ್ರೆಗೆ ಹೊರಡಲು ಸಿದ್ಧನಾಗಬೇಕೆಂದು ಕೇಳಿಕೊಂಡಿದ್ದನು. ಡಾರ್ವಿನ್ ಕಾಗದವನ್ನು ನೋಡಿ ಆನಂದದಿಂದ ಹಿಗ್ಗಿಹೋದನು. ಆದರೆ ಆ ಮಹಾಗೌರವಕ್ಕೆ ತನ್ನ ಪಾಂಡಿತ್ಯವೇ ಕಾರಣವೆಂದು ಗಣಿಸಲಿಲ್ಲ; ಹೆನ್ಸ್ಲೋರವರಿಗೆ ತನ್ನ ಮೇಲಿದ್ದ ಆಸಕ್ತಿಯೇ ಕಾರಣವೆಂದು ತಿಳಿದುಕೊಂಡನು.

ಯಾತ್ರೆಗೆ ಸಿದ್ಧನಾಗುವನು

ಡಾರ್ವಿನ್ನನೇ ಕಿರಿಯ ಮಗನಾದುದರಿಂದ ಅವನನ್ನು ದಕ್ಷಿಣ ಅಮೇರಿಕದಂಥ ದೂರ ಪ್ರದೇಶಕ್ಕೆ ದೀರ್ಘಕಾಲದ ತನಕ ಕಳುಹಿಸಿಕೊಡಲು ಮನೆಯವರು ಮೊದಲು ಒಪ್ಪಲಿಲ್ಲ. ತನ್ನ ಮಗನು ಯಾವುದಾದರೂ ಜೀವನೋಪಾಯವನ್ನು ಹುಡುಕಿಕೊಳ್ಳಬೇಕೆಂಬ ಉದ್ದೇಶ ರಾಬರ್ಟನಿಗಿದ್ದುದರಿಂದ ವಿಜ್ಞಾನಯಾತ್ರೆಗೆ ಅವನನ್ನು ಕಳುಹಿಸಲೊಪ್ಪಲಿಲ್ಲ. ಯಾತ್ರೆಯಲ್ಲಿ ಭಾಗವಹಿಸಲು ಕಾತರನಾಗಿದ್ದ ಡಾರ್ವಿನ್ನನನ್ನು ಕುರಿತು 'ಯಾರಾದರೂ ಯೋಗ್ಯರು ನೀನು ಹೋಗುವುದು ಉಚಿತವೆಂದು ಒಪ್ಪಿದರೆ ನಾನು ನಿನ್ನನ್ನು ಕಳುಹಿಸಿಕೊಡುತ್ತೇನೆ' ಎಂದು ಹೇಳಿದನು. ದೇಶಾಟನೆಯಲ್ಲೂ ಸಂಗ್ರಹಕಾರ್ಯದಲ್ಲೂ ಅಪಾರ ಪ್ರೇಮವಿದ್ದರೂ ಮನೆಯವರೊಡನೆ ಹಠಮಾರಿತನದಿಂದ ವರ್ತಿಸಲು ಅವನಿಗೆ ಮನಸ್ಸು ಬರಲಿಲ್ಲ. ಅವನನು ಸೌಮ್ಯಸ್ವಭಾವ. ತೆಪ್ಪನೆ ಬೀಗಲ್ ಯಾತ್ರೆಯಲ್ಲಿ ಭಾಗವಹಿಸಲು ಸಾಧ್ಯವಿಲ್ಲವೆಂದು ನಾವೆಯ ಮುಖಂಡನಿಗೆ ತಿಳಿಸಿಬಿಟ್ಟನು. ಮಾರನೆಯ ದಿನ ಡಾರ್ವಿನ್ ಗೊರವಂಕದ ಹಕ್ಕಿಗಳ ಬೇಟೆಗಾಗಿ ಹೋಗಿರುವಾಗ ಸೋದರಮಾವನಾದ ಜೋಸೇಯ

ವೆಡ್ಜ್‌ವುಡ್ಡನು ಈ ವಿಚಾರವನ್ನು ಕೇಳಿ ಅವನು ಹೋಗುವುದೊಳ್ಳೆಯದೆಂದು ತಿಳಿದು ಷ್ರೂಸ್ಬರಿಗೆ ಬಂದ ರಾಬರ್ಟನನ್ನು ಕಂಡು, ಯಾತ್ರೆಗೆ ಹೋಗುವುದರಿಂದ ಡಾರ್ವಿನ್ನನ ಮುಂದಿನ ಜೀವನೋಪಾಯಕ್ಕೆ ಕುಂದು ಬರಲಾರದೆಂದೂ ಅದರಿಂದ ಅವನಿಗೆ ಅಪಾರ ಅನುಭವವಾಗುವುದೆಂದೂ ಒತ್ತಿ ಹೇಳಿ, ಕಳುಹಿಸಿಕೊಡುವಂತೆ ತಿಳಿಸಿದನು ರಾಬರ್ಟನಿಗೆ ಅವನಲ್ಲಿ ತುಂಬ ಗೌರವವಿದ್ದದರಿಂದ ಪ್ರತಿ ಹೇಳುವಂತಿರಲಿಲ್ಲ ಹಾಗೆಯೇ ಇತರ ಹಿತಾಕಾಂಕ್ಷಿಗಳೂ ಮನೆಯವರಿಗೆ ಧೈರ್ಯಹೇಳಿ ಒಪ್ಪಿಸಿದರು. ಆಗ ಡಾರ್ವಿನ್ ನಿಸರ್ಗವಿಜ್ಞಾನಿಯ ಸ್ಥಾನಕ್ಕೆ ಒಪ್ಪಿಗೆಯಿತ್ತು ಹೊರಡಲು ಸಿದ್ಧನಾದನು.

ರಾಯನನ್ನು ಕಾಣುವನು

ತನ್ನ ತಂದೆಯ ಮತ್ತು ಸೋದರ ಸೋದರಿಯರ ಒಪ್ಪಿಗೆಯನ್ನು ಪಡೆದು ಡಾರ್ವಿನ್ ಕೇಂಬ್ರಿಡ್ಜಿಗೆ ಬಂದು ರಾಯನನ್ನು ಕಾಣಲು ಹೋದನು. ರಾಯನಿಗೆ ಸಾಮುದ್ರಿಕ ಶಾಸ್ತ್ರದಲ್ಲಿ ಪರಿಚಯವಿತ್ತು. ಅವನ ಶಾಸ್ತ್ರದ ಪ್ರಕಾರ ದಪ್ಪ ಮೂಗುಳ್ಳವರಿಗೆ ಸಾಹಸ ಸಹನೆಗಳಿಲ್ಲವೆಂಬುದು ಸಿದ್ಧಾಂತ! ತರುಣ ಡಾರ್ವಿನ್ ಅವನೆದುರು ಬಂದು ನಿಂತೊಡನೆ ರಾಯನ ಕಣ್ಣುಗಳು ಅವನ ಮುಖದ ಮೇಲೆ ಓಡಾಡಲಾರಂಭಿಸಿದುವು ಪಾಪ! ಡಾರ್ವಿನ್ನನ ಮೂಗು ಮುಖದ ಮೇಲೆ ಪ್ರಧಾನವಾಗಿ ಕಾಣುತ್ತಿತ್ತು. ಕೂಡಲೆ ರಾಯನು ಡಾರ್ವಿನ್ ಅಂಥ ಸ್ಥಾನಕ್ಕೆ ಅಯೋಗ್ಯನೆಂದು ತೀರ್ಮಾನಿಸಿ, ಹಿಂದಕ್ಕೆ ಕಳುಹಿಸಿ ಬಿಡುವುದರಲ್ಲಿದ್ದನು. ಆದರೆ ಅವನಿಗಿಂತ ಉತ್ತಮ ವಿಜ್ಞಾನಿಗಳು ದೊರೆಯುಲಾರರೆಂದು ಹೆನ್ಸ್ಲೋರವರು ಒತ್ತಿಒತ್ತಿ ಹೇಳಿದ್ದರಿಂದ ರಾಯನು ಡಾರ್ವಿನ್ನನನ್ನು ಕೆಲಸಕ್ಕೆ ಸೇರಿಸಿಕೊಳ್ಳಬೇಕಾಯಿತು. ಮುಂದೆ ಪ್ರವಾಸಕಾಲದಲ್ಲಿ ಡಾರ್ವಿನ್ನನ ಅಪಾರ ಸಾಹಸಸಹನೆಗಳನ್ನು ಕಂಡಾಗ ರಾಯನಿಗೆ ತನ್ನ ಸಾಮುದ್ರಿಕ ಶಾಸ್ತ್ರದಲ್ಲಿ ನಂಬಿಕೆ ತಪ್ಪಿಹೋಗಿರಬೇಕು. ಯಾತ್ರೆಯಿಂದ ಹಿಂದಿರುಗಿದ ಮೇಲೆ ತನ್ನ ಮೂಗು ತನ್ನ ವಿಚಾರದಲ್ಲಿ ಅಪಪ್ರಚಾರ ಮಾಡುವುದರಲ್ಲಿತ್ತಲ್ಲಾ, ಎಂದು ಡಾರ್ವಿನ್ನನೂ ನೆನಸಿಕೊಂಡಿರಬೇಕು.

ಯಾತ್ರೆ ಮುಗಿಯುವವರೆಗೂ ಡಾರ್ವಿನ್ ಸಂಬಳವಿಲ್ಲದೆ ಕೆಲಸಮಾಡಲೊಪ್ಪಿಕೊಂಡರೂ ಆ ಕಾರ್ಯದಲ್ಲಿ ಪ್ರಧಾನ ವಿಜ್ಞಾನಿಯಾಗಿರುವ ಭಾಗ್ಯ

ದೊರೆತುದಕ್ಕಾಗಿ ಆನಂದಿಸಿದನು. ಮಧ್ಯಕಾಲದಲ್ಲಿ ತನ್ನ ಇಷ್ಟ ಬಂದಾಗ ಹಿಂದಿರುಗಲು ಅವಕಾಶವನ್ನು ಮೊದಲೇ ಪಡೆದು

ನಾವೆ ಹೊರಟಿತು

ಕೊಂಡನು. ನಾವೆಯನ್ನು ಮೊದಲು ಸಿದ್ಧಪಡಿಸಿದಾಗ ಅಮೆರಿಕದ ತೀರಪ್ರದೇಶಗಳಿಗೆ ಮಾತ್ರ ಹೋಗಿಬರುವು ದೆಂದು ಉದ್ದೇಶಿಸಿದ್ದರೂ, ಅನಂತರ ಪ್ರಪಂಚದ ಬೇರೆಬೇರೆ ಭಾಗಗಳನ್ನು ಸುತ್ತಿಕೊಂಡು ಬರಬೇಕೆಂದು ತೀರ್ಮಾನವಾಯಿತು. ಮೊದಮೊದಲು ಸಾಗರ ದಲ್ಲಿ ಬಿರುಗಾಳಿಯೂ ಅಲೆಗಳ ಅಬ್ಬರವೂ ಹೆಚ್ಚಿದ್ದರಿಂದ ಹಡಗು ಹೊರಟಿದ್ದು ಹಿಂದಕ್ಕೆ ಬರಬೇಕಾಯಿತು. ಕೊನೆಗೆ ೧೮೩೧ನೆಯ ಡಿಸೆಂಬರ್ ೨೭ ರಲ್ಲಿ ನೌಕೆ ನಾವಿಕರ, ವಿಜ್ಞಾನಿಗಳ ಮತ್ತು ಅನೇಕ ಬಂಧು ಮಿತ್ರರ ಜಯಘೋಷ ಗಳೊಡನೆ ಡೇವಾನ್ ಪೋರ್ಟಿನಿಂದ ದಕ್ಷಿಣಾಭಿಮುಖವಾಗಿ ಹೊರಟಿತು.

ಯಾತ್ರೆಗೆ ಹೊರಡುವಾಗ ಡಾರ್ವಿನ್ನನಿಗೆ ೨೩ನೆಯ ವರ್ಷ. ಅವನಲ್ಲಿ ಹಿಂದಿನಿಂದಲೂ ಮೊಳಕೆಯ ರೂಪದಲ್ಲಿದ್ದ ಅನೇಕ ಸದ್ಗುಣಗಳು ಆ ಕಾಲ ದಲ್ಲಿ ಬೆಳಕಿಗೆ ಬಂದವು ಹುದುಗಿದ್ದ ತನ್ನ ಮಹಾಪ್ರತಿಭೆ ವಿಕಸಿಸಲು ಅವಕಾಶವಾಯಿತು. ಎಂದಿನಂತೆ ಉದ್ಯೋಗಶೀಲನಾ

ಅವನ ಪ್ರತಿಭೆಯ ಪ್ರದರ್ಶನ

ಗಿದ್ದು, ಮಾಡುವ ಕೆಲಸವನ್ನು ವಿಚಕ್ಷಣೆಯಿಂದ ನೆರ ವೇರಿಸಿ, ಎಲ್ಲರ ಮೆಚ್ಚಿಗೆಯನ್ನೂ ಪಡೆಯಲು ಕಾರಣ ವಾಯಿತು. ಮಾರ್ಗದಲ್ಲಿ ಸಮುದ್ರಯಾನದ ಬೇನೆಯಿಂದ ನರಳಬೇಕಾಗಿ ಬಂದರೂ ಮುಂದೆ ಸಾಗಲು ದೃಢ ಮನಸ್ಸು ಮಾಡಿದನು. ತನಗಿದ್ದ ವಿಜ್ಞಾನ ಸಂಶೋಧನೆಯ ಆಸಕ್ತಿಯೂ ದೇಶಾಟನೆಯ ಹೆಬ್ಬಯಕೆಯೂ ಪದಾರ್ಥ ಸಂಗ್ರಹದ ಕಾತರತೆಯೂ ಅವನ ಹೃದಯದಲ್ಲಿ ಉತ್ಸಾಹವನ್ನು ತುಂಬಿ ಯಾತ್ರೆಯನ್ನು ಮುಂದುವರಿಸುವಂತೆ ಮಾಡಿದುವು. ಸುಮಾರು ಐದು ವರ್ಷಗಳ ತನಕ ಪ್ರಪಂಚದ ಬೇರೆಬೇರೆ ಭಾಗಗಳಲ್ಲಿ ಸಂಚರಿಸಿ, ತನ ಗೊಪ್ಪಿಸಿದ್ದ ಕಾರ್ಯವನ್ನು ಜಯಪ್ರದವಾಗಿ ನೆರವೇರಿಸಿಕೊಂಡು, ತನ್ನ ೨೮ನೆಯ ವರ್ಷದಲ್ಲಿ ತಾಯ್ನಾಡಿಗೆ ಹಿಂದಿರುಗಿದನು.

ಮಾರ್ಗದಲ್ಲಿ ಯಾನದ ಜಂಜಡದಿಂದಲೂ ಬೇನೆಯಿಂದಲೂ ನರಳುತ್ತಿ ದ್ದರೂ ಡಾರ್ವಿನ್ ಸಾಮಾನ್ಯವಾಗಿ ಹರ್ಷಚಿತ್ತನಾಗಿರುತ್ತಿದ್ದನು. ವಿಸ್ತಾರ

ವಾದ ಅಟ್ಲಾಂಟಿಕ್ ಸಾಗರವನ್ನು ಸುರಕ್ಷಿತವಾಗಿ ಹಾದು ಬರುತ್ತಾ ಯಾತ್ರಿಕರು ಕೇಪ್ ಡಿವೆರ್ಡನ್ನು ಸೇರಿ ಅಲ್ಲಿನ ಅಗ್ನಿಪರ್ವತಗಳ ರಚನೆಯನ್ನೂ ಸ್ವಭಾವವನ್ನೂ ಅಭ್ಯಾಸಿಸಿದರು. ಅಗ್ನಿಪರ್ವತವೊಂದರ ಶಿಖರ ಪ್ರಜ್ವಲಿಸುತ್ತಿರುವುದನ್ನೂ ಅದರ ತಳಭಾಗವೆಲ್ಲ ಮಂಜಿನಿಂದ ಆವರಿಸಿದ್ದುದನ್ನೂ ದೂರದಿಂದಲೇ ಕಂಡು ಡಾರ್ವಿನ್ನನೂ ಮಿಕ್ಕ ಯಾತ್ರಿಕರೂ ಆತ್ಮಾನಂದಪಟ್ಟರಂತೆ. ಲಯಲ್ಲರು ಬರೆದಿದ್ದ ಭೂಮಿಶಾಸ್ತ್ರ ಗ್ರಂಥವನ್ನು ಡಾರ್ವಿನ್ ಚೆನ್ನಾಗಿ ಅಭ್ಯಾಸಿಸಿದ್ದುದರಿಂದ ಅಲ್ಲಿನ ಭೂಲಕ್ಷಣಾದಿಗಳನ್ನು ಪರೀಕ್ಷಿಸಲು ತುಂಬ ನೆರವಾಯಿತು. ಯಾತ್ರಿಕರು ಅಲ್ಲಿಂದ ಮುಂದೆ ಸಾಗಿ ೧೮೩೨ ನೆಯ ಫೆಬ್ರುವರಿ ೧೬ ರಲ್ಲಿ ಸೇಂಟ್‌ಪಾಲ್ ದ್ವೀಪವನ್ನು ಸೇರಿದರು. ಅಲ್ಲಿದ್ದ ಎರಡು ಜಾತಿ ಪಕ್ಷಿಗಳನ್ನೂ ಜೇಡರ ಹುಳುಗಳನ್ನೂ ಪರಿಶೀಲಿಸಿ ಸಂಗ್ರಹಿಸಿಕೊಂಡು ಫರ್ನಾಂಡೊ ನರೋನದ ಮೂಲಕ ದಕ್ಷಿಣ ಅಮೆರಿಕವನ್ನು ತಲುಪಿದರು. ಹಡಗು ಸಮುದ್ರದ ಮೇಲೆ ಸಂಚರಿಸುತ್ತಿರುವಾಗ ಡಾರ್ವಿನ್ ಸೋಮಾರಿಯಾಗಿ ಕುಳಿತಿರಲಿಲ್ಲ. ಹಡಗಿನ ಗೋಡೆಯ ಹೊರಗಡೆ ಬಿದ್ದಿದ್ದ ಧೂಳನ್ನು ಪರಿಶೀಲಿಸಿ ಅದು ಸುಮಾರು ಮುನ್ನೂರು ಮೈಲಿಗಳ ದೂರದಿಂದ ತೂರಿಕೊಂಡು ಬಂದುದೆಂದು ಅರಿತಾಗ ಆಶ್ಚರ್ಯಪಟ್ಟನು. ಆ ಧೂಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅದರಲ್ಲಿ ಕೋಟಿಗಟ್ಟಲೆ ಸಣ್ಣ ಸಣ್ಣ ಬೀಜಗಳಿವೆಯೆಂದು ತಿಳಿದುಕೊಂಡನು. ಆ ಬೀಜಗಳು ಸಣ್ಣವಾಗಿರುವುದರಿಂದ ವಿಸ್ತಾರವಾದ ಸಾಗರದ ಮೇಲೆ ಗಾಳಿಗೆ ತೂರಿಕೊಂಡು ಹೋಗಿ ಬಹು ದೂರದಲ್ಲಿರುವ ಭೂಪ್ರದೇಶವನ್ನು ಮುಟ್ಟಿ ಅಲ್ಲಿ ತಮ್ಮ ವಂಶವನ್ನು ಪ್ರಸರಣ ಮಾಡುವುವೆಂಬ ಸತ್ಯಾಂಶ ಡಾರ್ವಿನ್ನನ ಮನಸ್ಸಿನಲ್ಲಿ ಆಗಲೇ ಹೊಳೆಯಿತು.

ಅಟ್ಲಾಂಟಿಕ್ ಸಾಗರದ ಮೇಲೆ

ಫೆಬ್ರುವರಿ ೨೦ ರಲ್ಲಿ ಯಾತ್ರಿಕರು ಬ್ರೆಸಿಲ್ಲಿನ ತೀರಪ್ರದೇಶವನ್ನು ಸೇರಿ ಅಲ್ಲಿನ ಮಹಾರಣ್ಯವನ್ನು ಪರಿಶೀಲಿಸಲು ಸಿದ್ಧರಾದರು. ತಾನು ಇತರರಿಂದ ಕೇಳಿದ್ದ ಜಗದ್ವಿಖ್ಯಾತವಾದ ಆ ಅರಣ್ಯವನ್ನು ನೋಡುವ ಸಂಯೋಗ ದೊರೆತುದಕ್ಕಾಗಿ ಡಾರ್ವಿನ್ ಹಿಗ್ಗಿಹೋದನು. ಬಾಲ್ಯದಿಂದಲೂ ಪ್ರಕೃತಿಯೆಂದರೆ ಪ್ರೇಮಾಸಕ್ತಿಯಿಂದಿದ್ದ ಅವನಂಥವರು ಆ ಕಾಡಿನ ಹಿರಿಯ ರಮಣೀಯತೆಯನ್ನು

ಬ್ರೆಸಿಲ್ ಮಹಾರಣ್ಯ

ನೋಡಿ ಮುಗ್ಧನಾದುದರಲ್ಲಿ ಆಶ್ಚರ್ಯವೇನಿಲ್ಲ. ಸುತ್ತಲೂ ಹಸುರು ಚಿಮ್ಮುತ್ತ ದಟ್ಟವಾಗಿ ಬೆಳೆದಿರುವ ಹುಲ್ಲುಗರಿಕೆ ನೆಲವನ್ನಲಂಕರಿಸಿತ್ತು. ಪರಾವಲಂಬಿ ಸಸ್ಯಗಳು ಎತ್ತರವಾದ ತರುಗಳ ಆಶ್ರಯವನ್ನು ಹೊಂದಿ, ಹೊರವಾಗಿ ಬೇರು ತೊನೆಯುತ್ತಿದ್ದುವು. ಮುಗಿಲು ಮುಟ್ಟುವಂತಿರುವ ತರುಲತೆಗಳ ಹಸುರು ವರ್ಣವೂ ಮೇಲೆಮೇಲೆ ಅಲ್ಲಲ್ಲಿ ಕಂಗೊಳಿಸುವ ಬಣ್ಣ ಬಣ್ಣದ ಹೂಗೊಂಚಲುಗಳೂ ಅವನ ಚಿತ್ತವನ್ನು ಸೂರೆಗೊಳ್ಳುತ್ತಿದ್ದುವು. ತೀರಪ್ರದೇಶದಲ್ಲಿರುವಾಗಲೇ ಒಳನಾಡಿನ ಮಹಾರಣ್ಯದ ಪ್ರಕೃತಿ ರಮಣೀಯತೆಯನ್ನು ಆಸ್ವಾದಿಸಲು ಕರೆವಂತೆ ಮೊರೆಯುತ್ತಿದ್ದ ದುಂಬಿಗಳ ಝೇಂಕಾರ ಡಾರ್ವಿನ್ನನನ್ನ ಆಶ್ಚರ್ಯಗೊಳಿಸುತ್ತಿತ್ತು. ಒಳಹೊಕ್ಕು ವನದ ಮಧ್ಯೆ ನಿಂತಾಗ ಅಲೌಕಿಕವಾದ ಆವುದೋ ಒಂದು ಮೌನ ಬನವನ್ನಾವರಿಸಿರುವುದನ್ನು ಕಂಡು ಅವನು ಅತಿಮಾನುಷ ಲೋಕವೊಂದರ ನೆನಪನ್ನು ತಂದುಕೊಂಡನಂತೆ. ತನ್ನ ಪ್ರಪಂಚಪ್ರವಾಸದ ಅರುಣೋದಯದಲ್ಲೇ ಅಂಥ ರಮಣೀಯತಮ ಕ್ಷೇತ್ರಕ್ಕೆ ಹೋಗಿ ನಿಂತಾಗ ಡಾರ್ವಿನ್ ತನ್ನ ದೇಶಾಟನೆಯ ಹೆಬ್ಬಯಕೆಯಿಂದ ಜೀವನ ಸಾರ್ಥಕ್ಯವನ್ನು ಕಂಡಿತಲ್ಲಾ, ಎಂದುಕೊಂಡಿರಬೇಕು

ಏಪ್ರಿಲ್ ತಿಂಗಳಲ್ಲಿ ಯಾತ್ರಿಕರು ರಯೋಡಿಜನಿರೋವನ್ನು ತಲಪಿ ಮೂರು ತಿಂಗಳುಗಳ ತನಕ ಒಳನಾಡಿನಲ್ಲಿ ಸಂಶೋಧನೆಗಳನ್ನು ನಡೆಯಿಸಿದರು. ಡಾರ್ವಿನ್ ಕುದುರೆಯನ್ನೇರಿ ಭೂಮಿಯಮೇಲೆ ಸಂಚರಿಸುತ್ತಿರುವಾಗ

ರಯೋಡಿ ಜನೀರೋದಲ್ಲಿ

ದಾರಿಯಲ್ಲಿ ಊಟ ವಸತಿಗಳು ಸಿಕ್ಕುವುದು ದುರ್ಲಭವಾಗಿತ್ತು. ಅಲ್ಲಿನವರ ಸಂಪ್ರದಾಯವೂ ಅವನಿಗೆ ಬೇಸರ ಹುಟ್ಟಿಸುತ್ತಿತ್ತು. ತನ್ನ ದೇಶದವರಂತೆ ಅವರು ವಯಾಳುಗಳೂ ಅಲ್ಲ; ಸುಸಂಸ್ಕೃತರೂ ಆಗಿರಲಿಲ್ಲ. ಅವನಿಗೆ ಆರೋಗ್ಯ ಆಗಾಗ ಕೆಡುತ್ತಲೇ ಇತ್ತು. ಸಮುದ್ರಯಾನದಿಂದುಂಟಾದ ಬೇನೆಯಿನ್ನೂ ಪೂರ್ಣವಾಗಿ ಹೋಗಿರಲಿಲ್ಲ. ಆದರೂ ಒಳನಾಡಿನಿಂದ ಹಿಂದಿರುಗುವ ಯೋಚನೆ ಮಾಡದೆ ಸಂಶೋಧನೆಗಳನ್ನು ನಡೆಸುತ್ತಲೇ ಇದ್ದನು. ಆಯಾಸದಿಂದ ಆರೋಗ್ಯ ಕೆಟ್ಟಾಗ ಸ್ವಲ್ಪ ಸುಧಾರಿಸಿಕೊಂಡು ಮರಳಿ ಕಾರ್ಯಮುಖನಾಗುತ್ತಿದ್ದನು.

ಒಳನಾಡಿನ ಪ್ರವಾಸದಲ್ಲಿ ಅನುಭವಿಸಿದ ಎಲ್ಲ ತೊಡಕುಗಳಿಗಿಂತ ಅಲ್ಲಿ ಪ್ರಚಾರದಲ್ಲಿದ್ದ ಗುಲಾಮರ ವ್ಯಾಪಾರ ಡಾರ್ವಿನ್ನನನ್ನು ತುಂಬ ನೋಯಿಸಿತು. ಮಾನವರ ಸಂಸ್ಕೃತಿಯನ್ನೇ ಪಾತಾಳಕ್ಕೆ ತುಳಿಯುವ ದಾಸ್ಯವನ್ನು
ಕಂಡಾಗ ಅವನ ದಯಾಮಯ ಹೃದಯ ಸಹಿಸಲಾರ
ದಾಸ್ಯ ದಾಯಿತು. ತಾಯ್ನಾಡಿಗೆ ಹಿಂದಿರುಗಿದ ಮೇಲೆ
ಡಾರ್ವಿನ್ ನಾಗರಿಕರೆನಿಸಿಕೊಂಡವರು ಗುಲಾಮರಿಗೆ
ಕೊಡುತ್ತಿದ್ದ ಹಿಂಸೆಯನ್ನು ಸಾರ್ವಜನಿಕರ ಗಮನಕ್ಕೆ ತಂದನು. ಒಬ್ಬ ನೀಗ್ರೋವಿನೊಡನೆ ನದಿಯನ್ನು ದಾಟುತ್ತಿರುವಾಗ ಡಾರ್ವಿನ್ ಅವನಿಗೆ ಸನ್ನೆ ಮಾಡಲು ಕೈಯೆತ್ತಿದನಂತೆ. ಆಗ ಆ ಬಡಪಾಯಿ ಹೊಡೆಯಲು ಬಂದನೆಂದರಿತು ಬೆಚ್ಚಿಬಿದ್ದು ಚೀರಲಾರಂಭಿಸಿದನು. ಇದನ್ನು ಕಂಡು ಡಾರ್ವಿನ್ 'ಈ ದುರ್ವ್ಯಾಪಾರ ಸೃಷ್ಟಿಯ ಉನ್ನತಸ್ಥಾನದಲ್ಲಿರುವ ಮಾನವ ಮಹಾಪ್ರಾಣಿಯನ್ನು ಹೇಡಿತನಕ್ಕೆ ನೂಕಿತೇ' ಎಂದು ನಿಟ್ಟುಸಿರು ಬಿಟ್ಟು, 'ಹಲವು ಮೃಗಗಳಿಗಿರುವ, ಆತ್ಮಸಂರಕ್ಷಣೆಗಾಗಿ ಹೋರಾಡುವ ಸ್ವಾತಂತ್ರ್ಯವೂ ಅವನ ಭಾಗ್ಯಕ್ಕಿಲ್ಲವಲ್ಲ!' ಎಂದುಕೊಂಡು ಮರುಗಿದನು. ಒಡೆಯರು ತಮ್ಮ ಗುಲಾಮರಿಗೆ ಅಲ್ಪ ಕಾರಣಕ್ಕಾಗಿ ಯಮಯಾತನೆ ಕೊಡುವರೆಂದು ಅನೇಕರಿಂದ ಕೇಳಿದ್ದನು. ಮಾರ್ಗದಲ್ಲೆಲ್ಲಾದರೂ ಆರ್ತನಾದವೊಂದು ಕೇಳಿಬಂದರೆ ಅದು ನೋವಿಗೀಡಾದ ಗುಲಾಮನದಿರಬೇಕೆಂದುಕೊಳ್ಳುತ್ತಿದ್ದನು. ರಯೋಡಿಜನಿರೋದಲ್ಲಿಳಿದುಕೊಂಡಿರುವಾಗ, ಸಮೀಪದಲ್ಲಿದ್ದ ಮುದುಕಿಯೊಬ್ಬಳು ತನ್ನ ಗುಲಾಮರಿಗೆ ಕೊಡುತ್ತಿದ್ದ ಹಿಂಸೆಯನ್ನು ಕಣ್ಣಾರ ಕಂಡಿದ್ದನು. ಅವಳು ಗುಲಾಮರ ಎಳೆಮಕ್ಕಳಿಂದಲೂ ದುಡಿಸಿಕೊಳ್ಳುತ್ತಿದ್ದಳಂತೆ; ಬಾಲಕರು ಶಕ್ತಿಮೀರಿ ಕೆಲಸಮಾಡಿ, ದಣಿದ, ಉಳಿದಿರುವಾಗ ಅವರನ್ನು ದಂಡಿಸುವುದಕ್ಕಾಗಿಯೇ ಸಲಾಕಿಯೊಂದನ್ನು ಅಣಿಯಾಗಿಟ್ಟುಕೊಂಡಿದ್ದಳಂತೆ. ಡಾರ್ವಿನ್ ಆ ವಿಚಾರವನ್ನರಿತು 'ಇದು ಮಾನವ ನಾಗರಿಕತೆಗೆ ಮಸಿ ಬಳಿದಂತೆ' ಎಂದುಕೊಂಡಿದ್ದರೆ ಹೆಚ್ಚಲ್ಲ. ಹೀಗಿದ್ದರೂ ದಾಸ್ಯ ಕೆಟ್ಟದ್ದಲ್ಲವೆಂದು ವಾದಿಸುವರಿದ್ದೇ ಇದ್ದರು. ಅಂಥವರಿಗೆ ಡಾರ್ವಿನ್ 'ತಮ್ಮ ಮಕ್ಕಳು ಮರಿಗಳೊಡನೆ ತಾವೂ ದಾಸ್ಯವನ್ನನುಭವಿಸಿ ನೋಡಲಿ' ಎಂದು ಸವಾಲು ಹಾಕಿರುವನು. ಯಾತ್ರಿಕರು ಬ್ರೆಸಿಲ್ಲನ್ನು ಬಿಡುವುದಕ್ಕೆ ಅಣಿಯಾದಾಗ ಹೇಯ

ವಾದ ಗುಲಾಮರ ವ್ಯಾಪಾರದ ನಾಡಿನಿಂದ ಮುಂದೆ ಸಾಗುವೆವಲ್ಲಾ,' ಎಂದು ಅವನು ಸಮಾಧಾನಪಟ್ಟುಕೊಂಡನಂತೆ.

ಡಾರ್ವಿನ್ ಬ್ರೆಸಿಲ್ಲಿನಲ್ಲಿ ನಡೆಸಿದ ಸಂಶೋಧನೆಗಳನ್ನೆಲ್ಲ ಸೂಕ್ಷ್ಮವಾಗಿ ವಿವರಿಸಬೇಕಾದುದು. ಯಾವ ಗ್ರಂಥದಲ್ಲೂ ಬೆಳಕನ್ನು ಕಾಣದಿದ್ದ ಹಲವು ಜಾತಿ ಗೆಡ್ಡೆಗೆಣಸುಗಳೂ ತೆಂಗಿನಜಾತಿಯ ಸಸ್ಯಗಳೂ ವಿಚಿತ್ರರೀತಿಯ ಜರೀಗಿಡಗಳೂ ಅವನ ದೃಷ್ಟಿಗೆ ಬಿದ್ದುವು. ತಾನು ಪರಿಶೀಲಿಸಿದ ಪ್ರತಿಯೊಂದು ಸಸ್ಯಕ್ಕೂ ಸಂಬಂಧಿಸಿದ ವಿಷಯಗಳನ್ನೆಲ್ಲ ಕ್ರಮವಾಗಿ ಗುರುತುಮಾಡಿಕೊಂಡು ಮುಂದೆ ಗ್ರಂಥರೂಪದಲ್ಲಿ ಹೊರಗೆಡಹಲು ಸಿದ್ಧಪಡಿಸಿಕೊಂಡುದಲ್ಲದೆ ಆವಶ್ಯಕವಾದುವುಗಳನ್ನು ಸಂಗ್ರಹಿಸಿ ಒಪ್ಪವಾಗಿಟ್ಟುಕೊಂಡನು. ಆ ಮಹಾರಣ್ಯದ ಗಿರಿನದಿಗಳನ್ನೂ ಇತರ ವೈಭವದ ದೃಶ್ಯಗಳನ್ನೂ ಅವನು ಆಜೀವವೂ ಮರೆತವನಲ್ಲ. ಹಲವು ಜಾತಿಯ ಮರದಕಪ್ಪೆಗಳನ್ನೂ ಅವುಗಳಿಗೆ ಮರ ಹತ್ತುವುದಕ್ಕಾಗಿ ಇರುವ ವಿಶೇಷರೀತಿಯ ಬೆರಳ ರಚನೆಯನ್ನೂ ಅಭ್ಯಾಸಿಸಿದನು. ರಾತ್ರಿಯಲ್ಲಿ ಅಗಣಿತವಾಗಿ ಗುಂಪುಕೂಡಿ ಬೆಳಕನ್ನು ಚಿಮ್ಮುತ್ತ ನೀಲಾಕಾಶದಲ್ಲಿ ಮಿನುಗುವ ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದ ಮಿಣುಕುಹುಳುಗಳನ್ನು ಅನೇಕ ಕಡೆ ಕಂಡು ಪರಿಶೀಲಿಸಿದನು. ಮಾರ್ಗದಲ್ಲಿ ಸೈನಿಕ ಚಟುವಟಿಕೆಯನ್ನು ಪ್ರದರ್ಶಿಸಿಕೊಂಡು ಹಾರಿಹೋಗುತ್ತಿದ್ದ ಜೇನುನೊಣಗಳನ್ನೂ ನೋಡಿದನು. ಕಣಜ, ಬಣ್ಣದ ಚಿಟ್ಟೆ, ಮಿಡತೆ ಮೊದಲಾದ ಅನೇಕ ಜಾತಿಯ ಚಿತ್ರವಿಚಿತ್ರ ಕೀಟಕಗಳನ್ನು ಸಂಗ್ರಹಿಸಿಕೊಂಡನು. ಅಲ್ಲಿದ್ದ ವಿಲಕ್ಷಣ ಜಾತಿಯ ಮಂಗಗಳನ್ನೂ ಅವುಗಳ ಸ್ವಭಾವವನ್ನೂ ಪರಿಶೀಲಿಸಿದುದಲ್ಲದೆ ಅಲ್ಲಿನ ಬಾಲಕರು ಆಟವಾಡುವ ರೀತಿಯನ್ನೂ ಕುತೂಹಲದಿಂದ ನೋಡಿ ಅರಿತುಕೊಂಡನು.

ಬ್ರೆಸಿಲ್ಲಿನಲ್ಲಿ ಸಂಶೋಧನೆಗಳು

ಬ್ರೆಸಿಲ್ಲಿನಲ್ಲಿ ಸಂಶೋಧನೆಗಳನ್ನು ಮುಗಿಸಿಕೊಂಡು ಬೀಗಲ್ ವಿಜ್ಞಾನಯಾತ್ರಿಕರು ಮಾಂಟೆವೀಡಿಯೋಕ್ಕೆ ಬಂದು ೧೮೩೨ ನೆಯ ಜುಲೈ ತಿಂಗಳಿಂದ ಸುಮಾರು ಎರಡು ವರ್ಷಗಳ ತನಕ ದಕ್ಷಿಣ ಅಮೆರಿಕದ ಪೂರ್ವದ ಮತ್ತು ದಕ್ಷಿಣದ ತೀರಪ್ರದೇಶಗಳ ಪರಿಶೀಲನೆಯಲ್ಲಿ ನಿರತರಾಗಿದ್ದರು. ಡಾರ್ವಿನ್ ತನಗಿದ್ದ ಭೂಮಿಶಾಸ್ತ್ರದ ಅಪಾರ ಪರಿಚಯದಿಂದ ಅಲ್ಲಿನ ಭೂಮಿಯ ಸ್ವಭಾ

ವಾದಿ ಲಕ್ಷಣಗಳನ್ನು ಚೆನ್ನಾಗಿ ಪರಿಶೀಲಿಸುತ್ತಿದ್ದನು. ತೀರಪ್ರದೇಶಕ್ಕೆ ಅನತಿ ದೂರದಲ್ಲಿರುವ ಮಾಲ್ಡನಾಡೋ ದ್ವೀಪಕ್ಕೆ ಹೋಗಿ ಅಲ್ಲಿ ವಾಸಿಸುತ್ತಿದ್ದ ಬೇರೆಬೇರೆ ಎಂಬತ್ತು ಜಾತಿ ಪಕ್ಷಿಗಳನ್ನು ಸಂಗ್ರಹಿಸಿ ತಂದನು. ನಮ್ಮ ದೇಶದ ಕೋಗಿಲೆಯಂಥ ಮಲೋದ್ರಿಯೆಂಬ ಅಲ್ಲಿನ ಪಕ್ಷಿ, ಹುಳು ಹುಪ್ಪಟೆಗಳನ್ನು ಹಿಡಿದು ತಿನ್ನುವ ರೀತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದನು. ಆ ದ್ವೀಪದಲ್ಲಿದ್ದ ರಣಹದ್ದು ಮೊದಲಾದ ಮಾಂಸಾಹಾರಿ ಪಕ್ಷಿಗಳನ್ನು ಪರೀಕ್ಷಿಸಿ ಅವುಗಳ ಸ್ವಭಾವವನ್ನೂ ಅರಿತುಕೊಂಡನು. ಇನ್ನೂ ದಕ್ಷಿಣಕ್ಕೆ ತೆರಳಿ ರಯೋನಿಗ್ರೋದಲ್ಲಿದ್ದ ಉಪ್ಪು ನೀರಿನ ಸರಸ್ಸಿನ ಪ್ರಾಣಿವರ್ಗವನ್ನು ಪರಿಶೀಲಿಸಿದನು. ಆ ಸರೋವರದ ಉಪ್ಪು ನೀರಿಗೆ ಅನೇಕ ಪ್ರಾಣಿಗಳು ಸರಿಯಾಗಿ ಹೊಂದಿಕೊಂಡು, ವಾಸಿಸುತ್ತಿರುವುದನ್ನು ಅರಿತು 'ಭೂವಲಯದಲ್ಲಿ ಜೀವವರ್ಗಕ್ಕೆ ಆಶ್ರಯ ಕೊಡಲಾರದ ಸ್ಥಳವಿಲ್ಲ; ಸಾಗರದ ಉಪ್ಪುನೀರಾಗಲಿ, ಪಾತಾಳದಲ್ಲಿ ಹರಿಯುವ ಜಲಪ್ರವಾಹವಾಗಲಿ, ಬಿಸಿನೀರಿನ ಬುಗ್ಗೆಗಳಾಗಲಿ, ಅಗ್ನಿಪರ್ವತಗಳ ಹಿನ್ನೆಲೆಯಾಗಲಿ ಒಂದಲ್ಲ ಇನ್ನೊಂದು ಜಾತಿಯ ಜೀವವರ್ಗದ ವಾಸಕ್ಕೆ ಅನುಕೂಲವಾಗಿಯೇ ಇವೆ. ಮೈಲಿಗಳೆತ್ತರಕ್ಕೆ ಹರಡಿರುವ ವಾಯುಮಂಡಲದಲ್ಲೂ ಮೈಲಿಗಳಾಳವನ್ನು ಮುಟ್ಟುವ ಸಾಗರದ ತಳದಲ್ಲೂ ಪ್ರಾಣಿಗಳು ಬದುಕಬಲ್ಲುವು' ಎಂದು ನಿರ್ಧರಿಸಿಕೊಂಡನು. ದಕ್ಷಿಣ ಅಮೆರಿಕದ ತೀರದ ಲಕ್ಷಣವನ್ನು ಚೆನ್ನಾಗಿ ಪರಿಶೀಲಿಸಿದಾಗ, ದಕ್ಷಿಣ ತೀರ ಪ್ರದೇಶವೆಲ್ಲ ಈಚೆಗೆ ಸಾಗರದಿಂದ ಮೇಲೆದ್ದ ಭೂಭಾಗವೆಂಬ ಸತ್ಯಾಂಶ ಡಾರ್ವಿನ್ನನ ಮನಸ್ಸಿನಲ್ಲಿ ಹೊಳೆಯಿತು. ಒಮ್ಮೆ ಪರಿಶೀಲಿಸಿದ ವಿಷಯದ ಮೇಲೆ ಅವನು ಎಡಬಿಡದೆ ಯೋಚಿಸುತ್ತಲೇ ಇದ್ದುದರಿಂದ, ಹೊಸಹೊಸ ಅಂಶಗಳು ಗೊತ್ತಾಗಿ ಮುಂದಿನ ಶೋಧನೆಯ ಮಾರ್ಗವನ್ನು ತೋರಿಸಿಕೊಡುತ್ತಿದ್ದುವು.

ಮಾಂಟಿವೀಡಿಯೋದಲ್ಲಿ ಭೂಶೋಧನೆ

ಜೀವವರ್ಗ ಭೂಮಿಯ ಮೇಲೆ ಉದಿಸಿ ಕೋಟಿಗಟ್ಟಲೆ ವರ್ಷಗಳಾಗಿವೆ. ಅಂದಿನಿಂದಲೂ ಅಗಣಿತ ಪ್ರಾಣಿಗಳು ಬದುಕಿ ಅಳಿಯುತ್ತಿವೆ. ಆಗಾಗ ಒದಗುವ ವಾತಾವರಣದ ಏರಿಳಿತಗಳಿಗೆ ಸಿಕ್ಕಿ ಅನೇಕ ಜೀವಿಗಳು ಭೂಗತವಾಗುತ್ತಿವೆ. ಹಾಗೆ ಸತ್ತ ಪ್ರಾಣಿಗಳ ಶರೀರಗಳು ನದಿಗಳ ಮೂಲಕವೋ, ಇನ್ನಿತರ ಪ್ರವಾಹಗಳಮೂಲಕವೋ ಸಾಗರಕ್ಕೆ ಹೋಗಿ ಬೀಳುತ್ತವೆ.

ಅಂಥ ಶರೀರದ ಮೆತ್ತನೆಯ ಭಾಗವೆಲ್ಲ ಜೀರ್ಣಿಸಿ ಹೋಗಿ, ಮೂಳೆ ಮೊದಲಾದ ಕಠಿಣವಾದ ಭಾಗಗಳು ಮಾತ್ರ ಉಳಿದ ಕೊಳ್ಳು

ಪಳೆಯುಳಿಕೆಗಳು ತ್ತವೆ. ಆ ಮೂಳೆಗಳ ಮೇಲೆ ಹೊಸಹೊಸ ಮಣ್ಣಿನ ಪದರಗಳು ವರ್ಷವರ್ಷವೂ ಬಂದು ಬೀಳುತ್ತಿರುತ್ತವೆ. ಹೀಗೆ ಸಹಸ್ರಾರು ವರ್ಷಗಳು ಕಳೆದನಂತರ ಮೂಳೆಗಳ ಮೇಲೆ ಹೆಚ್ಚು ಭಾರ ಬೀಳುವುದು. ಭೂಗರ್ಭದಲ್ಲಿರುವ ಶಾಖದಿಂದಲೂ ಮೇಲ್ಪದರಗಳ ಒತ್ತಡದಿಂದಲೂ ಅವಶೇಷದ ಸುತ್ತಲೂ ಇರುವ ಮಣ್ಣು ಕಣಗಳು ಕಲ್ಲಿನಂತೆ ಗಟ್ಟಿಯಾಗುವುವು. ಹೀಗೆ ನಿರ್ಮಿತವಾದ ಶಿಲೆಯ ಹಿನ್ನೆಲೆಯಲ್ಲಿ ಅವಶೇಷದಷ್ಟು ಭಾಗಮಾತ್ರ ಒಂದು ನಕ್ಷೆಯ ರೂಪದಲ್ಲಿ ಮುದ್ರಿತವಾಗುವುದು. ಅಂಥ ಸಾಗರದ ಭಾಗ ಭೂಗರ್ಭದಲ್ಲಿ ಆಗಾಗೊದಗುವ ಏರಿಳಿತಗಳಿಂದ ಭೂಪ್ರದೇಶವಾಗಿ ಮಾರ್ಪಡುವುದುಂಟು. ಆ ಪ್ರದೇಶವನ್ನು ಅಗೆದು ಪರಿಶೋಧಿಸಿದಾಗ ಯುಗಯುಗಗಳ ಹಿಂದೆ ಅಲ್ಲಿ ಬದುಕಿದ್ದ ಜೀವಿಯ ಅಸ್ಥಿಯ ಅವಶೇಷ ಶಿಲೆಯಲ್ಲಿ ಹೂತುಹೋಗಿ ನಕ್ಷೆಯನ್ನು ಮಾತ್ರ ಪ್ರದರ್ಶಿಸುತ್ತಿರುತ್ತದೆ. ಅದಷ್ಟು ಭಾಗವನ್ನೇ ಶಿಲೆಯಿಂದ ಬಿಡಿಸಿ ಬೇರ್ಪಡಿಸಿಕೊಳ್ಳಬಹುದು. ಶತಮಾನಗಳ ಹಿಂದಿನ ಪ್ರಾಣಿಗಳೂ ಸಸ್ಯಗಳೂ ಉಳಿದುಹೋಗಿರುವ ಇಂಥ ಅವಶೇಷಗಳನ್ನು ಪಳೆಯುಳಿಕೆಗಳೆನ್ನುವರು.

ದಕ್ಷಿಣ ಅಮೆರಿಕದ ತೀರಪ್ರದೇಶ ಆಧುನಿಕ ಕಾಲದಲ್ಲಿ ಸಮುದ್ರದಿಂದ ಮೇಲೆದ್ದ ಭಾಗವೆಂದು ಡಾರ್ವಿನ್ ಅರಿತುಕೊಂಡನಷ್ಟೆ. ಅಮೇಲೆ ಆ ಪ್ರದೇಶದ ಒಳನಾಡಿನಲ್ಲಿ ದೊರೆಯಬಹುದಾದ ಪಳೆಯುಳಿಕೆಗಳನ್ನು ಹುಡುಕಿ

ಬೇಹಿಯಬ್ಲಾಂಕ ಪರಿಶೀಲಿಸುವ ಉದ್ದೇಶದಿಂದ ೧೮೩೩ನೆಯ ಆಗಸ್ಟ್ ಮತ್ತು ಬಿಯೊನಾಸ್ ೧೧ರಲ್ಲಿ ಬೇಹಿಯಬ್ಲಾಂಕ ಮತ್ತು ಬಿಯೊನಾಸ್ ಐರ್

ಐರ್‌ಗಳ ಹತ್ತಿರ ಎಂಬ ನಗರಗಳನ್ನು ನೋಡಲು ಕುದುರೆಯ ಮೇಲೆ ಹೊರಟನು. ಜೊತೆಯಲ್ಲಿ ಪಳೆಯುಳಿಕೆಗಳ ಪರಿಶೀಲನೆಗೆ ಬೇಕಾದ ಎಲ್ಲ ಸಾಮಗ್ರಿಗಳನ್ನೂ ತೆಗೆದುಕೊಂಡಿದ್ದನು. ಹಾದಿಯಲ್ಲಿ ಸಂಜೆಯಾದನಂತರ ಅನೇಕ ಕಡೆ ಕಾಡುಮೇಡುಗಳಲ್ಲೇ ತಂಗಬೇಕಾಗುತ್ತಿತ್ತು. ತನ್ನ ಜೊತೆಯಲ್ಲಿ ಬಂದಿದ್ದ ನಾಯಿ ಅವನಿಗೂ ಅವನ ಕುದುರೆಗೂ ಕಾವಲಾಗಿರುತ್ತಿತ್ತು. ಪ್ರಯಾಸದಿಂದ ಬೇಹಿಯಬ್ಲಾಂಕವನ್ನು ಸೇರಿ, ಅದರ ಸುತ್ತಮುತ್ತಲಿನ

ಪ್ರದೇಶಗಳನ್ನು ಹುಡುಕುತ್ತಿರುವಾಗ ಪ್ರಾಚೀನಕಾಲದ ಚತುಷ್ಪಾದಿಗಳ ಪಳೆಯುಳಿಕೆಗಳು ದೊರೆತುವು. ಸುಮಾರು ನೂರು ಚದರಗಜದಳತೆಯಲ್ಲೇ ಒಂಬತ್ತು ಬೇರೆಬೇರೆ ಜಾತಿ ಚತುಷ್ಪಾದಿಗಳ ಪಳೆಯುಳಿಕೆಗಳು ದೊರೆತುವು.

**ಪಳೆಯುಳಿಕೆಗಳ ಪರಿಶೀಲನೆ**

ಆ ಭೂಭಾಗದಲ್ಲಿ ಹಿಂದೆ ಬದುಕಿದ್ದ ಆ ಪ್ರಾಣಿಗಳು ಈ ದಿನ ಅಲ್ಲಿಲ್ಲದಿರುವುದನ್ನು ಕಂಡು ಡಾರ್ವಿನ್ ಆಶ್ಚರ್ಯಪಟ್ಟನು. ಈ ಶೋಧನೆ ಅವನ ಮನಸ್ಸಿನಲ್ಲಿ ಅಪಾರ ಯೋಚನೆಗೆ ಎಡೆಗೊಟ್ಟಿತು. 'ಹಿಂದಿದ್ದ ಆ ಪ್ರಾಣಿಗಳು ಈ ದಿನ ಇಲ್ಲದಿರುವುದೇಕೆ ?' ಎಂದು ತನ್ನೊಳಗೇ ಪ್ರಶ್ನಿಸಿಕೊಂಡು ಹಗಲಿರುಳೂ ಯೋಚಿಸುತ್ತಿದ್ದನು.

ಡಾರ್ವಿನ್ ಬೇಹಿಯಬ್ಲಾಂಕದ ಹತ್ತಿರ ಸಂಶೋಧನೆಗಳನ್ನು ಮುಗಿಸಿಕೊಂಡು ಬಿಯೊನಾಸ್ ಐರಸ್ನು ಸೇರಿದನು. ಅನಂತರ ಅಲ್ಲಿಗೆ ಸುಮಾರು ೩೦೦ ಮೈಲಿಗಳ ದೂರದಲ್ಲಿ ಪರಾನಾ ನದಿಯ ಕಣಿವೆಯಲ್ಲಿರುವ ಸಾಂಟಾಫಿಯನ್ನುದ್ದೇಶಿಸಿ ಹೊರಟನು. ಅಲ್ಲಿಗೆ ಬಂದು, ಸುತ್ತಣ

**ಸಾಂಟಾಫಿಯ ಹತ್ತಿರ ಕುದುರೆಯ ಪಳೆಯುಳಿಕೆ**

ಭೂಪ್ರದೇಶದ ಲಕ್ಷಣಗಳನ್ನು ಪರಿಶೀಲಿಸುತ್ತಿರುವಾಗ ಡಾರ್ವಿನ್ನನಿಗೆ ಪ್ರಾಚೀನಕಾಲದ ಕುದುರೆಯ ಪಳೆಯುಳಿಕೆ ದೊರೆಯಿತು. ಕೊಲಂಬಸ್ ಕಾಲಿಟ್ಟಾಗ ಇಡೀ ಅಮೆರಿಕದಲ್ಲೇ ಕುದುರೆಗಳಿರದಿದ್ದರೂ ಶತಮಾನಗಳ ಹಿಂದೆ ಆ ಖಂಡದಲ್ಲಿ ಕುದುರೆಗಳಿದ್ದುವೆಂಬುದಕ್ಕೆ ದೊರಕಿದ ಆ ಸಾಕ್ಷ್ಯವನ್ನು ಕಂಡು ಡಾರ್ವಿನ್ ಚಕಿತನಾಗಿ ಹೋದನು. ಅಮೆರಿಕದಲ್ಲಿ ಈಗಿರುವ ಕುದುರೆಗಳೆಲ್ಲ ಕೊಲಂಬಸ್ಸನ ನಂತರ ಸ್ಪೈಯಿನ್ ಮೊದಲಾದ ಯುರೋಪಿನ ದೇಶಗಳಿಂದ ಬಂದುವು. ಡಾರ್ವಿನ್ ತನಗೆ ದೊರೆತ ಕುದುರೆಯ ಪಳೆಯುಳಿಕೆಯ ವಿಚಾರವಾಗಿ ಅನಂತವಾಗಿ ಯೋಚಿಸುತ್ತಿರುವಾಗ, ಅಮೆರಿಕದಲ್ಲಿದ್ದ ಪ್ರಾಚೀನಕಾಲದ ಕುದುರೆಗಳು ಅಳಿದು ಹೋದುವೇಕೆ ? ಅವುಗಳ ಸಂತತಿಗಳ ಗತಿಯೇನಾಯಿತು ? ಇತ್ಯಾದಿ ಸಮಸ್ಯೆಗಳು ಅವನ ಮನಸ್ಸಿನಲ್ಲೇಳಲಾರಂಭಿಸಿದುವು. ಈ ಸಮಸ್ಯೆಗಳನ್ನು ಬಿಡಿಸಿ ತನ್ನ ವಿಕಾಸ ತತ್ವ ಸಾಧನೆಗೆ ಹೇಗೆ ಉಪಯೋಗಿಸಿಕೊಂಡನೆಂಬುದನ್ನು ಮುಂದೆ ವಿವರಿಸುತ್ತೇವೆ. ಹಲವು ದಿನಗಳನಂತರ ಡಾರ್ವಿನ್ ಪರಾನಾ ನದೀಮುಖಜಭೂಮಿಯನ್ನು ಸೇರಿ ಪರೀಕ್ಷಿಸಿದಾಗ ಲೆಕ್ಕವಿಲ್ಲದಷ್ಟು

ಬೇರೆಬೇರೆ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳು ದೊರೆತುವು. ಆಗ ಅವನ ಯೋಚನಾತರಂಗಗಳು ನೂರ್ಮಡಿಯಾದುವು. 'ಈ ಪಂಪಾಸ್ ಸಮಭೂಮಿ ಹೊರನೋಟಕ್ಕೆ ಸಾಮಾನ್ಯ ಹುಲ್ಲುಗಾವಲಿನಂತೆ ಕಂಡರೂ ಇದೊಂದು ದೊಡ್ಡ ಸ್ಮಶಾನ ಕ್ಷೇತ್ರ. ಇದರ ಗರ್ಭದಲ್ಲಿ ಕೋಟಿಗಟ್ಟಲೆ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳು ತುಂಬಿವೆ' ಎಂದುಕೊಂಡನು. ತಾನು ಪರಿಶೀಲಿಸಿದ್ದ ಪಳೆಯುಳಿಕೆಗಳನ್ನೆಲ್ಲ ಕ್ರಮವಾಗಿ ಸಂಗ್ರಹಿಸಿ, ಒಪ್ಪವಾಗಿಟ್ಟು ಕೊಂಡನು.

ಒಳನಾಡಿನ ಸಂಶೋಧನೆಗಳು ಮುಂದುವರಿದಂತೆ ಡಾರ್ವಿನ್ನನ ಮನಸ್ಸಿನಲ್ಲಿ ಹೊಸ ಹೊಸ ಭಾವನೆಗಳು ಮೂಡಲಾರಂಭಿಸಿದುವು. ಬಿಡುವಿಲ್ಲದೆ ಅವನ ದೇಹವೂ ಮನಸ್ಸೂ ದುಡಿಯಬೇಕಾಗಿದ್ದುದರಿಂದ ಹಠಾತ್ತಾಗಿ ಆರೋಗ್ಯ ಕೆಟ್ಟಿತು. ಕೂಡಲೆ ಆ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಿ ಒಳನಾಡಿನಿಂದ ಹಿಂದಿರುಗಿ ಬರಬೇಕಾಯಿತು. ಅಕ್ಟೋಬರ್ ೧೨ರಲ್ಲಿ ಬಿಯೊನಾಸ್ ಐರ್‌ಗೆ ಹಿಂದಿರುಗಿ ಹೊರಟನು. ದಾರಿಯಲ್ಲಿ ಒಂದು ತೊಂದರೆಯಾಯಿತು: ಲಾಸ್ ಕಾಂಚಾಸ್ಸನ್ನು ತಲಪುವ ಹೊತ್ತಿಗೆ ಆ ದೇಶದಲ್ಲಿ ಕ್ರಾಂತಿಯುಂಟಾಗಿತ್ತು. ಆದುದರಿಂದ ಡಾರ್ವಿನ್ನನನ್ನು ಮುಂದಕ್ಕೆ ಬಿಡದೆ ತಡೆದು ನಿಲ್ಲಿಸಿದರು. ಕೊನೆಗೆ ಅವನು ಹಲವು ಪರಿಚಯಸ್ಥರ ಸಹಾಯದಿಂದ ಬಿಡುಗಡೆ ಹೊಂದಿ, ಬಿಯೊನಾಸ್ ಐರ್‌ಗೆ ಹಿಂದಿರುಗಬೇಕಾಯಿತು. ಅಲ್ಲಿ ಸುಮಾರು ಹದಿನೈದು ದಿವಸಗಳ ವರೆಗೆ ಸುಧಾರಿಸಿಕೊಂಡು ಮಾಂಟಿವೀಡಿಯೋಕ್ಕೆ ತೆರಳಿದನು. ಬೀಗಲ್ ನಾವೆ ಇನ್ನೂ ಹಲವು ದಿನ ಅಲ್ಲಿಯೇ ನಿಲ್ಲುವಂತಿದ್ದುದರಿಂದ ಮರಳಿ ಒಳನಾಡನ್ನು ಹೊಕ್ಕು ಉರುಗ್ವೆಯ ಮೇಲಣ ಪ್ರದೇಶಗಳನ್ನು ಸಂಶೋಧಿಸಿಕೊಂಡು ಹಿಂದಿರುಗಿದನು.

ಒಳನಾಡಿನಿಂದ ಹಿಂದಿರುಗುವನು

ಬೀಗಲ್‌ನಾವೆ ಮಾಂಟಿವೀಡಿಯೋವನ್ನುಳಿದು ಪೋರ್ಟ್ ಡಿಸೈರಿಗೆ ಹೊರಟಿತು. ಪೆಟಗೋನಿಯ ಸಮುದ್ರದಲ್ಲಿ ಹಡಗು ಬರುತ್ತಿರುವಾಗ ಬಣ್ಣದ ಚಿಟ್ಟೆಗಳ ಗುಂಪೊಂದು ಯಾತ್ರಿಕರ ಕಣ್ಣಿಗೆ ಕಂಡಿತು. ಅವರಲ್ಲ ನೇಕರು ಆ ಚಿಟ್ಟೆಗಳು ಅಪಾಯಕರವಾದುವೆಂದು ಚೀರಿದರು. ತೀರದಿಂದ ಸುಮಾರು ಹದಿನೇಳು ಮೈಲಿ ದೂರ ಈಜಿಕೊಂಡು ಒಂದು ಹಡಗಿನಗೋಡೆ

ಯನ್ನು ಹತ್ತಿದ್ದ ಸಗಣಿಚಿಟ್ಟೆಯೊಂದನ್ನು ಕಂಡು ಡಾರ್ವಿನ್ ಆಶ್ಚರ್ಯ ಪಟ್ಟನು. ಹಾಗೆಯೇ ೩೫೦ ಮೈಲಿಗಳ ದೂರದಿಂದ ಹಾರಿಕೊಂಡು ಬಂದಿದ್ದ ಮಿಡತೆಯೊಂದು ಹಡಗನ್ನು ಕಚ್ಚಿಕೊಂಡಿದ್ದದನ್ನು ಕಂಡು ಎಲ್ಲರೂ ಮುಗ್ಧರಾದರು. ಇಪ್ಪತ್ತು ದಿನಗಳ ತನಕ ನಾವೆ ಯಾನಮಾಡಿ ಕೊನೆಗೆ ಪೋರ್ಟ್ ಡಿಸೈರನ್ನು ಮುಟ್ಟಿತು.

ಪಟಗೋನಿಯ ಸಮುದ್ರದಲ್ಲಿ

ಅಲ್ಲಿಗೆ ತಲಪಿದೊಡನೆಯೇ ಯಾತ್ರಿಕರು ಒಳನಾಡನ್ನು ಹೊಕ್ಕು ಸಂಶೋಧನೆ ನಡೆಯಿಸಲು ಸಿದ್ಧಪಡಿಸಿಕೊಂಡರು. ಡಾರ್ವಿನ್ ಉರುಗ್ವೆ ದೇಶವನ್ನೆಲ್ಲ ಸಂಚರಿಸಿಕೊಂಡು ಪೆಟಗೋನಿಯವನ್ನು ಹೊಕ್ಕನು. ಖಂಡದ ಉತ್ತರಭಾಗದಲ್ಲಿ ನಡೆದಂಥ ಉತ್ತಮ ಸಂಶೋಧನೆಗಳಾವುವೂ ಅಲ್ಲಿ ನಡೆಯಲಿಲ್ಲವೆಂದೇ ಹೇಳಬೇಕು. ಹಿಂದೆ ಸಂಗ್ರಹಿಸಿದ್ದಂಥ ಅಮೂಲ್ಯ ಸಂಗ್ರಹಗಳಾವುವೂ ಅಲ್ಲಿ ನಡೆಯಲಿಲ್ಲ ಆದರೂ ಡಾರ್ವಿನ್ನನ ಮನಸ್ಸು ನಿರಾಶೆಯಿಂದ ಸೋಮಾರಿಯಂತಿರದೆ ಹಿಂದೆ ಪರಿಶೀಲಿಸಿದ್ದ ವಿವಿಧವಿಚಾರಗಳ ಮೇಲೆ ಅನಂತವಾಗಿ ಯೋಚಿಸುತ್ತಲೇ ಇತ್ತು. ಹಲವು ದಿನಗಳನಂತರ ಒಳನಾಡಿನಿಂದ ಪೋರ್ಟ್ ಡಿಸೈರಿಗೆ ಹಿಂದಿರುಗಿ ಇತರ ಯಾತ್ರಿಕರೊಡಗೂಡಿ ದಕ್ಷಿಣಾಭಿಮುಖವಾಗಿ ಯಾನಮಾಡಿ ಸುಮಾರು ೧೧೦ ಮೈಲಿ ದೂರದಲ್ಲಿರುವ ಸೇಂಟ್ ಜೂಲಿಯನ್ನನು ತಲಪಿದನು. ಅಲ್ಲಿನ ಭೂಲಕ್ಷಣಗಳನ್ನು ಪರಿಶೀಲಿಸುತ್ತಿರುವಾಗ ಅವನ ಮನಸ್ಸಿನಲ್ಲಿ ಹಲವು ಮುಖ್ಯಾಂಶಗಳು ಹೊಳೆದುವು ಹಿಂದೆ ತಾನು ಯೋಚಿಸಿದ್ದಂತೆ ಪೆಟಗೋನಿಯ ಪ್ರದೇಶವೆಲ್ಲ ಇತ್ತೀಚೆಗೆ ಮೇಲೆದ್ದುದೆಂಬ ಅಂಶ ಚೆನ್ನಾಗಿ ಸ್ಥಿರಪಟ್ಟಿತು. ಅಂದಿನವರೆಗೂ ಸಂಗ್ರಹಿಸಿದ್ದ ಪಳೆಯುಳಿಕೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಂತೆ 'ಪ್ರಾಚೀನ ಪ್ರಾಣಿಗಳಿಗೂ ಇಂದಿನ ಪ್ರಾಣಿಗಳಿಗೂ ಯಾವುದೋ ಒಂದು ಸಂಬಂಧವಿದ್ದೇ ಇದೆ' ಎಂಬ ಜ್ಞಾನ ಅವನ ಮನಸ್ಸಿನಲ್ಲಿ ಬೇರೂರಿತು ಹಿಂದೆ ಅಲ್ಲಿ ಬದುಕಿ ಪಳೆಯುಳಿಕೆಗಳನ್ನು ಬಿಟ್ಟಿರುವ ಪ್ರಾಣಿಗಳೇಕೆ ಈ ದಿನ ಇರುವುದಿಲ್ಲ? ಅವುಗಳು ಅಳಿದುಹೋದುದು ಹೇಗೆ? ಈ ದಿವಸದ ಕೆಲವು ಪ್ರಾಣಿವಂಶಗಳು ಏಕೆ ಕ್ರಮವಾಗಿ ಶಿಥಿಲವಾಗುತ್ತಿವೆ? ಮೊದಲಾದ ಹೊಸ ಹೊಸ ವಿಚಾರ

ಪೆಟಗೋನಿಯದ ಭೂಲಕ್ಷಣ

ಜ್ಞಾನವೂ ಅವನ ದೃಷ್ಟಿಪಥದಲ್ಲಿ ಹುಟ್ಟಿಕೊಂಡಿತು. ಈ ವಿಚಾರಗಳನ್ನು ವಿಮರ್ಶಿಸಿ ಸಮಂಜಸವಾದ ಅರ್ಥವನ್ನು ಹುಡುಕಲು ಹೋದಾಗೆಲ್ಲ ಅವನ ಮನಸ್ಸಿನಲ್ಲಿ ಮತ್ತೆ ಹೊಸ ಸಮಸ್ಯೆಗಳು ಹುಟ್ಟುತ್ತಿದ್ದುವು. ಅಹೋರಾತ್ರಿಯೂ ನಡೆಯುತ್ತಿದ್ದ ಈ ಹೋರಾಟದ ಫಲವಾಗಿ ಎಂಥ ದಿವ್ಯತತ್ವಗಳು ಉದಿಸಿದುವೆಂಬುದನ್ನು ಮುಂದೆ ಕಾಣುತ್ತೇವೆ.

ತೀರಪ್ರದೇಶದಲ್ಲೂ ಒಳನಾಡಿನಲ್ಲೂ ಸಂಶೋಧನೆ ನಡೆಯಿಸುತ್ತಿದ್ದಂತೆ ಡಾರ್ವಿನ್ ಹತ್ತಿರದ ದ್ವೀಪಗಳಿಗೂ ಹೋಗಿ ಪರಿಶೀಲಿಸುತ್ತಿದ್ದನು. ಟೆರಾ ಡೆಲ್ಫ್ಯೂಗೊ ಎಂಬ ದ್ವೀಪವನ್ನು ನೋಡಲು ಹೋಗಿದ್ದಾಗ ಅಲ್ಲಿನ ಜನರು ಖಂಡದಿಂದ ಬಹುಕಾಲದಿಂದಲೂ ಪ್ರತ್ಯೇಕವಾಗಿದ್ದುದರಿಂದ ಹೇಗೆ ಅವರ

**ಟೆರಾಡೆಲ್ಫ್ಯೂಗೊ ದ್ವೀಪದಲ್ಲಿ**

ನಾಗರಿಕತೆ ಶಿಶುತ್ವದಲ್ಲೇ ಉಳಿಯಿತೆಂಬುದನ್ನು ಅರಿತುಕೊಂಡನು. ಈಚೆಗೆ ಯುರೋಪಿನ ಪಾದ್ರಿಗಳು ಅಂಥ ದೀನವರ್ಗದ ಮಾನವ ಸಮಾಜದಲ್ಲಿ ಜ್ಞಾನ ಪ್ರಸರಣ ಕಾರ್ಯವನ್ನು ಕೈಕೊಂಡಿರುವರೆಂದು ಕೇಳಿ ಆನಂದ ಪಟ್ಟನು. ಅಧೋಗತಿಯಲ್ಲಿರುವ ಸೋದರ ವರ್ಗವೊಂದರ ಕಲ್ಯಾಣಕ್ಕಾಗಿ ಆತ್ಮಾರ್ಪಣೆ ಮಾಡುತ್ತಿದ್ದ ಆ ಪಾದ್ರಿಗಳನ್ನು ಪ್ರಶಂಸಿಸಿ ತನ್ನ ಕೈಲಾದಷ್ಟು ಕಾಣಿಕೆಯನ್ನು ಸಲ್ಲಿಸಿದನಂತೆ.

ದಕ್ಷಿಣದಲ್ಲಿ ಸಂಶೋಧನೆಗಳು ಮುಗಿದನಂತರ ಬೀಗಲ್ ಜಹಜು ಚಿಲಿ ಪ್ರದೇಶದ ಕಡೆಗೆ ಹೊರಟು ವಾಲ್ಪರೈಸೋವನ್ನು ಮುಟ್ಟಿತು. ಅಲ್ಲಿದ್ದುಕೊಂಡು ಆಂಡೀಸ್ ಪರ್ವತಗಳಿಗೂ ಸಾಂಟಿಯಾಗೋ ನಗರಕ್ಕೂ ಸುತ್ತ

**ಚಿಲಿ ಪ್ರದೇಶದಲ್ಲಿ**

ಮುತ್ತಣ ಪ್ರದೇಶಗಳಲ್ಲಿದ್ದ ಚಿನ್ನದ ಮತ್ತು ತಾಮ್ರದ ಗಣಿಗಳಿಗೂ ಹೋಗಿ ಡಾರ್ವಿನ್ ಅನೇಕ ಉಪಯುಕ್ತ ವಿಷಯಗಳನ್ನು ಸಂಗ್ರಹಿಸಿಕೊಂಡನು. ಬಿಡುವಿಲ್ಲದೆ ಅನೇಕ ಕಡೆ ಸಂಚರಿಸಿ ಪರಿಶೀಲಿಸಿದ್ದರಿಂದ ಅವನ ಆರೋಗ್ಯ ಮತ್ತೆ ಕೆಟ್ಟಿತು. ಆಗ ವಾಲ್ಪರೈಸೋವಿನಲ್ಲಿ ನೆಲಸಿದ್ದ ಅವನ ಸಹಪಾಠಿಯೊಬ್ಬನ ಅತಿಥಿಯಾಗಿದ್ದು ಒಂದು ತಿಂಗಳವರೆಗೂ ಸುಧಾರಿಸಿಕೊಳ್ಳಬೇಕಾಯಿತು. ಆ ಗೆಳೆಯನು ನೀಡಿದ ಸಹಾಯವನ್ನು ಡಾರ್ವಿನ್ ಆಜೀವವೂ ಸ್ಮರಿಸಿಕೊಳ್ಳುತ್ತಿದ್ದನು.

೧೮೩೫ ನೆಯ ಫೆಬ್ರುವರಿಯಲ್ಲಿ ಡಾರ್ವಿನ್ ಇತರ ಯಾತ್ರಿಕರೊಡನೆ ವಾಲ್ಡೀವಿಯವನ್ನು ಸೇರಿದನು. ಅಲ್ಲಿ ಸಂಚರಿಸುತ್ತಿರುವಾಗ ಭೂಮಿ ಒಮ್ಮೆ ಕಂಪಿಸಿತು. ಎಲ್ಲರಂತೆ ಅವನೂ ಆ ಕಂಪನದ ಅನುಭವವನ್ನು ಪಡೆದನು.

ವಾಲ್ಡೀವಿಯದ ಹತ್ತಿರದ ಭೂಕಂಪ

ತಾನು ತಾಯ್ನಾಡಿಗೆ ಹಿಂದಿರುಗಿದ ಮೇಲೆ ಆ ಭೂಕಂಪವನ್ನು ವಿವರಿಸುತ್ತಾ 'ಆಗ ನಾನು ನೆಟ್ಟಗೆ ನಿಲ್ಲಲು ಪ್ರಯತ್ನಿಸಿದೆ. ಆದರೆ ಆ ಕಂಪನದಿಂದ ತಲೆ ತಿರುಗುವಂತಾಯಿತು. ಬಿರುಗಾಳಿಯ ಹೊಡೆತದಲ್ಲಿ ಸಾಗರದ ತರಂಗಗಳ ನಡುವೆ ಹೊರಳಾಡುವ ಹಡಗಿನಂತೆ ಅನುಭವವಾಯಿತು. ಅಂಥ ನಿಸರ್ಗಕ್ರೋಧದಿಂದ ಯುಗಯುಗಗಳ ಬಾಳಿಕೆಯ ಫಲವಾಗಿ ಬೆಳೆದು ನಿಂತಿರುವ ಮಾನವನ ಸಂಸ್ಕೃತಿ, ಕಲೆ, ನಾಗರಿಕತೆ, ಸಾಹಿತ್ಯ ಮೊದಲಾದ ಐಶ್ವರ್ಯವೆಲ್ಲ ಮಣ್ಣುಗೂಡುವುದಲ್ಲಾ' ಎಂದು ನಿಟ್ಟುಸಿರು ಬಿಟ್ಟಿರುವನು. ಅಲ್ಲಿಂದ ಮರಳಿ ವಾಲ್ಪರೈಸೋವಿಗೆ ಹಿಂದಿರುಗಿ ಮತ್ತೆ ಸಂಶೋಧನೆಗಾರಂಭಿಸಿದನು. ಒಮ್ಮೆ ಕಾರ್ಡಿಲೇರ ಪರ್ವತಶ್ರೇಣಿಯನ್ನು ಇಕ್ಕಟ್ಟಾದ ಪೋರ್ಟಿಲೋ ಎಂಬ ಕಣಿವೆಯ ಮಾರ್ಗವಾಗಿ ಹಾದು ಹೋಗಲು ನುಗ್ಗಿದನು. ಅಗಮ್ಯವಾಗಿದ್ದ ಆ ಕಣಿವೆಯ ಇಕ್ಕೆಲದಲ್ಲೂ ನಿಂತಿದ್ದ ಗತ ಶತಮಾನಗಳ ಬಂಡೆಗಳು ಡಾರ್ವಿನ್ನನ ಮನವನ್ನಾಕರ್ಷಿಸಿದುವು ಆ ಶಿಲೆಗಳ ಲಕ್ಷಣವನ್ನು ಪರಿಶೀಲಿಸಿದನು. ಅಲ್ಲಿ ಇಳಿದೋಡುತ್ತಿದ್ದ ಗಿರಿನದಿಗಳಲ್ಲಿ ಕಲ್ಲುಗಳು ಮಸೆದಾಡುತ್ತಿರುವುದನ್ನು ಕಂಡು 'ಈ ವನದ ನದಿಗಳು ನನಗೆ ಭೂಮಿಶಾಸ್ತ್ರವನ್ನು ಬೋಧಿಸುತ್ತಿವೆ.' ಎಂದುಕೊಂಡನಂತೆ! ಅಲ್ಲಿ ತನ್ನ ಮನಸ್ಸಿಗಾದ ಹಿರಿಯ ಆನಂದವನ್ನು ಆವೇಶಪೂರಿತನಾಗಿ ವರ್ಣಿಸಿರುವುದನ್ನು ನೋಡಿದರೆ ಅವನು ಮನಸ್ಸು ಮಾಡಿದ್ದರೆ ಎಂಥ ಕವಿಯಾಗುತ್ತಿದ್ದನೆನಿಸುತ್ತದೆ.

ಆ ಕಾಲದಲ್ಲಿ ಚಿಲಿಯ ಉತ್ತರ ಪ್ರದೇಶದಲ್ಲೂ ಪೆರುವಿನಲ್ಲೂ ಸಾರ್ವಜನಿಕ ಕ್ಷೋಭೆಯುಂಟಾಗಿದ್ದುದರಿಂದ ಹೆಚ್ಚು ಸಂಶೋಧನೆಗಳನ್ನು ನಡೆಸಲು ಸಾಧ್ಯವಾಗಲಿಲ್ಲ.

ದಕ್ಷಿಣ ಅಮೆರಿಕವನ್ನು ಬಿಡುವದು

ಬೀಗಲ್ ಜಹಜು ಸೆಪ್ಟೆಂಬರ್ ತಿಂಗಳಲ್ಲಿ ಅಮೆರಿಕವನ್ನುಳಿದು ಪೆಸಿಫಿಕ್ ಮಹಾಸಾಗರವನ್ನು ಹೊಕ್ಕು ಯಾತ್ರೆಯನ್ನು ಮುಂದುವರಿಸಿತು.

ದಾರಿಯಲ್ಲಿ ಗಾಲ್ಪೆಗೋ ದ್ವೀಪಸ್ತೋಮದಲ್ಲುಳಿದು ಡಾರ್ವಿನ್ ಅನೇಕ ಸಂಶೋಧನೆಗಳನ್ನು ನಡೆಸಿದನು. ಅಲ್ಲಿದ್ದ ಎರಡು ಸಹಸ್ರ ಜ್ವಾಲಾಮುಖಿಗಳ ಕುರುಹುಗಳೂ, ತಂಡತಂಡಾಗಿ ಬೆಳೆದು ಬರಲುಗಳಂತಿದ್ದ ಮರಗಿಡಗಳೂ ಮನುಷ್ಯನಿಗೆ ಸ್ವಲ್ಪವೂ ಹೆದರದಂಥ ವಿಚಿತ್ರ ಪ್ರಾಣಿಗಳೂ ಅವನ ಮನಸ್ಸನ್ನಾಕರ್ಷಿಸಿದುದಲ್ಲದೆ ಅನೇಕ ಹೊಸ ಭಾವನೆಗಳನ್ನೂ ಹುಟ್ಟಿಸಿದುವು. ಅಗ್ನಿಪರ್ವತಗಳಿಂದ ಉಕ್ಕಿಬಂದು ಆರಿ ನಿಂತಿದ್ದ ಪ್ರವಾಹದ ಕುರುಹು ಇನ್ನೂ ಗೋಚರಿಸುತ್ತಿದ್ದುದನ್ನು ಕಂಡು ಡಾರ್ವಿನ್ ಆ ದ್ವೀಪಗಳೆಲ್ಲವೂ ಅತ್ಯಾಧುನಿಕ ಕಾಲದಲ್ಲಿ ಸಾಗರದಿಂದ ಅಗ್ನಿಪರ್ವತಗಳ ದೆಸೆಯಿಂದ ಮೇಲೆದ್ದು ನಿರ್ಮಿತವಾದುವೆಂದು ತೀರ್ಮಾನಿಸಿಕೊಂಡನು ಅಲ್ಲಿನ ಮೂಲನಿವಾಸಿಗಳ ನಾಗರಿಕತೆಯ ಶೈಶವಾವಸ್ಥೆಯನ್ನು ಕಂಡು 'ಮಾನವನ ಶತಶತಮಾನಗಳ ಹಿಂದಿನ ಪೂರ್ವಜರಿಗೂ ಇವರಿಗೂ ಯಾವ ವ್ಯತ್ಯಾಸವೂ ಇದ್ದಂತೆ ತೋರವುದಿಲ್ಲ. ಆದಿಮಾನವನು ಇವರಂತೆಯೇ ಇದ್ದಿರಬೇಕು. ಇಂಥವನು ನಮ್ಮ ಮೂಲಪುರುಷನಾಗಿದ್ದ ಪಕ್ಷಕ್ಕೆ ಮಂಗಗಳು ಮಾನವರ ಪೂರ್ವಜರೆಂದು ಹೇಳಿದರೆ ಅಷ್ಟೇನೂ ಆಶ್ಚರ್ಯವಾಗಲಾರದು' ಎಂದು ತನ್ನ ಮನಸ್ಸಿನಲ್ಲಿ ಗ್ರಹಿಸಿಕೊಂಡನು.

ಗಾಲ್ಪೆಗೋದ ಮೂಲನಿವಾಸಿಗಳು

ಗಾಲ್ಪೆಗೋ ದ್ವೀಪಗಳನ್ನು ಪರಿಶೀಲಿಸಿಕೊಂಡು ಯಾತ್ರಿಕರು ೩೨೦೦ ಮೈಲಿ ದೂರದಲ್ಲಿರುವ ಟಾಹಿಟಿಯನ್ನುದ್ದೇಶಿಸಿ ಹೊರಟರು. ಸಾಗರದ ಮೇಲೆ ಇಪ್ಪತ್ತೈದು ದಿನಗಳ ತನಕ ಒಂದೇ ಸಮನೆ ಯಾನ ಮಾಡಬೇಕಾಯಿತು. ಮಾರ್ಗ ಸುಖಪ್ರದವಾಗಿಯೂ ಹರ್ಷದಾಯಕವಾಗಿಯೂ ಇತ್ತು. ಆಗ ತರುಣ ವಿಜ್ಞಾನಿ ಡಾರ್ವಿನ್ ಅನುಭವಿಸಿದ ಹಿರಿಯ ಆನಂದವನ್ನು ತನ್ನ ಗ್ರಂಥದಲ್ಲೊಂದೆಡೆ ವಿವರಿಸಿರುವನು. ಟಾಹಿಟಿಯನ್ನು ಸೇರಿದ ಮೇಲೆ ಅಲ್ಲಿ ತನ್ನ ದೇಶದಿಂದ ತಂದು ಬೆಳೆಸುತ್ತಿದ್ದ ಅನೇಕ ಫಲಪುಷ್ಪಗಳ ಗಿಡಗಳನ್ನು ನೋಡಿ ಆನಂದಿಸಿದನು. ಅಲ್ಲಿನ ಮೂಲನಿವಾಸಿಗಳಲ್ಲಿ ನಾಗರಿಕತೆಯು ಪ್ರಸರಣಕ್ಕಾಗಿ ಪಾದ್ರಿಗಳು ಮಾಡುತ್ತಿದ್ದ ಪ್ರಯತ್ನಗಳನ್ನು ಕೇಳಿ ತಿಳಿದುಕೊಂಡನು. ಅನಂತರ ನ್ಯೂಜಿಲೆಂಡಿಗೆ ಹೋಗಿ ಅಲ್ಲಿ ತನ್ನ ತಾಯ್ನಾಡಿನವರು ಹೊಸದಾಗಿ

ಆಸ್ಟ್ರೇಲಿಯದಲ್ಲಿ

ರಾಜ್ಯಪದ್ಧತಿಯನ್ನು ಏರ್ಪಡಿಸುತ್ತಿರುವುದನ್ನು ಕಂಡು ದೇಶಭಕ್ತನಂತೆ ಹೆಮ್ಮೆಪಟ್ಟುಕೊಂಡನಂತೆ. ಸಿಡ್ನಿಗೂ ಹೋಗಿ ಅಲ್ಲಿನ ಪರ್ವತಪ್ರದೇಶಗಳ ಕಡೆಗೆ ಸಂಶೋಧನೆಗಾಗಿ ಹೋಗಿಬಂದನು. ಆ ಭೂಭಾಗದಲ್ಲಿ ವಾಸಿಸುತ್ತಿದ್ದ ಡಕ್‌ಬಿಲ್, ಪ್ಲಾಟಿಪಸ್ ಮುಂತಾದ ಆದಿಸಸ್ತನಿಗಳನ್ನು ಪರಿಶೀಲಿಸಿದನು. ಸಸ್ತನಿಗಳೆಂದರೆ ಮರಿಗಳನ್ನು ಹಾಕಿ ಎದೆಹಾಲನ್ನು ಕುಡಿಸತಕ್ಕ ಪ್ರಾಣಿಗಳು. ಅವುಗಳಲ್ಲಿ ಆದಿಸಸ್ತನಿಗಳು ಕೆಳವರ್ಗದವು. ಅವು ಮೊಟ್ಟೆಯನ್ನಿಡುತ್ತವೆ! ಆ ಖಂಡದ ದಕ್ಷಿಣ ಭಾಗದಲ್ಲಿರುವ ತಾಸ್ಮೇನಿಯಾ ದ್ವೀಪವನ್ನೂ ಸಂದರ್ಶಿಸಿ ಅಲ್ಲಿನ ಪ್ರಾಣಿವರ್ಗದ ವೈಶಿಷ್ಟ್ಯವನ್ನು ಅರಿತುಕೊಂಡನು. ಕೀಲಿಂಗ್ ದ್ವೀಪಕ್ಕೂ ಹೋಗಿ ಅದರ ಭೂಲಕ್ಷಣಗಳನ್ನು ಪರೀಕ್ಷಿಸಿ, ಹವಳದ ಹುಳುಗಳು ಸಾಗರದ ನಡುವೆ ಭೂಭಾಗಗಳನ್ನು ಹೇಗೆ ನಿರ್ಮಿಸಿರುವುವೆಂಬುದನ್ನು ತಿಳಿದುಕೊಂಡನು.

ಆಸ್ಟ್ರೇಲಿಯದಲ್ಲಿ ಅಂಥ ಮಹತ್ತರ ಸಂಶೋಧನೆಗಳಾವುವೂ ನಡೆಯದಿದ್ದರೂ ಆ ಖಂಡದ ಸಸ್ಯಗಳು ಮತ್ತು ಪ್ರಾಣಿಗಳು ಹೇಗೆ ಇನ್ನಿತರ ಖಂಡಗಳವುಗಳಿಗಿಂತ ಬದಲಾಗಿರುವುವೆಂಬುದನ್ನು ಪರಿಶೀಲಿಸಿದನು. ಹವಳದ ದಿಣ್ಣೆಗಳನ್ನು ಕಣ್ಣಾರ ಕಂಡು, ಹವಳದ ಹುಳುಗಳ ಕಾರ್ಯವನ್ನು ನೋಡಿ ಆಶ್ಚರ್ಯಪಟ್ಟನು. ಯಾತ್ರಿಕರು ಮಾರಿಷಸ್, ಕೇಪ್‌ಟೌನ್, ಸೇಂಟ್‌ಹೆಲೀನ, ಅಸೆನ್‌ಷನ್, ಬೇಹಿಯಾ, ಪರ್ನಾಂಬುಕೋ, ಕೇಪ್‌ವೆರ್ಡ್ ಮತ್ತು ಅಜ್ಹೊರ್ಸ್‌ಗಳನ್ನು ಕ್ರಮವಾಗಿ ದಾಟಿಕೊಂಡು ೧೮೩೬ನೆಯ ಅಕ್ಟೋಬರ್ ಎರಡನೆಯ ದಿನ ತಾಯ್ನಾಡಿಗೆ ಹಿಂದಿರುಗಿದರು.

ತಾಯ್ನಾಡಿಗೆ ಹಿಂದಿರುಗಿದರು

ಬೀಗಲ್ ವಿಜ್ಞಾನಯಾತ್ರೆಯಲ್ಲಿ ತನಗೊಪ್ಪಿಸಿದ್ದ ಕಾರ್ಯವನ್ನು ಡಾರ್ವಿನ್ ಯಶಸ್ವಿಯಾಗಿ ಪೂರೈಸಿ, ಎಲ್ಲರ ಮೆಚ್ಚಿಗೆಯನ್ನೂ ಪಡೆದನು. ಆಗ ಅವನು ಪ್ರದರ್ಶಿಸಿದ ಅಪಾರ ಸಾಹಸ ಸಹನೆಗಳನ್ನು ಕಂಡು ಫಿಟ್ಸ್‌ರಾಯನು ಆನಂದಪಟ್ಟುದಲ್ಲದೆ ತಾನು ಅವನ ಯೋಗ್ಯತೆಯ ವಿಚಾರದಲ್ಲಿ ಅನುಮಾನಿಸಿದ್ದಕ್ಕಾಗಿ ತುಂಬ ವಿಷಾದಪಟ್ಟನು. ಅಂಥ ತರುಣ ವಿಜ್ಞಾನಿಯ ಸೇವೆಯನ್ನು ಗೌರವಿಸುವುದಕ್ಕೆಂದು ಪ್ರವಾಸ ಮಾರ್ಗದಲ್ಲಿನ ಹಲವು ಸ್ಥಳಗಳನ್ನು

ಡಾರ್ವಿನ್ನನ ಕಾರ್ಯ ಮಹೋನ್ನತಿ

ಡಾರ್ವಿನ್ನನ ಹೆಸರಿನಿಂದ ಕರೆದನು. ಇಂದಿಗೂ ಆ ಸ್ಥಳಗಳು ಅದೇ ಹೆಸರುಗಳಲ್ಲುಳಿದುಕೊಂಡು ಅವನ ಕಾರ್ಯಮಹೋನ್ನತಿಯನ್ನು ಸ್ಮರಣೆಗೆ ತರುತ್ತಿವೆ. ಅವುಗಳಲ್ಲಿ ಮೌಂಟ್ ಡಾರ್ವಿನ್, ಪೋರ್ಟ್ ಡಾರ್ವಿನ್, ಡಾರ್ವಿನ್ ಸೌಂಡ್ ಇತ್ಯಾದಿಗಳನ್ನು ಉಲ್ಲೇಖಿಸಬಹುದು. ರಾಯಲ್ ಜಿಯಗ್ರಾಫಿಕಲ್ ಸಂಘದವರು ಯಾತ್ರೆಯ ಮುಖಂಡನಿಗೆ ಸ್ವರ್ಣಪದಕವನ್ನಿತ್ತು ಗೌರವಿಸಿದಾಗ ರಾಯನು ಡಾರ್ವಿನ್ನನ ಸೇವೆಯೇ ತನ್ನ ವಿಜಯದ ಮೂಲಕಾರಣವೆಂದು ಒಮ್ಮನಸ್ಸಿನಿಂದ ಹೇಳಿ ಅವನನ್ನು ಕೊಂಡಾಡಿದನು. ರೋಗದಿಂದ ನರಳುತ್ತಿದ್ದರೂ ಐದು ವರ್ಷಗಳ ತನಕ ಬಿಡುವಿಲ್ಲದೆ ಸಂಶೋಧನೆಗಳನ್ನು ನಡೆಯಿಸಿದುದನ್ನು ಕಂಡ ಯಾತ್ರಿಕರು ಅವನ ಸಾಹಸ ಸಹನಾದಿ ಸದ್ಗುಣಗಳನ್ನು ಕೊಂಡಾಡಿದುದಲ್ಲದೆ ಅವನಲ್ಲಿ ಭಕ್ತಿಗೌರವಗಳನ್ನೂ ತೋರಿಸಿದರು.

ಬೀಗಲ್ ವಿಜ್ಞಾನ ಪ್ರವಾಸ ಡಾರ್ವಿನ್ನನ ಜೀವನದಲ್ಲಿ ಅತ್ಯಂತ ಪ್ರಧಾನವಾದುದು. ಇದನ್ನು ಬಿಟ್ಟರೆ ಅವನ ಜೀವನದಲ್ಲಿ ಇನ್ನಾವ ಘಟನೆಯೂ ಅಷ್ಟು ಪ್ರಧಾನವಾಗಿ ಕಾಣುವುದಿಲ್ಲ. 'ನನಗೆ ನಿಜವಾದ ಶಿಕ್ಷಣ ದೊರೆತುದು ಬೀಗಲ್ ಪ್ರವಾಸದಿಂದ. ಅದೇ ನನ್ನ ಜೀವನದ ಗುರಿಯನ್ನು ನಿರ್ಧರಿಸಿದ್ದು' ಎಂದು ಅವನೇ ಒಪ್ಪಿಕೊಂಡಿರುವನು. ಮೊದಲಿನಿಂದ ಕೊನೆಯುವರೆಗೂ ಅನೇಕ ವಿಚಾರಪ್ರಚೋದಕ ದೃಶ್ಯಗಳನ್ನು ನೋಡಿ, ವಿವಿಧ ಸಮಸ್ಯೆಗಳನ್ನು ಬಿಡಿಸಲು ಮೌನವಾಗಿ ಯೋಚಿಸತೊಡಗಿದನು. ಗಾಲ್ಪೆಗೋ ದ್ವೀಪದಲ್ಲಿ ತಾನು ನೋಡಿದ್ದ ಮೂಲನಿವಾಸಿಗಳ ದರ್ಶನದಿಂದ ಅವನ ಜ್ಞಾನದ ಬೆಳವಣಿಗೆಗಾದ ಅಪಾರ ಸಹಾಯವನ್ನು ಹಿಂದೆ ವಿವರಿಸಿರುತ್ತೇವೆ. ಆಗ ಹೊಳೆದ ಭಾವನೆಯ ಬೆಳಕಿನಲ್ಲಿಯೇ ಮಾನವನ ಪೂರ್ವಜರು ಮಂಗಗಳಂಥ ಪ್ರಾಣಿಗಳೆಂಬ ಸತ್ಯದರ್ಶನವಾದುದು. ಆ ಕಾಡು ಜನರನ್ನು ಕಂಡಾಗ ಅವನ ಸ್ಮೃತಿಪಥ ಗತಶತಮಾನಗಳಲ್ಲಿ ಹರಿದಾಡಿ, ಆದಿಮಾನವನು ಈ ದಿನದ ಸ್ಥಿತಿಗೆ ಬರಲು ನಡೆಸಿದ ವಿಕಾಸ ಯಾತ್ರೆಯನ್ನು ದರ್ಶಿಸಿರಬೇಕು. ಬೀಗಲ್ ಯಾತ್ರೆಯಲ್ಲಿ ಕಂಡ ಎಲ್ಲ ದೃಶ್ಯಗಳೂ ಅವನ ಪ್ರತಿಭೆಯ ಬೆಳಕಿನಲ್ಲಿ ಹೊಮ್ಮಿ ವಿಕಾಸ ತತ್ವದ ನಿರೂಪಣೆಗೂ ಪೋಷಣೆಗೂ ನೆರವಾದುವು.

ಯಾತ್ರೆಯಿಂದಾದ ಶಿಕ್ಷಣ

ರಾಬರ್ಟನು ತನ್ನ ಮಗ ಸೋಮಾರಿಯಾಗಿ ಹೋಗುವನೆಂದು ಅನುಮಾನಿಸಿದ್ದನಷ್ಟೆ. ಆದರೆ, ಡಾರ್ವಿನ್ ಯಾತ್ರೆಯಲ್ಲಿ ಪರಿಶೀಲನಾಶಕ್ತಿಯನ್ನು ಹೆಚ್ಚಿಸಿಕೊಂಡುದಲ್ಲದೆ ಅಪಾರವಾಗಿ ದುಡಿದು, ಹುದುಗಿದ್ದ ತನ್ನ ಪ್ರತಿಭೆಯನ್ನು ಬೆಳೆಯಿಸಿಕೊಂಡನು. ಯಾತ್ರೆಯ ಕಾಲದಲ್ಲಿ ಮೊದಲಿನ ಎರಡು ವರ್ಷಗಳೂ ಸಂಗ್ರಹಕ್ಕಾವಶ್ಯಕವಾದ ಹಕ್ಕಿ ಮೊದಲಾದುವುಗಳನ್ನು ತಾನೇ ಹೊಡೆದು ಶೇಖರಿಸಿಕೊಳ್ಳುತ್ತಿದ್ದನು. ಕ್ರಮಕ್ರಮವಾಗಿ ಬೇಟೆಯಲ್ಲಿದ್ದ ಕುತೂಹಲವೂ ಕಡಮೆಯಾಗಿ ವಿಜ್ಞಾನಪ್ರೇಮ ಬೆಳೆಯುತ್ತಾ ಬಂತು. ತನಗಿದ್ದ ಎಲ್ಲ ಅಭಿರುಚಿಗಳಿಗಿಂತಲೂ ವಿಜ್ಞಾನಕಾತರತೆ ಹೆಚ್ಚುತ್ತಾ ಬಂದು, ಆ ಮಾರ್ಗದಲ್ಲಿ ಅಹೋರಾತ್ರಿಯೂ ದುಡಿಯಲು ಮೊದಲುಮಾಡಿದನು.

ಡಾರ್ವಿನ್ನನ ಪ್ರತಿಭೆ ಅಪಾರವಾಗಿದ್ದರೂ ಅವನಿಗೆ ಜೀವಶಾಸ್ತ್ರದಲ್ಲಿ ಕ್ರಮವಾದ ವಿದ್ಯಾಭ್ಯಾಸ ಶಾಲೆಯಲ್ಲಿ ನಡೆದಿರಲಿಲ್ಲವೆಂದೇ ಹೇಳಬೇಕು. ಆದುದರಿಂದ ಯಾತ್ರೆಯಲ್ಲಿ ಸಸ್ಯಗಳನ್ನೂ ಪ್ರಾಣಿಗಳನ್ನೂ ಪರಿಶೀಲಿಸುವಾಗ ಆಮೂಲಾಗ್ರವಾಗಿ ತಾನೇ ಪರೀಕ್ಷಿಸಿ ಅರಿತುಕೊಂಡು ವಿಷಯಗ್ರಹಣ ಮಾಡಬೇಕಾಯಿತು. ಆ ಪ್ರಾಣಿಗಳನ್ನು ಕೊಯ್ದು ಶರೀರಶಾಸ್ತ್ರವನ್ನು ಅಭ್ಯಾಸಿಸುವುದರಲ್ಲಿ ಅವನಿಗೆ ಅಷ್ಟೊಂದು ಪರಿಶ್ರಮವಿರಲಿಲ್ಲ ಅನೇಕ ಪ್ರಾಣಿಗಳನ್ನು ಯಾತ್ರೆಯಲ್ಲಿ ತಾನೇ ಪ್ರಯತ್ನಪೂರ್ವಕವಾಗಿ ಅಂಗಾಂಗಗಳನ್ನು ಪರಿಶೀಲಿಸಬೇಕಾಗಿ ಬಂದುದರಿಂದ ಆ ಮಾರ್ಗದಲ್ಲೂ ಅವನ ಜ್ಞಾನ ಅಪಾರವಾಗಿ ಬೆಳೆಯಿತು. ಭೂವಿಶಾಸ್ತ್ರದ ವಿಚಾರದಲ್ಲೂ ತನಗರಿವಾಗದುದನ್ನು ಲಯಲ್ಲರ ಗ್ರಂಥದಿಂದಲೋ ತನ್ನ ಗುರುಗಳಾದ ಹೆನ್ಸ್ಲೋರವರಿಂದಲೋ ಅರಿತುಕೊಂಡು ಪರಿಶೀಲನೆಯ ಕಾರ್ಯವನ್ನು ಮುಂದುವರಿಸುತ್ತಿದ್ದನು.

ಯಾತ್ರೆಗೆ ಹೊರಡುವಾಗ ಡಾರ್ವಿನ್ ಪಾದ್ರಿಯಾಗುವ ಆಸೆಯನ್ನು ಪೂರ್ಣವಾಗಿ ಬಿಟ್ಟಿರಲಿಲ್ಲ. ಆದುದರಿಂದ ಬೈಬಲ್ಲಿನ ಘೋಷಣೆಗಳಲ್ಲಿ ಪೂರ್ಣ ನಂಬಿಕೆಯಿಟ್ಟುಕೊಂಡಿದ್ದನು. ಯಾತ್ರೆಯಿಂದ ಹಿಂದಿರುಗುವ ವೇಳೆಗೆ ಅನೇಕ ಹೊಸ ಸಮಸ್ಯೆಗಳು ಪೊಳೆದು ಬೈಬಲ್ಲಿನ ಸೃಷ್ಟಿಯ ವಿವರಣೆಯ ವಿಚಾರವಾಗಿ ಯೋಚಿಸಲಾರಂಭಿಸಿದ್ದನು ಒಂದೊಂದು ಜೀವಜಾತಿಯೂ ತಾನು

ನಿರ್ಮಿತವಾದುದಿನಿಂದಲೂ ಅದೇ ರೀತಿಯಲ್ಲುಳಿದಿರುವುದೆಂಬ ಬೈಬಲ್ಲಿನ ಘೋಷಣೆಯಲ್ಲಿ ಆಗಲೇ ಅನುಮಾನವುಂಟಾಯಿತು.

**ಮತ್ತೊಬ್ಬ ಕೊಲಂಬಸ್**

ವಿಜ್ಞಾನ ಸಂಶೋಧನೆಗಾಗಿ ಅಂದಿನವರೆಗೆ ಯಾರೂ ಅಂಥ ದೀರ್ಘ ಯಾತ್ರೆಯನ್ನು ಕೈಕೊಂಡಿರಲಿಲ್ಲ. ಹಿಂದೆ ಕೊಲಂಬಸ್ ಅಟ್ಲಾಂಟಿಕ್ ಮಹಾಸಾಗರದಲ್ಲಿ ದೀರ್ಘಕಾಲ ಸಂಚರಿಸಿದುದರ ಫಲವಾಗಿ ಅಮೆರಿಕಾ ಖಂಡಗಳ ಅರಿವಾಗಿ, ಮಾನವನಿಗೆ ಹೊಸ ಪ್ರಪಂಚವೊಂದರ ಜ್ಞಾನ ಬಂದಿತು. ಡಾರ್ವಿನ್ನನನ್ನು ಮತ್ತೊಬ್ಬ ಕೊಲಂಬಸ್ಸನೆಂದು ಕರೆದರೂ ಕರೆಯಬಹುದು. ಅವನು, ಈ ಯಾತ್ರೆಯ ಫಲವಾಗಿ ದೊರೆತ ಅನುಭವದ ಮೇಲೆ ವಿಕಾಸತತ್ವವನ್ನು ಕಟ್ಟಿ ಮಾನವನಿಗೆ ಹೊಸದೊಂದು ಜ್ಞಾನ ಪ್ರಪಂಚವನ್ನು ತೋರಿಸಿಕೊಟ್ಟನು.

## ೪. ಪ್ರಬುದ್ಧ ವಿಜ್ಞಾನಿ

ಪ್ರವಾಸ ಕಾಲದಲ್ಲಿ ತಾನು ಸಂಗ್ರಹಿಸುತ್ತಿದ್ದ ಹೊಸ ಜಾತಿಯ ಸಸ್ಯಗಳನ್ನೂ ಪ್ರಾಣಿಗಳನ್ನೂ ಡಾರ್ವಿನ್ ತನ್ನ ಗುರುಗಳಾದ ಹೆನ್ಸ್ಲೋರವರಿಗೆ ಕಳುಹಿಸಿಕೊಡುತ್ತಿದ್ದನು. ತಾನು ನಡೆಯಿಸುತ್ತಿದ್ದ ಸಂಶೋಧನೆಗಳ ಕ್ರಮವನ್ನೂ ವಿವರಿಸಿ ಕಾಗದ ಬರೆಯುತ್ತಿದ್ದನು. ಹೆನ್ಸ್ಲೋರವರು ತಮ್ಮ ಶಿಷ್ಯನ ಪರಿಚಯವನ್ನು ಅನೇಕ ವಿಜ್ಞಾನಿಗಳಿಗೆ ಮಾಡಿಕೊಟ್ಟುದಲ್ಲದೆ, ಅವನು ಕೈಕೊಂಡಿದ್ದ ಸಾಹಸಕಾರ್ಯವನ್ನೂ ವಿವರಿಸುತ್ತಿದ್ದರು; ಆಗಾಗ ಯಾತ್ರೆಯಲ್ಲಿ ಡಾರ್ವಿನ್ ಸಂಗ್ರಹಿಸಿದ ಮತ್ತು ಸಂಶೋಧಿಸಿದ ವಿಷಯಗಳನ್ನು ಕುರಿತು ಸಾರ್ವಜನಿಕ ಪ್ರಕಟಣೆಗಳನ್ನು ಹೊರಡಿಸಿ ಅವನ ಕಾರ್ಯಚತುರತೆಯನ್ನೂ ವಿಜ್ಞಾನ ಪ್ರೇಮವನ್ನೂ ಪ್ರಶಂಸಿಸುತ್ತಿದ್ದರು. ತಾಯ್ನಾಡಿಗೆ ಹಿಂದಿರುಗುವ ಹೊತ್ತಿಗೆ ಡಾರ್ವಿನ್ನನ ಕಾರ್ಯ ಪ್ರಮುಖ ವಿಜ್ಞಾನಿಗಳಿಗೆಲ್ಲ ಗೊತ್ತಾಗಿತ್ತು.

*ಹೆನ್ಸ್ಲೋರವರ ಆಸಕ್ತಿ*

ಐದು ವರ್ಷಗಳ ತನಕ ದುಡಿದು ಸಂಗ್ರಹಿಸಿ ತಂದ ಸಸ್ಯಗಳನ್ನೂ ಪ್ರಾಣಿಗಳನ್ನೂ ಡಾರ್ವಿನ್ ಕ್ರಮವಾಗಿ ಜೋಡಿಸಿಕೊಂಡು ಲಂಡನ್ನಿನಲ್ಲೊಂದು ಪ್ರದರ್ಶನಾಲಯವನ್ನೇರ್ಪಡಿಸಿಕೊಂಡನು. ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವುಗಳ ರಚನೆ, ಗುಣ, ಸ್ವಭಾವ ಮೊದಲಾದ ಹೋಲಿಕೆಯ ಗಣನೆಯ ಮೇಲೆ ಬೇರೆಬೇರೆ ವರ್ಗಗಳಾಗಿ ವಿಂಗಡಿಸಿಕೊಂಡು ಸಂಶೋಧಿಸಲು ಮೊದಲು ಮಾಡಿದನು. ಕ್ರಮಕ್ರಮವಾಗಿ ತಾನು ಸಂಶೋಧಿಸಿದ ಸತ್ಯಾಂಶಗಳನ್ನು ಬೆಳಕಿಗೆ ತಂದು ಪ್ರಮುಖ ವಿಜ್ಞಾನಿಗಳ ಮೆಚ್ಚಿಗೆಯನ್ನು ಪಡೆದನು. ಲಂಡನ್ನಿನ ಭೂವಿಜ್ಞಾನ ಸಂಘದವರು ಅವನನ್ನು ಸದಸ್ಯನನ್ನಾಗಿ ಆರಿಸಿಕೊಂಡು ಗೌರವಿಸಿದರು. ವಿಖ್ಯಾತ ಭೂವಿಶಾಸ್ತ್ರಜ್ಞರಾದ ಲಯಲ್ಲರು ಅವನ ಸಂಶೋಧನೆಯನ್ನು ಶ್ಲಾಘಿಸಿ ಯಾವ ಉದ್ಯೋಗಕ್ಕೂ ಸೇರದೆ ಸ್ವತಂತ್ರವಾಗಿದ್ದು ಸಂಶೋಧನೆ ನಡೆಯಿಸಬೇಕೆಂದು ಸಲಹೆಯಿತ್ತರು. ಆದರೆ ಗೆಳೆಯರನೇಕರ ಕಟುಬಲುಮೆಯ ಮೇಲೆ ಡಾರ್ವಿನ್ ಭೂವಿಶಾಸ್ತ್ರ ಸಂಘದ ಕಾರ್ಯದರ್ಶಿಯಾಗಿ ಕೆಲಸ ಮಾಡಲು ಒಪ್ಪಿಕೊಳ್ಳಬೇಕಾಯಿತು.

*ಸಂಗ್ರಹಿಸಿ ತಂದ ವಸ್ತುಗಳ ಪರಿಶೀಲನೆ*

ಸಂಘದ ಕಾರ್ಯದರ್ಶಿಯಾಗಿದ್ದ ಮೂರುವರ್ಷಗಳವರೆಗೂ ಡಾರ್ವಿನ್ ಆ ಕೆಲಸಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ಯಶಸ್ವಿಯಾಗಿ ನಡೆಯಿಸಿಕೊಂಡು ಬರುತ್ತಿದ್ದನು. ತಾನು ನಡೆಯಿಸಿದ್ದ ಭೂವಿಶಾಸ್ತ್ರದ ಹಲವು ಸಂಶೋಧನೆಗಳನ್ನೂ ಆ ಸಂಘದ ಆಶ್ರಯದಲ್ಲೇ ಪ್ರಕಟಿಸಿದನು. ಅವುಗಳಲ್ಲಿ ದಕ್ಷಿಣ ಅಮೆರಿಕದ ಭೂ ಲಕ್ಷಣಗಳನ್ನು ಕುರಿತ ಸಂಶೋಧನೆಗಳೇ ಪ್ರಧಾನವಾದುವು

ಭೂವಿಶಾಸ್ತ್ರ ಸಂಘದ ಕಾರ್ಯದರ್ಶಿ

ಚಿಲಿ ತೀರಪ್ರದೇಶವೂ ಪಾಂಪಾಸ್ ಹುಲ್ಲುಗಾವಲಿನ ಪ್ರದೇಶವೂ ಸಾಗರದಿಂದ ಆಧುನಿಕ ಕಾಲದಲ್ಲಿ ಮೇಲೆದ್ದುವೆಂದೂ, ಪ್ಲೇಟವ ಸುತ್ತುಮುತ್ತಲಿನ ಭೂಗರ್ಭದಲ್ಲಿ ಪ್ರಾಚೀನ ಸಸ್ತನಿಗಳ ಪಳೆಯುಳಿಕೆಗಳು ಹೇರಳವಾಗಿರುವುವೆಂದೂ ವಿಜ್ಞಾನಕ್ಷೇತ್ರದಲ್ಲಿ ಹೊಸ ವಿಚಾರಗಳನ್ನು ಬೆಳಕಿಗೆ ತಂದನು. ದಕ್ಷಿಣ ಅಮೆರಿಕದ ಪರ್ವತಶ್ರೇಣಿಗಳು ಉದಿಸಿದ ಬಗೆಯನ್ನೂ ತಾನು ಕಣ್ಣಾರ ನೋಡಿ ಬಂದ ಅಗ್ನಿಪರ್ವತಗಳ ಸ್ವಭಾವವನ್ನೂ ಪ್ರಕಟಿಸಿದನು. ಪೆಸಿಫಿಕ್ ಮತ್ತು ಹಿಂದೂ ಮಹಾಸಾಗರಗಳಲ್ಲಿ ದಿಣ್ಣೆಗಳೂ, ಕುಳಿಗಳೂ ಉದಿಸಿದ ರೀತಿಯನ್ನು ಕುರಿತು ವಿವರಣೆಯನ್ನು ಹೊರಗೆಡಹಿದನು. ಸಂಘಕ್ಕೆ ಸಂಬಂಧಿಸಿದ ಅನೇಕ ಕಾರ್ಯಗಳನ್ನು ಮಾಡಬೇಕಾಗಿದ್ದರೂ ತಾನು ಯಾತ್ರೆಯಲ್ಲಿ ಸಂಶೋಧಿಸಿ ಸಂಗ್ರಹಿಸಿ ತಂದಿದ್ದ ವಿಷಯಗಳ ಮೇಲೆ ಪ್ರಬುದ್ಧ ಲೇಖನಗಳನ್ನು ಬರೆದು ಪ್ರಕಟಿಸಲು ಅವನು ಎಷ್ಟೊಂದು ದುಡಿಯುತ್ತಿರಬೇಕೆಂಬುದನ್ನು ಊಹಿಸಿಕೊಳ್ಳಬಹುದು. ಡಾರ್ವಿನ್ ಜೀವವಿಜ್ಞಾನದ ಬೆಳವಣಿಗೆಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿಕೊಂಡು ಅವನನ್ನು ರಾಯಲ್ ಸೊಸೈಟಿಯವರು ತಮ್ಮ ಸಂಘದ ಸಾಮಾನ್ಯ ಸದಸ್ಯನನ್ನಾಗಿ ಆರಿಸಿಕೊಂಡು ಗೌರವಿಸಿದರು.

೧೮೩೯ ರಲ್ಲಿ ಡಾರ್ವಿನ್ ತನ್ನ ಸೋದರಮಾವನ ಮಗಳಾದ ಎಮಾ ವೆಡ್ಜ್‌ವುಡ್ಡಳನ್ನು ಮದುವೆಮಾಡಿಕೊಂಡನು. ಆಕೆ ಪ್ರತಿಭಾಶಕ್ತಿಯಲ್ಲಾಗಲಿ, ವಿಜ್ಞಾನ ಪ್ರೇಮದಲ್ಲಾಗಲಿ ಅವನಿಗೆ ತಕ್ಕವಳಾಗಿರದಿದ್ದರೂ ಸಂಸಾರವನ್ನು ಸುಗಮವಾಗಿ ನೆರವೇರಿಸಿಕೊಂಡು ಹೋಗುವ ಶಕ್ತಿಯಿದ್ದುದರಿಂದ ಡಾರ್ವಿನ್ ಅವಳನ್ನು ತುಂಬ ಪ್ರೀತಿಸುತ್ತಿದ್ದನು. ಮೇಲಾಗಿ ಬಹುಕಾಲದಿಂದಲೂ ಡಾರ್ವಿನ್ನರ ಮತ್ತು ವೆಡ್ಜ್‌ವುಡ್ಡರ ಮನೆತನಗಳ ಸಂಬಂಧ ಬೆಳೆದುಬಂದಿತ್ತು. ಅಂಥ

ವಿವಾಹ

ಸುಪರಿಚಿತಳೂ, ಗೃಹಕಾರ್ಯನಿಪುಣೆಯೂ ಆದ ಎಮಾ ವೆಡ್ಜ್‌ವುಡ್ಡಳು ಡಾರ್ವಿನ್ನನಂಥ ಸೌಮ್ಯಮೂರ್ತಿಗೆ ಯೋಗ್ಯಕನ್ಯೆ. ಕಾಲ ಕಳೆದಂತೆ ಅವರ ದಾಂಪತ್ಯ ಜೀವನದಲ್ಲಿ ಸುಖಸಂತೋಷಗಳು ತುಂಬಿ ತುಳುಕುತ್ತಿದ್ದುದನ್ನು ಕಂಡು ಡಾರ್ವಿನ್ 'ಇವು ನನ್ನ ಭಾಗ್ಯ' ಎಂದುಕೊಂಡಿದ್ದರೆ ಆಶ್ಚರ್ಯವಿಲ್ಲ.

ಬೀಗಲ್ ಯಾತ್ರೆಯ ವರದಿ

ಅಷ್ಟುಹೊತ್ತಿಗೆ ಬೀಗಲ್ ವಿಜ್ಞಾನಯಾತ್ರೆಯ ವರದಿಯೂ ಸಿದ್ಧವಾಯಿತು. ಅದರಲ್ಲಿ ಡಾರ್ವಿನ್ ತಾನು ನಡೆಸಿದ್ದ ಸಂಶೋಧನೆಗಳನ್ನೂ ಸಂಗ್ರಹವನ್ನೂ ವಿವರಿಸಿ ಹಲವು ವಿಜ್ಞಾನ ಸಮಸ್ಯೆಗಳಿಗೆ ಪ್ರೌಢ ಟಿಪ್ಪಣಿಗಳನ್ನೂ ವಿವರಣೆಗಳನ್ನೂ ಬರೆದಿದ್ದನು. ಅನೇಕ ಸಸ್ಯಗಳ ಮತ್ತು ಪ್ರಾಣಿಗಳ ರಚನಾದಿ ವರ್ಣನೆಗಳನ್ನು ಚಾಚೂ ತಪ್ಪದೆ ಕೊಟ್ಟಿದ್ದನು. ವರದಿ ಹೊರಬಿದ್ದೊಡನೆ ಅನೇಕರು ಅವನ ಸಾಹಸವನ್ನು ಕೊಂಡಾಡಿದರು. ೧೮೪೫ ರಲ್ಲಿ ತನ್ನ ಸಂಗ್ರಹ ಮತ್ತು ಸಂಶೋಧನೆಗಳನ್ನು ಸೇರಿಸಿದ 'ನಿಸರ್ಗ ವಿಜ್ಞಾನಿಯ ಪ್ರಪಂಚಯಾತ್ರೆ' ಎಂಬ ಪ್ರತ್ಯೇಕ ಮುದ್ರಣವೂ ಹೊರಬಿದ್ದಿತು. ಇದರಿಂದ ಜನಸಾಮಾನ್ಯಕ್ಕೂ ಅವನ ಕಾರ್ಯಮಹೋನ್ನತಿಯು ಅರಿವಾಗುವಂತಾಯಿತು. ದೇಶಕ್ಕೆ ದೇಶವೇ ಅವನನ್ನು ಶ್ಲಾಘಿಸಲಾರಂಭಿಸಿತು. ೧೮೪೩ರಲ್ಲಿ 'ಬೀಗಲ್ ಯಾತ್ರೆಯ ಪ್ರಾಣಿಶಾಸ್ತ್ರ' ಎಂಬ ಮತ್ತೊಂದು ಗ್ರಂಥವೂ ಡಾರ್ವಿನ್ನನ ಸಂಪಾದಕತ್ವದಲ್ಲೇ ಹೊರಟಿತು. ತಾನು ಸಂಗ್ರಹಿಸಿ ತಂದಿದ್ದ ಅಮೆರಿಕದ ಪ್ರಾಚೀನ ಸಸ್ತನಿಗಳ ಪಳೆಯುಳಿಕೆಗಳ ಮೇಲೂ, ಪ್ರಪಂಚದ ಈ ದಿನದ ಸಸ್ತನಿಗಳ ಮೇಲೂ, ಉರಗಗಳ ಮೇಲೂ ಬೇರೆಬೇರೆ ವಿಜ್ಞಾನಿಗಳು ಸಂಶೋಧನೆ ನಡೆಸಿ ವಿವರವಾಗಿ ವರ್ಣಿಸಿದ್ದರು. ಎಲ್ಲ ಲೇಖನಗಳಿಗೂ ಅವನು ಮುನ್ನುಡಿಯನ್ನು ಬರೆದು ಗ್ರಂಥವನ್ನು ಪೂರ್ತಿಗೊಳಿಸಿ ಪ್ರಕಟಿಸಿದನು. ಅಂದಿನವರೆಗೂ ಅಮೆರಿಕದ ಪ್ರಾಚೀನ ಸಸ್ತನಿಗಳ ಅರಿವು ವಿಜ್ಞಾನ ಪ್ರಪಂಚಕ್ಕೆ ಹೆಚ್ಚಾಗಿ ಇರಲಿಲ್ಲ. ಡಾರ್ವಿನ್ನನ ಸೇವೆಯಿಂದ ಹಿಂದೆ ಅಲ್ಲಿ ಬದುಕಿ, ಅಳಿದುಹೋಗಿ ಇಂದು ಪಳೆಯುಳಿಕೆಗಳನ್ನು ಮಾತ್ರ ಬಿಟ್ಟಿರುವ ಅನೇಕ ಜಾತಿ ಸಸ್ತನಿಗಳ ಪರಿಚಯ ಬೆಳಕಿಗೆ ಬಂದಿತು.

ತಾನು ಸಂಗ್ರಹಿಸಿ ತಂದಿದ್ದ ವಿವಿಧ ಸಸ್ತನಿಗಳನ್ನೂ, ಇತರ ಪ್ರಾಣಿಗಳನ್ನೂ ಡಾರ್ವಿನ್ ಪರಿಶೀಲಿಸಿದನಂತರ ಸಾರ್ವಜನಿಕ ವಿದ್ಯಾ ಸಂಸ್ಥೆಗಳಿಗೆ ದಾನಮಾಡಿದನು. ಪ್ರಾಚೀನ ಸಸ್ತನಿಗಳ ಪಳೆಯುಳಿಕೆಗಳನ್ನು ಲಂಡನ್ನಿನ ಶಸ್ತ್ರ ವೈದ್ಯವಿದ್ಯಾಲಯಕ್ಕೂ, ಮೀನುಗಳನ್ನು ಕೇಂಬ್ರಿಡ್ಜಿನ ದಾರ್ಶನಿಕ ಸಂಘಕ್ಕೂ, ಪಕ್ಷಿಗಳನ್ನೂ ಇಂದಿನ ಸಸ್ತನಿಗಳನ್ನೂ ಲಂಡನ್ನಿನ ಪ್ರಾಣಿಶಾಸ್ತ್ರ ಸಂಘಕ್ಕೂ ಕೊಟ್ಟುಬಿಟ್ಟನು. ಅವನು ಬಾಲ್ಯದಿಂದಲೂ ಸಂಗ್ರಹಿಸಿಟ್ಟಿದ್ದ ವಿವಿಧ ಕೀಟಕಗಳನ್ನೂ, ಕಠಿಣ ಚರ್ಮಿಗಳನ್ನೂ ಮೃದ್ವಂಗಿಗಳನ್ನೂ ಅನೇಕ ವಿಜ್ಞಾನಿಗಳು ಪರಿಶೀಲಿಸಿ ಪ್ರಕಟಿಸಿದರು. ಪ್ರವಾಸಕಾಲದಲ್ಲಿ ಸಂಗ್ರಹಿಸಿ ತಂದಿದ್ದ ಸಸ್ಯಗಳನ್ನು ವಿಖ್ಯಾತ ಸಸ್ಯಶಾಸ್ತ್ರಜ್ಞರನೇಕರು ಸಂಶೋಧಿಸಿ ಹೊಸ ಜ್ಞಾನವನ್ನು ಬೆಳಕಿಗೆ ತಂದರು. ಹೀಗೆ ಡಾರ್ವಿನ್ನನ ಐದು ವರ್ಷಗಳ ದುಡಿಮೆಯ ಫಲವಾಗಿ ಅಂದಿಗಾಗಲೇ ಅನೇಕ ಗ್ರಂಥಗಳು ಹೊರಬಿದ್ದು ಒಂದು ಸಾಹಿತ್ಯ ರಾಶಿಯೇ ನಿರ್ಮಾಣವಾಯಿತು. ಮೇಲಾಗಿ ಪ್ರಕೃತಿಶಾಸ್ತ್ರದ ವಿವಿಧ ಶಾಖೆಗಳು ವಿವಿಧ ಮಾರ್ಗಗಳಲ್ಲಿ ಹೆಜ್ಜೆಯಿಟ್ಟು ಹೊಸಹೊಸ ಶೋಧನೆಗಳನ್ನು ನಡೆಯಿಸಲು ಉತ್ತೇಜನ ದೊರೆಯಿತು.

**ಜೀವಶಾಸ್ತ್ರದ ಬೆಳವಣಿಗೆಗೆ ಪ್ರಚೋದನೆ**

ಡಾರ್ವಿನ್ ಪ್ರಕಟಿಸಿದ್ದ ಅನೇಕ ಭೂಲಕ್ಷಣದ ಸೂಕ್ಷ್ಮ ಪರಿಶೀಲನೆಯನ್ನು ಕಂಡು ಭೂವಿಶಾಸ್ತ್ರ ವಿಶಾರದರನೇಕರು ಆಶ್ಚರ್ಯಪಟ್ಟು ಅವನ ಅನುಪಮ ಜ್ಞಾಪಕ ಶಕ್ತಿಯನ್ನೂ, ಸೂಕ್ಷ್ಮ ಪರಿಶೀಲನ ಶಕ್ತಿಯನ್ನೂ ಕೊಂಡಾಡಿದರು. ಅಂದಿಗಾಗಲೇ ಅವನು ಹಿಂದೂ ಮಹಾಸಾಗರದಲ್ಲಿ ತಾನು ಪರಿಶೀಲಿಸಿದ್ದ ಹವಳದ ದಿಣ್ಣೆಗಳ ಮೇಲೆ ಗ್ರಂಥವೊಂದನ್ನು ಬರೆಯಲು ಮೊದಲು ಮಾಡಿದ್ದನು. ಆಗಾಗ ಆರೋಗ್ಯ ಕೆಡುತ್ತಿದ್ದುದರಿಂದ ಮುದ್ರಣ ನಿಧಾನವಾಯಿತು. ೧೮೪೨ ರಲ್ಲಿ 'ಹವಳದ ದಿಣ್ಣೆಗಳ ರಚನೆ ಮತ್ತು ಪ್ರಸರಣ' ಎಂಬ ಹೆಸರಿನಿಂದ ಗ್ರಂಥ ಎರಡು ಸಂಪುಟಗಳಾಗಿ ಪ್ರಕಟವಾಯಿತು. ಹಿಂದೂ ಮಹಾಸಾಗರದ ಹಲವು ದ್ವೀಪಗಳು ಹವಳದ ದಿಣ್ಣೆಗಳಿಂದ ನಿರ್ಮಿತವಾದುವೆಂದೂ, ಆ ದಿಣ್ಣೆಗಳನ್ನು ಒಂದು ಜಾತಿ ಹವಳದ ಹುಳುಗಳು ಕಟ್ಟುವುವೆಂದೂ ವಿವರಿಸಿ ಭೂವಿಶಾಸ್ತ್ರದಲ್ಲಿ ಹೊಸ ಬೆಳಕನ್ನು ಹರಡಿದನು. ಅಂದಿನ

**ಹವಳದ ದಿಣ್ಣೆಗಳು**

ವರೆಗೂ ಪ್ರಕಟವಾಗಿದ್ದ ಲಯಲ್ ಮೊದಲಾದವರ ಸಂಬಂಧಿಸಿದ ಸಂಶೋಧನೆಗಳೆಲ್ಲ ಡಾರ್ವಿನ್ನನ ಈ ಗ್ರಂಥಪ್ರಕಟನೆಯಿಂದ ತಲೆಕೆಳಕಾದುವು. ಅಂಥ ದ್ವೀಪಗಳೆಲ್ಲ ಸಾಮಾನ್ಯವಾಗಿ ಭೂಮಧ್ಯರೇಖೆಗೆ ೩೦° ಅಕ್ಷಾಂಶದೊಳಗೇ ಇರುವುವೆಂದೂ ವಿವರಿಸಿ, ಉಷ್ಣವಲಯದ ಮಹಾಸಾಗರದಲ್ಲಿ ಹಲವುಕಡೆ ಆ ದಿಣ್ಣೆಗಳು ಇಲ್ಲದಿರುವುದಕ್ಕೆ ಕಾರಣಗಳನ್ನು ಹೇಳುತ್ತಾ 'ಹವಳದ ದಿಣ್ಣೆಗಳೆಲ್ಲಿ ನಿರ್ಮಾಣವಾಗಿಲ್ಲವೋ ಅಲ್ಲೆಲ್ಲ ಮೀನುಗಳೂ ಹವಳದ ಹಾವುಗಳೂ ಸಮುದ್ರದ ಸೌತೇ ಹುಳುಗಳೂ ಹೆಚ್ಚು. ಅವುಗಳು ಹವಳದ ಹುಳುಗಳನ್ನೆಲ್ಲ ತಿಂದುಬಿಡುತ್ತವೆ. ಆದುದರಿಂದಲೇ ಹವಳದ ದಿಣ್ಣೆಗಳು ನಿರ್ಮಾಣವಾಗಿಲ್ಲ.' ಎಂದು ವಿವರಣೆಯನ್ನು ಕೊಟ್ಟಿರುವನು. ಹವಳದ ಹುಳುಗಳು ಕೆಳವರ್ಗದ ಸಾಮಾಜಿಕ ಜೀವಿ ಅವು ಸುಣ್ಣಕಲ್ಲಿನಂಥ ಪದಾರ್ಥದಿಂದ ಗೂಡುಕಟ್ಟಿಕೊಂಡು ಅದರೊಳಗೆ ಸಾಮಾಜಿಕ ಜೀವನವನ್ನು ನಡೆಸುತ್ತಿರುತ್ತವೆ. ಸಹಸ್ರಾರು ವರ್ಷಗಳಿಂದಲೂ ಹುಳುಗಳು ಕಟ್ಟುತ್ತಾ ಬಂದಿರುವ ಗೂಡುಗಳು ಗುಂಪಾಗಿ ಬೆಳೆದು ದಿಣ್ಣೆಗಳಾಗಿ ಪರಿಣಮಿಸುವುವು. ಅನೇಕ ದಿಣ್ಣೆಗಳು ಒಟ್ಟುಗೂಡಿ ಸಾಗರದ ನಡುವೆ ದ್ವೀಪ ನಿರ್ಮಾಣವಾಗುವುದು. ಶತ್ರುಪ್ರಾಣಿಗಳು ಹೆಚ್ಚಿದ ಕಡೆ ಹವಳದ ಹುಳುಗಳು ನಾಶವಾಗಿ, ದಿಣ್ಣೆಗಳೇರ್ಪಡುವಂತಿಲ್ಲ. ಜೀವರಂಗದಲ್ಲಿ ನಡೆಯುತ್ತಲಿರುವ ಆಹಾರಾದಿ ಆವಶ್ಯಕತೆಗಳ ಹೋರಾಟದಲ್ಲಿ ಹೇಗೆ ಅನೇಕ ಜೀವಿಗಳು ಪರಾಜಿತವಾಗುವುವೆಂಬ ಜ್ಞಾನ ಡಾರ್ವಿನ್ನನ ಮನಸ್ಸಿನಲ್ಲಿ ಅಂದಿಗಾಗಲೇ ಮೂಡಿ ಮೊಳೆಯುತ್ತಿದ್ದಂತೆ ತೋರುತ್ತದೆ. ೧೮೪೬ ರಲ್ಲಿ 'ಬೀಗಲ್ ಯಾತ್ರೆಯ ಭೂಮಿಶಾಸ್ತ್ರ' ವೆಂಬ ಮತ್ತೊಂದು ಗ್ರಂಥವೂ ಹೊರಬಿದ್ದಿತು. ಅಂದಿನವರೆಗೂ ಅವನು ಪ್ರಕಟಿಸಿದ ಗ್ರಂಥರಾಶಿಯಲ್ಲಿ ಹಲವು ಆಗಲೇ ಮರಳಿ ಮುದ್ರಣಕ್ಕೆ ಸಿದ್ಧವಾಗುತ್ತಿದ್ದುವು. ವಿಜ್ಞಾನ ಕೇವಲ ಶೈಶವಾವಸ್ಥೆಯಲ್ಲಿದ್ದ ಕಾಲದಲ್ಲಿ ಬರೆದ ಸಂಶೋಧನೆಯ ಗ್ರಂಥಗಳು ಅನೇಕ ಮುದ್ರಣಗಳನ್ನು ಕಂಡುದನ್ನು ನೋಡಿದರೆ ಆಶ್ಚರ್ಯವಾಗುವುದಲ್ಲದೆ ಡಾರ್ವಿನ್ನನ ಮಹೋನ್ನತ ಸ್ಥಾನವೂ ಸ್ಪಷ್ಟವಾಗುತ್ತದೆ.

ವಿವಾಹವಾದ ಮೇಲೆ ಡಾರ್ವಿನ್ ೧೮೪೨ ರವರೆಗೂ ಲಂಡನ್ನಿನಲ್ಲೇ ವಾಸವಾಗಿದ್ದನು. ಆಗ ಬಿಡುವಿಲ್ಲದೆ ದುಡಿದು ವಿವಿಧ ಗ್ರಂಥಗಳನ್ನು ಪ್ರಕಟ

ಸಿದನು. ಭೂಮಿಶಾಸ್ತ್ರ ಸಂಘದ ಎಲ್ಲ ಕಾರ್ಯಗಳನ್ನೂ ಅವನೇ ನಡೆಯಿಸಿಕೊಂಡು ಬರಬೇಕಾಗಿತ್ತು. ಜೊತೆಗೆ ವಿಧವಿಧವಾದ

**ಡಾನಿಗೆ ತೆರಳುವನು**

ವಿಜ್ಞಾನ ಸಮಸ್ಯೆಗಳ ಮೇಲೆ ಮನಸ್ಸಿನಲ್ಲಿ ಅಹೋರಾತ್ರಿಯೂ ಯೋಚಿಸುತ್ತಲೇ ಇದ್ದನು. ಇವೆಲ್ಲದರ ಪರಿಣಾಮವಾಗಿ ಡಾರ್ವಿನ್ನನ ಆರೋಗ್ಯ ಕೆಡುತ್ತಲೇ ಇತ್ತು. ಪ್ರವಾಸದಿಂದ ಹಿಂದಿರುಗಿದನಂತರ ಸುಮಾರು ಆರು ವರ್ಷಗಳ ತನಕ ಲಂಡನ್ನಿನಲ್ಲೇ ಉಳಿದುದರಿಂದ ಅವನ ಮನಸ್ಸಿನಲ್ಲಿ ನಗರ ಜಂಜಡ ಬೇಸರ ಹುಟ್ಟಿಸಿತು. ಆಗ ಶಾಂತ ವಾತಾವರಣದ ಕಡೆಗೆ ತೆರಳಬೇಕೆಂದು ನಿರ್ಧರಿಸಿ, ಕೆಂಟ್‌ಪ್ರದೇಶದಲ್ಲಿದ್ದ ಡಾನ್ ಎಂಬ ಹಳ್ಳಿಗೆ ಹೋಗಿ ನೆಲಸಿದನು. ಅಲ್ಲಿನ ಪ್ರಶಾಂತ ವಾತಾವರಣವನ್ನು ಅವನು ಬಹುವಾಗಿ ಕೊಂಡಾಡಿದನು. ಆವಶ್ಯಕವಾಗಿದ್ದ ಶಾಂತಿ ಇಲ್ಲಿ ದೊರೆತರೂ ಆರೋಗ್ಯಭಾಗ್ಯ ಮಾತ್ರ ಅವನಿಗೆ ಲಭಿಸಲಿಲ್ಲ. ದೇಶಾಟನೆಯನ್ನು ಮರಳಿ ಕೈಕೊಳ್ಳಬೇಕೆಂಬ ಹೆಬ್ಬಯಕೆಯಿದ್ದರೂ, ದೇಹಾಲಸ್ಯದಿಂದ ಅದನ್ನು ಮರೆತುಬಿಡಬೇಕಾಯಿತು. ಲಂಡನ್ನನ್ನು ತ್ಯಜಿಸಿದಾಗಲೇ ಮೂರು ವರ್ಷಕಾಲ ದಕ್ಷತೆಯಿಂದ ನಿರ್ವಹಿಸಿದ್ದ ಭೂಮಿಶಾಸ್ತ್ರ ಸಂಘದ ಕಾರ್ಯದರ್ಶಿಯ ಕೆಲಸವನ್ನೂ ವಿಸರ್ಜಿಸಿದ್ದನು. ಅಂದಿನಿಂದ ಸುಮಾರು ನಲವತ್ತು ವರ್ಷಗಳವರೆಗೂ ಡಾನಿನಲ್ಲುಳಿದು ರೋಗದಿಂದ ನರಳುತ್ತಿದ್ದರೂ ತನ್ನ ಸಂಶೋಧನಾಲಯದಲ್ಲಿ ಬಿಡುವಿಲ್ಲದೆ ದುಡಿಯುತ್ತಿದ್ದನು.

ಡಾನ್ ಗ್ರಾಮ ಸಮುದ್ರ ಮಟ್ಟಕ್ಕೆ ನಾನೂರಡಿ ಎತ್ತರದಲ್ಲಿತ್ತು. ಸುತ್ತಲೂ ಮರಗಿಡಗಳು ಎತ್ತರವಾಗಿ ಬೆಳೆದು ಕೋಟೆಯಂತೆ ನಿಂತಿದ್ದುವು. ಮೂರು-ನಾಲ್ಕು ಮೈಲಿಗಳ ದೂರದಲ್ಲೇ ಒಂದು ರೈಲು ನಿಲ್ದಾಣವಿತ್ತು.

**ಡಾನಿನಲ್ಲಿ ಡಾರ್ವಿನ್ನನ ನಿಲಯ**

ಹಳ್ಳಿಯ ನಡುವೆಯಿದ್ದ ಡಾರ್ವಿನ್ನನ ಮನೆ ಚಚ್ಚೌಕವಾಗಿ ಹತ್ತೊಂಬತ್ತನೆಯ ಶತಮಾನದ ರೀತಿಯದಾಗಿತ್ತು. ಮನೆಯ ಸುತ್ತಲೂ ಪ್ರಾಕಾರದ ಗೋಡೆಯಿದ್ದು ಮುಂಭಾಗದಲ್ಲಿ ಎರಡು ಕಡೆಯೂ ಚಾವಣಿಗಳಿದ್ದುವು. ಮನೆಯ ಹೊರವಳಯದಲ್ಲಿ ಅನೇಕ ಮರಗಿಡಗಳು ಬೆಳೆದಿದ್ದುದರಿಂದ ಹೆದ್ದಾರಿಗೆ ಮನೆ ಚೆನ್ನಾಗಿ ಕಾಣುತ್ತಿರಲಿಲ್ಲ. ಮನೆಯ ದಕ್ಷಿಣದ ಕಡೆ ಒಂದು ತೋಟವಿತ್ತು.

ಅಲ್ಲಿ ನಿಂತಾಗ ಬಹುದೂರದವರೆಗೂ ಮನೋಹರವಾದ ನಿಸರ್ಗದೃಶ್ಯಗಳು ಕಾಣಬರುತ್ತಿದ್ದುವು

ಕಿರಿಯ ವಿಜ್ಞಾನ ಪ್ರವಾಸಕರಿಗೆ ಸಲಹೆ

ವಿಜ್ಞಾನ ಪ್ರವಾಸಕರ ಉಪಯೋಗಾರ್ಥವಾಗಿ ೧೮೪೯ ರಲ್ಲಿ ಕೈಪಿಡಿಯೊಂದು ಪ್ರಕಟವಾಯಿತು. ಆ ಗ್ರಂಥಕ್ಕೆ ಭೂಮಿಶಾಸ್ತ್ರದ ಭಾಗವನ್ನು ಡಾರ್ವಿನ್ ಬರೆದುಕೊಟ್ಟಿದ್ದನು. ತನಗಿದ್ದ ಅಪಾರ ಅನುಭವದಿಂದ ಕಿರಿಯ ವಿಜ್ಞಾನಿಗಳಿಗೆ ಉಪಯೋಗವಾಗುವಂಥ ಅನೇಕ ಸಲಹೆಗಳನ್ನು ನೀಡಿದ್ದನು. ಮೊದಲು ದೊರೆತ ಪದಾರ್ಥಗಳನ್ನು ಎಚ್ಚರಿಕೆಯಿಂದ ಸಂಗ್ರಹಿಸಿ, ಹೆಸರು ವಿಳಾಸಗಳೊಡನೆ ಒಪ್ಪವಾಗಿಡುವ ರೀತಿಯನ್ನು ವಿವರಿಸಿ, ವಿರಾಮವಾದಾಗ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಅನಂತವಾಗಿ ಯೋಚಿಸಬೇಕೆಂದು ಸಲಹೆ ಕೊಟ್ಟಿದ್ದನು. 'ಯಾವ ಭೂಮಿಶಾಸ್ತ್ರಸಂಶೋಧಕನಾಗಲಿ, ಎಲ್ಲ ಸಮಸ್ಯೆಗಳನ್ನೂ ಬಿಡಿಸಲೇಬೇಕೆಂಬ ಆವಶ್ಯಕವಿಲ್ಲ; ಸತ್ಯದ ಕಣವೊಂದನ್ನು ಕಂಡರೂ ಸಾಕು; ಆ ಮೂಲಕ ನಾವು ಬಾಳುತ್ತಿರುವ ಈ ಸುಂದರ ವಿಶ್ವದ ಇತಿಹಾಸವನ್ನು ಸ್ವಲ್ಪವಾದರೂ ಬೆಳೆಸುವೆವಲ್ಲಾ ಎಂಬ ಹೆಮ್ಮೆಯಿಂದ ದುಡಿಯಬೇಕು' ಎಂದು ಉತ್ತೇಜನ ಕೊಟ್ಟು ವಿಜ್ಞಾನಿಗೆ ಸಹಜವಾದ ವಾಣಿಯನ್ನು ನುಡಿದಿರುವನು.

ಬಾರ್ನಕಲ್ ಪ್ರಾಣಿಯ ಜೀವನ ಚರಿತ್ರೆ

'ಸಿರಿಪೀಡಿಯ' ಪಂಗಡಕ್ಕೆ ಸೇರಿದ ಬಾರ್ನಕಲ್ ಎಂಬ ಸಮುದ್ರದ ನಳ್ಳಿಯೊಂದನ್ನು ಡಾರ್ವಿನ್ ತನ್ನ ಪ್ರವಾಸಕಾಲದಿಂದಲೂ ಆಸಕ್ತಿಯಿಂದ ಪರಿಶೀಲಿಸುತ್ತಿದ್ದನು. ಯಾತ್ರೆಯಿಂದ ತಾಯ್ನಾಡಿಗೆ ಹಿಂದಿರುಗಿದ ಮೇಲೆ ಸುಮಾರು ಎಂಟು ವರ್ಷಗಳ ತನಕ ಆ ಪ್ರಾಣಿಗಳ ಮೇಲೆ ಒಂದೇ ಸಮನೆ ಸಂಶೋಧನೆ ನಡೆಸುತ್ತಿದ್ದನು. ಬ್ರಿಟಿಷ್ ಮ್ಯೂಸಿಯಮ್ಮಿನವರು ತಾವು ಸಂಗ್ರಹಿಸಿಟ್ಟಿದ್ದ ಬಾರ್ನಕಲ್ ಪ್ರಾಣಿಗಳನ್ನು ಅವನ ಶೋಧನೆಗಾಗಿ ಒದಗಿಸಿಕೊಟ್ಟರು. ಆ ಸಂಶೋಧನೆಯ ಕಾರ್ಯದಲ್ಲಿ ನಾಡಿನ ವಿಖ್ಯಾತ ಪ್ರಾಣಿಶಾಸ್ತ್ರಜ್ಞರನೇಕರು ಸ್ವಪ್ರೇರಣೆಯಿಂದ ನೆರವಾಗುತ್ತಿದ್ದರು. ೧೮೫೧ ರಲ್ಲಿ ಡಾರ್ವಿನ್ 'ಬದುಕಿರುವ ಸಿರಿಪೀಡಿಯ' ಎಂಬ ಗ್ರಂಥವನ್ನೂ ೧೮೫೪ ರಲ್ಲಿ 'ಬ್ರಿಟನ್ನಿನ ಪ್ರಾಚೀನ ಸಿರಿಪೀಡಿಯ' ಎಂಬ ಇನ್ನೊಂದು ಗ್ರಂಥವನ್ನೂ ಪ್ರಕಟಿಸಿದನು.

ಬಾರ್ನ್ಕಲ್ ಪ್ರಾಣಿಯ ಜೀವನ ಚರಿತ್ರೆಯನ್ನು ಅಭ್ಯಾಸಿಸಿ 'ಅದರ ಬೆಳವಣಿಗೆಯಲ್ಲಿ ಅನಾವಶ್ಯಕವಾದ ಹಲವು ರೂಪಪರಿವರ್ತನೆಗಳಾಗುತ್ತವೆ. ಆ ಮಜಲುಗಳನ್ನೆಲ್ಲ ದಾಟಿ ಕೊನೆಗೆ ಪ್ರಾಣಿ ಪ್ರೌಢಾವಸ್ಥೆಯನ್ನು ಸೇರುತ್ತದೆ.' ಎಂಬ ಸತ್ಯಾಂಶವನ್ನು ಕಂಡುಹಿಡಿದು ಪ್ರಕಟಿಸಿ ಭ್ರೂಣ (ಬೆಳವಣಿಗೆಯ) ಶಾಸ್ತ್ರದಲ್ಲಿ ಹೊಸಬೆಳಕನ್ನು ಬೀರಿದನು. ಅವನಂಥ ಉದ್ದಾಮತತ್ವಚಿಂತಕರು ಸಮುದ್ರದ ನಳ್ಳಿಯ ಜೀವನ ಚರಿತ್ರೆಯ ಸಂಶೋಧನೆಯಲ್ಲಿ ಎಂಟು ವರ್ಷಗಳನ್ನು ಕಳೆದುದು ಸರಿಯೇ ಎಂದು ಅನುಮಾನ ಹುಟ್ಟುವುದು. ಕೆಲವು ವೇಳೆ ಡಾರ್ವಿನ್ನನೇ ತನ್ನ ಆ ಕಾಲ ವ್ಯರ್ಥವಾಗಲಿಲ್ಲವೇ ಎಂದುಕೊಳ್ಳುತ್ತಿದ್ದನಂತೆ. ಆದರೆ ಆ ಸಂಶೋಧನೆಯಿಂದ ಅವನ ನೈತಿಕ ಮತ್ತು ಮಾನಸಿಕ ಬೆಳವಣಿಗೆಗೆ ಎಷ್ಟೊಂದು ಸಹಾಯವಾಯಿತೆಂಬುದನ್ನು ಮರೆಯಬಾರದು. ವಿದ್ಯಾರ್ಥಿ ದೆಸೆಯಲ್ಲಿ ಅವನಿಗೆ ಕ್ರಮವಾದ ಶಿಕ್ಷಣವಿರಲಿಲ್ಲವಾದ್ದರಿಂದ ಎಂಟು ವರ್ಷಗಳ ತನಕ ಆ ಪ್ರಾಣಿಗಳ ಅಂಗಾಂಗಳನ್ನೂ ಪರಿಶೀಲಿಸಿ ಆ ಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ಜ್ಞಾನವನ್ನೂ ಪಡೆಯಲು ಅವಕಾಶವಾಯಿತು. ಮೇಲಾಗಿ ದೀರ್ಘ ಕಾಲದವರೆಗೂ ದುಡಿದುದರಿಂದ ಹಿಡಿದ ಕೆಲಸವನ್ನು ಶಿಸ್ತಿನಿಂದ ಮಾಡಿ ಪೂರೈಸುವ ಸಾಹಸಸಹನೆಗಳೂ ಅವನಲ್ಲಿ ನೆಲಸುವಂತಾಯಿತು. ಆ ಕಾಲದಲ್ಲಿ ಅನುಭವಿಸಬೇಕಾದ ಶ್ರಮ ಅವನಿಗೆ ಗೊತ್ತಾಗಿ ಇತರ ಸಂಶೋಧಕರ ವಿಚಾರದಲ್ಲಿ ಭಕ್ತಿಗೌರವಗಳು ಉದಿಸಿದುದಲ್ಲದೆ ಎಂಥ ಕೆಳದರ್ಜೆಯ ಸತ್ಯಶೋಧಕರನ್ನಾದರೂ ಗೌರವಿಸುವ ಹಿರಿಯಗುಣವೂ ಅವನಲ್ಲಿ ಬೆಳೆಯಲಾರಂಭಿಸಿತು. ಸಮುದ್ರದ ನಳ್ಳಿಯ ಮೇಲಣ ಸಂಶೋಧನೆ ಡಾರ್ವಿನ್ನನ ವಿಕಾಸವಾದದ ಸಮರ್ಥನೆಗೆ ಹೇಗೆ ನೆರವಾಯಿತೆಂಬುದನ್ನು ಮುಂದೆ ವಿವರಿಸುತ್ತೇವೆ.

ಹವಳದ ದಿಣ್ಣೆಗಳು ಮತ್ತು ಬಾರ್ನ್ಕಲ್ ಪ್ರಾಣಿಯ ವಿಷಯವಾಗಿ ಪ್ರಕಟವಾದ ಅವನ ಸಂಶೋಧನಾತ್ಮಕ ಗ್ರಂಥಗಳು ನಿಸರ್ಗಶಾಸ್ತ್ರದ ಬೆಳವಣಿಗೆಗೆ ಬಹುವಾಗಿ ನೆರವಾದುವು. ರಾಯಲ್ ಸೊಸೈಟಿಯವರು ಈ ಸೇವೆಗಾಗಿ

ಗೌರವ ಪ್ರಶಸ್ತಿಗಳು

ಅವನಿಗೆ ಸ್ವರ್ಣಪದಕವನ್ನಿತ್ತು ಗೌರವಿಸಿದರು. 'ಬ್ರಿಟನ್ನಿನ ಪ್ರಾಚೀನ ಸಿರಿಪೀಡಿಯಾ' ಎಂಬ ಗ್ರಂಥಕ್ಕೆ ವೊಲಾಸ್ಟನ್ ಸ್ವರ್ಣಪದಕವೂ ದೊರೆತು ಡಾರ್ವಿನ್ನನ

ಕೀರ್ತಿ ಸರ್ವತೋಮುಖವಾಗಿ ಬೆಳಗಲಾರಂಭಿಸಿತು. ನಾಡಿನ ವಿಜ್ಞಾನ ಪಂಡಿತರೂ, ಪ್ರಮುಖ ವಿಜ್ಞಾನ ಸಂಸ್ಥೆಗಳೂ ಅವನನ್ನು ಸತ್ಕರಿಸಿ ಗೌರವ ಪ್ರಶಸ್ತಿಗಳನ್ನು ನೀಡಿದರು. ಹೀಗೆ ತನ್ನ ಕೀರ್ತಿ ವಿದ್ಯುದ್ವೇಗದಿಂದ ಬೆಳೆದು ಗೌರವ ಪ್ರಶಸ್ತಿಗಳು ಬಿಡುವಿಲ್ಲದೆ ದೊರಕುತ್ತಿದ್ದರೂ ಪ್ರಬುದ್ಧ ವಿಜ್ಞಾನಿ ಎಂದಿನಂತೆ ಡಾನಿನ ನೀರವ ನಿಲಯದಲ್ಲಿ ಸಂಶೋಧನಕಾರ್ಯವನ್ನು ಮುಂದು ವರಿಸುತ್ತಲೇ ಇದ್ದನು.

## ೫. ಜೀವಜಾತಿಗಳ ಹುಟ್ಟು

ಪ್ರವಾಸದಿಂದ ಹಿಂದಿರುಗಿದ ಮೇಲೆ ಸುಮಾರು ೨೦ವರ್ಷಗಳ ತನಕ ಡಾರ್ವಿನ್ ಹಲವು ಗ್ರಂಥಗಳನ್ನು ಮಾತ್ರ ಪ್ರಕಟಿಸಿದ್ದನಷ್ಟೆ. ಆದರೆ ತನ್ನ ಜೀವನದ ಹೆಗ್ಗುರಿಯಂತಿದ್ದ ವಿಕಾಸ ತತ್ವವನ್ನು ಇನ್ನೂ ಜನ ಜೀವನದ ಮುಂದಿಟ್ಟಿರಲಿಲ್ಲ. ಆದರೂ ಅವನು ಅಂದಿಗೆ ಸಲ್ಲಿಸಿದ್ದ ಸೇವೆಯೇ ಆ ದಿನದ ವಿಜ್ಞಾನಿಗಳಲ್ಲಿ ಅವನಿಗೆ ಪ್ರಥಮ ಸ್ಥಾನವನ್ನು ಗಳಿಸಿಕೊಟ್ಟಿತ್ತು. ಡಾರ್ವಿನ್ ೧೮೫೮ರ ವರೆಗೂ ವಿಕಾಸ ತತ್ವವನ್ನು ಪ್ರಕಟಿಸದಿದ್ದರೂ ಆ ಕಾಲದಲ್ಲಿ ಅವನು ಸುಮ್ಮನೆ ಕುಳಿತಿರಲಿಲ್ಲವೆಂಬುದನ್ನು ಅರಿತುಕೊಳ್ಳಬೇಕು. ಅವನು ಅಂದಿನ ವರೆಗೂ ನಡೆಸಿದ್ದ ಹಲವು ಸಂಶೋಧನೆಗಳಿಂದಲೇ ತೃಪ್ತನಾಗಿರಲಿಲ್ಲ. ವಿಕಾಸ ತತ್ವದ ನಿರೂಪಣೆಯಲ್ಲಿ ತೊಡಗಿ ಮೌನವಾಗಿ ದುಡಿಯುತ್ತಿದ್ದನು.

ಮೌನವಾಗಿ ದುಡಿಯುತ್ತಿದ್ದನು

ದಕ್ಷಿಣ ಅಮೆರಿಕದ ಪ್ರವಾಸಕಾಲದಲ್ಲಿ ಕಂಡ ಹಲವಂಶಗಳು ಅವನ ಮನಸ್ಸಿನಲ್ಲಿ ಹೇಗೆ ವಿವಿಧ ವಿಚಾರ ತರಂಗಗಳನ್ನೆಬ್ಬಿಸಿದ್ದುವೆಂಬುದನ್ನು ಹಿಂದೆ ವಿವರಿಸಿರುವೆವು. ಅಲ್ಲಿ ಪಳೆಯುಳಿಕೆಗಳನ್ನು ಬಿಟ್ಟಿರುವ ಪ್ರಾಚೀನ-ಸಸ್ತನಿಗಳಿಗೂ ಈ ದಿನ ವಾಸಿಸುವ ಸಸ್ತನಿಗಳಿಗೂ ಇರುವ ಸಾಮ್ಯವನ್ನು ಕಂಡಾಗ ಅವನು ಹಿಂದಿನ ಪ್ರಾಣಿಗಳಿಂದ ಈ ದಿನದ ಪ್ರಾಣಿಗಳು ಕ್ರಮೇಣ ಪರಿಣಾಮವಾಗಿರಬೇಕೆಂದು ನಿರ್ಧರಿಸಿಕೊಂಡನು. ಹಾಗೆ ಹಿಂದಿದ್ದ ಒಂದು ಕೆಳಜಾತಿಯ ಪ್ರಾಣಿಯಿಂದ ಈ ದಿನದ ಇನ್ನೊಂದು ಮೇಲಣ ಜಾತಿಯ ಪ್ರಾಣಿ ಕಾಲ ಕ್ರಮೇಣ ಉದಯವಾಗಿದ್ದರೆ, ಉದಿಸಿದ ಬಗೆ ಹೇಗೆ ? ಎಂದು ತನ್ನೊಳಗೇ ಬಹುಕಾಲದವರೆಗೂ ಯೋಚಿಸುತ್ತಿದ್ದನು. ಹಿಂದಿನ ಅಂಥ ಜಾತಿಯ ಪ್ರಾಣಿಗಳು ಈ ದಿನ ಏಕಿಲ್ಲ ? ಅವು ಅಳಿದು ಹೋದುದಕ್ಕೂ ಹೊಸ ಜಾತಿ ಉಗಮಿಸಿದ್ದಕ್ಕೂ ಇರುವ ಸಂಬಂಧವೇಂಥದು ? ಭೂಮಿಯ ಮೇಲಿರುವ ಅನೇಕ ಜಾತಿಯ ಪ್ರಾಣಿಗಳು ಒಂದರೊಡನೊಂದು ಹೇಗೆ ಸಂಬಂಧಿಸಿವೆ ? ಇತ್ಯಾದಿ ಮೂಲ ಸಮಸ್ಯೆಗಳೂ ಅವನ ಮನಸ್ಸಿನಲ್ಲಿ ಸುಳಿಯಹತ್ತಿದುವು.

ಮೂಲ ಸಮಸ್ಯೆಗಳು

ಅವುಗಳನ್ನು ಬಿಡಿಸಿ ಸಮಂಜಸವಾದ ತತ್ವವೊಂದನ್ನು ನಿರೂಪಿಸಿ ಸಿದ್ಧಾಂತಪಡಿಸಲು ಅವನು ತನ್ನ ಇಡೀ ಜೀವಮಾನವನ್ನೇ ವಿನಿಯೋಗಿಸಿದನೆನ್ನಬಹುದು.

ಜೀವಜಾತಿಗಳ ಹುಟ್ಟಿನ ಸಮಸ್ಯೆ

ಜೀವಪ್ರಪಂಚದಲ್ಲಿ ಕಂಡುಬರುವ ಬೇರೆಬೇರೆ ಜಾತಿಗಳು ಹೇಗೆ ಉಂಟಾದುವೆಂಬ ಕುತೂಹಲ ಡಾರ್ವಿನ್ನನ ಮನಸ್ಸಿನಲ್ಲಿ ಎಡಿನ್ಬರೋದಲ್ಲಿದ್ದಾಗಲೇ ಅಂಕುರವಾಗಿತ್ತು. ಗ್ರ್ಯಾಂಟರ ಗ್ರಂಥವೊಂದನ್ನು ಓದುತ್ತಿರುವಾಗ ಅದರಲ್ಲಿದ್ದ 'ಒಂದು ಜಾತಿಯ ಸ್ಪಂಜಿನ ಹುಳು ಇನ್ನೊಂದು ಜಾತಿಯ ಸ್ಪಂಜಿನ ಹುಳುವಿನಿಂದ ಹುಟ್ಟಿರಬೇಕು' ಎಂಬ ಸಲಹೆ ಅವನ ಮನವನ್ನಾಕರ್ಷಿಸಿತ್ತು. ಹಾಗೆಯೇ ಕೇಂಬ್ರಿಡ್ಜಿನಲ್ಲಿ ಲಯೆಲ್ಲರ ಭೂಮಿಶಾಸ್ತ್ರವನ್ನೋದುತ್ತಿದ್ದಾಗ 'ಬಹುಕಾಲದಿಂದಲೂ ಭೂಮಿಯ ಮೇಲೆ ಹೊಸಹೊಸ ಜೀವಜಾತಿಗಳು ಹುಟ್ಟುತ್ತಲೇ ಬಂದಿವೆ' ಎಂಬ ಉಲ್ಲೇಖನವನ್ನು ನೋಡಿದಾಗಿನಿಂದ ಆ ಕುತೂಹಲ ಅವನ ಮನಸ್ಸಿನಲ್ಲಿ ಪುಟವೇರುತ್ತಾ ಬಂದಿತು. ಪ್ರವಾಸಕಾಲದಲ್ಲಿ ಈ ವಿಚಾರದ ಮೇಲೆ ನಿರ್ದಿಷ್ಟವಾದ ಒಂದು ಭಾವನೆಯೇ ಅವನ ಮನಸ್ಸಿನಲ್ಲಿ ರೂಪುಗೊಂಡಿತು.

ಸಮಸ್ಯೆ ಬಿಡಿಸಲು ೨೨ ವರ್ಷ ಬೇಕಾಯಿತು

ತಾಯ್ನಾಡಿಗೆ ಹಿಂದಿರುಗಿದ ಮೇಲೆ ಗ್ರಂಥಪ್ರಕಟನೆಯ ಕಾರ್ಯದ ಜೊತೆಗೆ ಮೇಲಣ ಸಮಸ್ಯೆಯನ್ನು ಬಿಡಿಸುವ ದೃಢಮನಸ್ಸಿನಿಂದ ಎಲ್ಲ ಸಾಮಗ್ರಿಗಳನ್ನೂ ಹೊಂದಿಸಿಕೊಂಡು ಸಂಶೋಧಿಸಲಾರಂಭಿಸಿದ್ದನು. ೧೮೩೭ರಲ್ಲಿ ಅವುಗಳಿಗೆ ಸಂಬಂಧಿಸಿದ ಹಲವು ಹೆಗ್ಗರೆಗಳನ್ನು ಹಾಕಿಕೊಂಡು ಅವುಗಳ ತಳಹದಿಯ ಮೇಲೆ ತನ್ನ ಸಂಶೋಧನೆಗಳನ್ನು ಕೇಂದ್ರೀಕರಿಸಿ ಮುಂದುವರಿಸುತ್ತಿದ್ದನು. ಹೆಚ್ಚುಹೆಚ್ಚು ಸಂಶೋಧನೆಗಳು ನಡೆದಂತೆ, ಹೊಸಹೊಸ ಭಾವನೆಗಳು ಹೊಳೆದಂತೆ ಮೇಲಣ ಸಮಸ್ಯೆಗಳಿಗೆ ಉತ್ತರ ಹೊಳೆಯುತ್ತಾ ಬಂದಿತು. ಪ್ರವಾಸಕಾಲದಲ್ಲಿ ಹೊಳೆದ ಒಂದು ಜಾತಿ ಮತ್ತೊಂದು ಕೆಳಜಾತಿಯಿಂದಲೇ ಉಗಮವಾಗಿರಬೇಕೆಂಬ ಭಾವನೆ ಡಾರ್ವಿನ್ನನ ಮನಸ್ಸಿನಲ್ಲಿ ಬೆಳೆದು ಪರಿಪಕ್ವವಾಗಿ ತತ್ವವಾಗುವುದಕ್ಕೆ ಸುಮಾರು ೨೨ ವರ್ಷಗಳಾದುವು.

೧೭೯೮ರಲ್ಲಿ ಟಿ. ಆರ್. ಮಾಲ್ತಸ್ ಎಂಬ ಇಂಗ್ಲೆಂಡಿನ ಅರ್ಥಶಾಸ್ತ್ರಜ್ಞನೊಬ್ಬನು ಜನ ಸಂಖ್ಯೆ ಮತ್ತು ಆಹಾರಗಳ ಸಮಸ್ಯೆಯನ್ನು ಕುರಿತು ಒಂದು

ಗ್ರಂಥವನ್ನು ಪ್ರಕಟಿಸಿದ್ದನು. ಮಿತಿಯಿಲ್ಲದೆ ಬೆಳೆಯುತ್ತಿರುವ ಮಾನವ ವರ್ಗದಲ್ಲಿ ಹೆಚ್ಚುಹೆಚ್ಚು ಆಹಾರಸೇವನೆಯಿಂದ ಕ್ರಮೇಣ ಅನರ್ಥವುಂಟಾಗು ವುದೆಂಬ ಭವಿಷ್ಯವನ್ನು ನುಡಿದು ಅಂಥ ಅನರ್ಥದಿಂದ ಪಾರಾಗಲು ಪ್ರೌಢ ವಿವಾಹವೂ ಬ್ರಹ್ಮಚರ್ಯಪಾಲನೆಯೂ ಆವಶ್ಯಕವೆಂದು ಸಲಹೆ ಮಾಡಿ ದ್ದನು. ಹಾಗೆಯೇ ಮಲಯಪರ್ಯಾಯದ್ವೀಪದಲ್ಲಿ ಸಂಶೋಧನೆ ನಡೆಸುತ್ತಿದ್ದ ಎ. ಆರ್. ವ್ಯಾಲೇಸ್ ಎಂಬ ಮತ್ತೊಬ್ಬ ಆಂಗ್ಲ ವಿಜ್ಞಾನಿಯೂ ಆ ಗ್ರಂಥವನ್ನು ಓದಿದ್ದನು. ಇವರಿಬ್ಬರೂ ಜೀವ ವಿಜ್ಞಾನಿಗಳಾದುದರಿಂದ ಆ ಗ್ರಂಥದಲ್ಲಿ ಹೇಳಿದ್ದ ಅತಿ ಸಂತಾನದ ಪ್ರತಿಬಂಧಕಗಳನ್ನು ಅರಿತುಕೊಂಡು ಎಲ್ಲ ಜೀವಿಗಳೂ ಜೀವನ ದಲ್ಲಿ ಹೇಗೆ ಹೋರಾಡಬೇಕೆಂಬುದನ್ನು ಗ್ರಹಿಸಿದ್ದರು. ಡಾರ್ವಿನ್ ಮೊಲ್ತಸ್ಸನ ಸಾಮಾನ್ಯ ಸಲಹೆಯೊಂದರ ಮೇಲೆ 'ಜೀವ ಜಾತಿಯ ಹುಟ್ಟು' ಎಂಬ ಯುಗ ಪ್ರವರ್ತಕ ಗ್ರಂಥವನ್ನು ನಿರೂಪಿಸಿದನೆಂದು ಹೇಳಬಹುದು. ಅದಕ್ಕೆ ಆವಶ್ಯಕ ವಾದ ಸಾಮಗ್ರಿಗಳನ್ನೆಲ್ಲ ತನ್ನ ಪ್ರಪಂಚಯಾತ್ರೆಯಲ್ಲಿ ಸಂಗ್ರಹಿಸಿ ತಂದು ತನ್ನ ಪ್ರತಿಭೆಯ ಬೆಳಕಿನಲ್ಲಿ ಸಿದ್ಧಪಡಿಸಿಕೊಂಡನು.

**ಜೀವನದ ಸಂಗ್ರಾಮ**

ಎಲ್ಲ ಜೀವಜಾತಿಗಳಲ್ಲೂ ಅತಿ ಸಂತಾನವಾಗುವುದು. ಆಗ ಆಹಾರ ಸ್ಥಳಾದಿ ಆವಶ್ಯಕತೆ ಹೆಚ್ಚುವುದು. ಆದರೆ ಆಹಾರಸ್ಥಳಾದಿಗಳು ಮಾತ್ರ ಅದೇ ಪ್ರಮಾಣದಲ್ಲಿ ಹೆಚ್ಚುವಂತಿಲ್ಲ. ಆದರೂ ಪ್ರತಿ ಯೊಂದು ಜೀವಿಯೂ ನಾನು ಬದುಕಬೇಕು, ತಾನು ಬದುಕಬೇಕು, ಎಬ ಆಸೆಯಿಂದ ತನ್ನ ಸಂಬಂಧಿಗಳೊಡನೆ ಸ್ಪರ್ಧೆಗಾರಂಭಿಸುವುದು. ಈ ಸ್ಪರ್ಧೆಯಲ್ಲಿ ಉತ್ತೀರ್ಣವಾಗಲು ಒಂದರೊಡ ನೊಂದು ಹೋರಾಡುವುದು. ಇಂಥ ಹೋರಾಟವನ್ನು ಜೀವನದ ಸಂಗ್ರಾಮ ವೆಂದು ಕರೆಯಬಹುದು. ನಿಸರ್ಗದಲ್ಲಿರುವ ಈ ದೃಶ್ಯವನ್ನು ಅರಿತುಕೊಂಡವ ರಲ್ಲಿ ಡಾರ್ವಿನ್ ಮೊಟ್ಟಮೊದಲನೆಯ ವಿಜ್ಞಾನಿ. ಅವನ ಹೆಸರೆನ್ನೆತ್ತಿದರೆ ಜೀವನದ ಸಂಗ್ರಾಮ ನೆನಪಿಗೆ ಬರುತ್ತದೆ. ಡಾರ್ವಿನ್ ಅದನ್ನು ಪ್ರಕಟಿಸಿದ ನಂತರ ಜೀವಶಾಸ್ತ್ರದಲ್ಲಿ ಕತ್ತಲು ಕವಿದಿದ್ದ ಅನೇಕ ಮಾರ್ಗಗಳು ಕಾಣ ಹತ್ತಿದುವು. ಈ ದೃಶ್ಯ ನಿಸರ್ಗದಲ್ಲಿ ಅತಿಮುಖ್ಯವೂ ವಿಶ್ವವ್ಯಾಪಕವೂ ಆದ್ದಾದರೂ ಅದರ ಅರಿವು ಮಾತ್ರ ಜನ ಸಾಮಾನ್ಯಕ್ಕೆ ತೀರ ಕಡಮೆ.

ಪ್ರಕೃತಿ ಮೇಲೆ ನೋಡಲು ಸೌಮ್ಯವಾಗಿ ಕಂಡರೂ ಆದರ ಅಂತರಾಳದಲ್ಲಿ ಮಾತ್ರ ಮೇಲೆ ವಿವರಿಸಿದ ಜೀವನದ ಸಂಗ್ರಾಮವು ಅಹೋರಾತ್ರಿಯೂ ನಡೆಯುತ್ತಿರುತ್ತದೆ. ಬನಗಳಲ್ಲಿ ತರುಲತಾದಿಗಳು ಹೊರನೋಟಕ್ಕೆ ನಳನಳಿಸುತ್ತ ಉದಯಾಸ್ತವೂ ಆನಂದದಲ್ಲಿ ತೂಗಿ ತೊನೆದು ಕಂಗೊಳಿಸುತ್ತಿರುತ್ತವೆ. ತಳಿರಿನ ಮೇಲೆ ಸುಂದರ ಸುಮರಾಜಿ ವಿವಿಧ ವರ್ಣಗಳ ವೈಖರಿಯಿಂದ ವಿರಾಜಿಸುತ್ತಿರುತ್ತದೆ; ನವಿಲುಗಳು ಗರಿಗೆದರಿ ಕೇಕೆ ಹಾಕುತ್ತಾ ವಿಶ್ವಾನಂದದಿಂದ ನರ್ತನಗೈಯುತ್ತಿರುತ್ತವೆ. ಕೋಗಿಲೆ, ಗಿಳಿ, ಗೊರವಂಕ, ಗೀಜಗ, ಮೊದಲಾದ ಪಕ್ಷಿಗಳು ಬೈಗು ಬೆಳಗುಗಳಲ್ಲಿ ಆವೇಶದಿಂದ ಕಲಕಂಠನಾದ ಮಾಡುತ್ತಿರುತ್ತವೆ. ಇವೆಲ್ಲ ಸಾಮಾನ್ಯವಾಗಿ ಎಲ್ಲರ ಕಣ್ಣಿಗೂ ಬೀಳುವ ದಿನದಿನದ ದೃಶ್ಯ. ಆದರೆ ಅಂಥ ಪ್ರತಿಯೊಂದು ಜೀವಿಯೂ ತನ್ನ ಸುತ್ತಲೂ ಇರುವ ಸ್ಪರ್ಧೆಗಾರರೊಂದಿಗೂ ವಾತಾವರಣದ ಎಡರುಗಳೊಡನೆಯೂ ಹೂಡಿರುವ ಜೀವನದ ಸಂಗ್ರಾಮದ ಭೀಕರ ದೃಶ್ಯವನ್ನು ಅರಿತುಕೊಳ್ಳುವವರು ಮಾತ್ರ ಅತಿ ವಿರಳ.

ಒಳಗೆ ಹೋರಾಟ

ಕೇವಲ ಹತ್ತಿರದ ಸಂಬಂಧಿಗಳಲ್ಲಿ ಜೀವನದ ಸಂಗ್ರಾಮವು ಉಗ್ರವಾಗಿರುತ್ತದೆ. ಏಕೆಂದರೆ ಒಂದೇ ಜಾತಿಯ ಜೀವಿಗಳಾದರೆ ಅವುಗಳಿಗಿರುವ ಆಹಾರ ಸ್ಥಳಾದಿ ಆವಶ್ಯಕತೆಗಳೂ ಒಂದೇ ರೀತಿಯವು. ಅವುಗಳನ್ನು ಒದಗಿಸಿಕೊಳ್ಳುವಾಗ ಸ್ಪರ್ಧೆ ತಾನಾಗಿಯೇ ಹುಟ್ಟುವುದು. ವಿಜಾತೀಯ ಜೀವಿಗಳೊಳಗೂ ಸ್ಪರ್ಧೆ ಏಳಬಹುದು. ಆದರೆ ಅಷ್ಟೊಂದು ಉಗ್ರವಾಗಿರುವುದಿಲ್ಲ. ಇದನ್ನು ವಿವರಿಸಲು ಕೆಲವು ಕಾಡುಮೃಗಗಳನ್ನು ಉದಹರಿಸಬಹುದು. ಹುಲಿ-ಹುಲಿಗಳಲ್ಲಿ ಅಧಿಕ ಸ್ಪರ್ಧೆಯಿದ್ದು ಜೀವನದ ಹೋರಾಟ ಉಗ್ರವಾಗಿರುತ್ತದೆ; ಹುಲಿಗೂ ಸಿಂಹಕ್ಕೂ ಸ್ಪರ್ಧೆಯಿದ್ದರೂ ಸ್ವಲ್ಪ ಕಡಮೆ. ಹುಲಿಗೂ ನರಿಗೂ ಸ್ಪರ್ಧೆ ಇನ್ನೂ ಕಡಮೆ; ಹುಲಿಗೂ ಆನೆಗೂ ಸ್ಪರ್ಧೆ ಇಲ್ಲವೇ ಇಲ್ಲವೆನ್ನಬಹುದು.

ಸ್ವಜಾತಿ ಸ್ಪರ್ಧೆ ಉಗ್ರವಾಗಿರುತ್ತದೆ

ಪ್ರಾಣಿವರ್ಗಗಳಲ್ಲಿ ಕಂಡುಬರುವಂತೆ ಸಸ್ಯವರ್ಗದಲ್ಲೂ ಜೀವನದ ಸಂಗ್ರಾಮವುಂಟು. ಒಂದು ಸ್ಥಳದಲ್ಲುದುರಿರುವ ಬೀಜಗಳೆಲ್ಲ ಮೊದಲು

ಮೊಳೆತರೂ ಅವುಗಳಲ್ಲಿ ಸ್ಪರ್ಧೆಗಾರಂಭವಾಗಿ ಹೋರಾಟವಾಗುವುದು; ಹಲವು ಮೊಳಕೆಯಲ್ಲಿಯೇ ಮಡಿಯುವುವು. ಮತ್ತೆ ಕೆಲವು ಸ್ವಲ್ಪ ಬೆಳೆದು ಹಾಗೆಯೇ ಅಳಿಯುವುವು ಕೆಲವು ಮಾತ್ರ ಪೂರ್ತಿ ಬೆಳೆದು ಫಲಧಾಯಕವಾಗುವುವು. ಪ್ರಾಣಿಗಳೂ ಸಸ್ಯಗಳೂ ತಮ್ಮ ಸಂಬಂಧಿಗಳೊಡನೆ ಹೋರಾಡುವುದರ ಜೊತೆಗೆ ವಾತಾವರಣದ ವಿಷಮಸನ್ನಿವೇಶಗಳೊಡನೆಯೂ ಹೋರಾಡಬೇಕಾಗುವುದು. ಶೀತಮಾರುತನ ಹೊಡೆತಕ್ಕೆ ನಂದಿಹೋಗುವ ಸಸ್ಯಗಳು ಕೆಲವು; ಬಿಸಿಲ ತಾಪಕ್ಕೆ ಒಣಗತಕ್ಕವು ಹಲವು; ಬಿರುಗಾಳಿಗೆ ಕೊಚ್ಚಿಹೋಗುವುವು ಇನ್ನು ಕೆಲವು; ಸಸ್ಯಾಹಾರಿ ಪ್ರಾಣಿಗಳು ಗಿಡದ ಭಾಗವನ್ನು ಕಡಿದು ತಿಂದು ಘಾತಿಸಿಬಿಡುವುವು. ಆಗಾಗ ತಲೆದೋರುವ ರೋಗರುಜಿನಾದಿಗಳಿಂದ ಕೋಟಿಗಟ್ಟಲೆ ಸಸ್ಯಗಳು ನಾಶವಾಗುವುವು. ಎಲ್ಲ ದಿಕ್ಕುಗಳಲ್ಲೂ ಜೀವಿಗಳು ಹೋರಾಡುತ್ತಲೇ ಇರಬೇಕು. ನಿಸರ್ಗದಲ್ಲಿ ಇಂಥ ಹೋರಾಟ ಸೃಷ್ಟಿಯ ಆದಿಯಿಂದಲೂ ಒಂದೇ ಸಮನೆ ನಡೆಯುತ್ತಿದೆ. ಜಯಶಾಲಿಗಳಾಗಿ ಉಳಿದವುಗಳ ಸಂತತಿ ಮಾತ್ರ ಇಂದು ನಮ್ಮೆದುರಿಗೆ ಕಾಣುತ್ತಿವೆ. ಅನಂತಕಾಲದಿಂದ ಅಖಂಡವಾಗಿ ನಡೆದುಬಂದಿರುವ ಆ ಜೀವನದ ಸಂಗ್ರಾಮದಲ್ಲಿ ಎಷ್ಟೊಂದು ಸಸ್ಯಜಾತಿಗಳು ನಂದಿಹೋಗಿರಬೇಕು! ಎಷ್ಟೊಂದು ಪ್ರಾಣಿವರ್ಗಗಳು ಅಳಿದುಹೋಗಿರಬೇಕು! ನಾವು ಒಂದು ಗುಲಾಬಿಯನ್ನೋ, ನವಿಲನ್ನೋ ಕಂಡಾಗ 'ಎಷ್ಟು ಸುಂದರವಾಗಿದೆ' ಎಂದು ಹಾಡುತ್ತೇವೆಯೇ ಹೊರತು, ಅವು ಶತಮಾನಗಳಿಂದ ಸ್ಪರ್ಧೆಯಲ್ಲಿ ಜಯಶಾಲಿಗಳಾಗಿ ಇಂದಿನ ಸ್ಥಿತಿಗೆ ಬರಲು ಹೂಡಿದ ಉಗ್ರ ಸಂಗ್ರಾಮದಲ್ಲಿ ಅನುಭವಿಸಿದ ನೋವಿನ ಕುರುಹನ್ನು ಮಾತ್ರ ಅರಿಯೆವು.

**ಜೀವನದ ಸಂಗ್ರಾಮದ ವ್ಯಾಪ್ತಿ**

ಜೀವನದ ಸಂಗ್ರಾಮವನ್ನು ಅನೇಕ ಸಸ್ಯಗಳಲ್ಲೂ ಪ್ರಾಣಿಗಳಲ್ಲೂ ಪರಿಶೀಲಿಸಿ ಅದು ಸಸ್ಯಪ್ರಾಣಿಗಳೆರಡಕ್ಕೂ ಸಾಮಾನ್ಯವೆಂದು ಡಾರ್ವಿನ್ ಅರಿತುಕೊಂಡನು. ಇಂಗ್ಲೆಂಡಿನಲ್ಲಿ ಬಹುದಿನದಿಂದಲೂ ಕಪ್ಪುಜಾತಿಯ ಇಲಿಗಳು ವಾಸಿಸುತ್ತಿವೆ. ಎಂಟನೆಯ ಶತಮಾನದ ಸುಮಾರಿನಲ್ಲಿ ಅಲ್ಲಿಗೆ ಬಾಲ್ಟಿಕ್ ಬಂದರುಗಳಿಂದ ಕಂದು ಬಣ್ಣದ ಇಲಿಗಳೂ ಬಂದುವು. ಆಗ ಅವೆರಡು ಜಾತಿಗಳಲ್ಲಿ

**ಸಂಗ್ರಾಮದಲ್ಲಿ ಜಯಶಾಲಿಗಳು**

ಹುಟ್ಟಿದ ಸ್ಪರ್ಧೆಯಲ್ಲಿ ಕಪ್ಪು ಇಲಿಗಳು ಪರಾಜಿತವಾಗಿ ಕಂದು ಇಲಿಗಳು ಪ್ರಚಾರಕ್ಕೆ ಬಂದುವೆಂಬ ಸತ್ಯಾಂಶವನ್ನು ಅವನು ಪರಿಶೀಲಿಸಿದನು. ತಾನು ಕಣ್ಣಾರ ಕಂಡ ಅಮೆಸಾನ್ ಮೊದಲಾದ ಉಷ್ಣವಲಯದ ಮಹಾರಣ್ಯಗಳಲ್ಲಿದ್ದ ಎತ್ತರವಾದ ಮರಗಳೊಡನೆ ನಿರ್ಬಲಕಾಂಡದ ಲತೆಗಳು ಸ್ಪರ್ಧೆಯನ್ನು ಹೂಡಿರುವುವೆಂದು ಗ್ರಹಿಸಿದನು. ಎಲ್ಲ ಸಸ್ಯಗಳಿಗೂ ಆಹಾರ ತಯಾರಿಸಲು ಗಾಳಿಬೆಳಕುಗಳು ಅವಶ್ಯಕ. ಲತೆಗಳು ಕೆಳಗೇ ಉಳಿದರೆ ಎತ್ತರವಾಗಿ ಬೆಳೆದಿರುವ ಮರಗಳ ಮೇಲ್ಭಾಗ ಬೆಳಕನ್ನು ಬಿಡುವುದಿಲ್ಲ. ಹಾಗೆಯೇ ಉಳಿದರೆ ಲತೆಗಳು ಪರಾಜಿತವಾಗುವುದು ಖಂಡಿತ. ಆದಕ್ಕಾಗಿಯೇ ಆ ಲತೆಗಳು ಎತ್ತರವಾದ ಮರಗಳೊಡನೆ ಸ್ಪರ್ಧಿಸಿ ಅವುಗಳನ್ನೇ ತಬ್ಬಿ, ಅವುಗಳಿಗಿಂತ ಮೇಲಕ್ಕೇರಿ ಆವಶ್ಯಕವಾದ ಗಾಳಿ ಬೆಳಕುಗಳನ್ನು ಹೊಂಚಿಕೊಂಡು ಜೀವನದ ಸಂಗ್ರಾಮದಲ್ಲಿ ಜಯಶಾಲಿಯಾಗಿವೆ. ಇಂಥ ನೂರಾರು ದೃಶ್ಯಗಳನ್ನು ಪರಿಶೀಲಿಸಿ, ಡಾರ್ವಿನ್ ಚೆನ್ನಾಗಿ ತಿಳಿದುಕೊಂಡಿದ್ದನು.

**ಜೀವನದ ಸಂಗ್ರಾಮದ ಪ್ರಾಮುಖ್ಯತೆ**

ಜೀವನದ ಸಂಗ್ರಾಮವೆಂಬ ಪದವನ್ನು ಡಾರ್ವಿನ್ ವಿಶಾಲವಾದ ಅರ್ಥದಲ್ಲಿ ಉಪಯೋಗಿಸಿದ್ದನು. ಅದರ ವ್ಯಾಪ್ತಿಯನ್ನು ಅವನು ಅಳೆದು ತೋರಿಸಲು ಪ್ರಯತ್ನಿಸದಿದ್ದರೂ ಕೇವಲ ಹತ್ತಿರದ ಸಂಬಂಧಿಗಳಲ್ಲಿ ನಡೆಯುವ ಹೋರಾಟಕ್ಕೆ ಮಾತ್ರ ಅದು ಅನ್ವಯಿಸುವುದೆಂದು ತಿಳಿಯಬಾರದು; ಜೀವಿಗಳು ದೂರ ಸಂಬಂಧಿಗಳೊಡನೆಯೂ ವಾತಾವರಣದ ಎಡರುಗಳೊಡನೆಯೂ ನಡೆಸಬೇಕಾಗಿರುವ ಎಲ್ಲ ವಿಧವಾದ ಹೋರಾಟಕ್ಕೂ 'ಜೀವನದ ಸಂಗ್ರಾಮ' ಎಂಬ ಪದ ಅನ್ವಯಿಸುತ್ತದೆ. 'ನಿಸರ್ಗದಲ್ಲಿ ಪ್ರಚಾರದಲ್ಲಿರುವ ಈ ದೃಶ್ಯ ಸಾಮಾನ್ಯವಾದುದಾದರೂ ಅದನ್ನು ಅರಿತುಕೊಂಡ ಹೊರತು ಅನೇಕ ವಿಜ್ಞಾನ ಸಮಸ್ಯೆಗಳು ಬಗೆಹರಿಯುವಂತಿಲ್ಲ' ಎಂಬುದಾಗಿ ನುಡಿದು ಡಾರ್ವಿನ್ ಅದರ ಪ್ರಾಮುಖ್ಯತೆಯನ್ನು ಸಾರಿರುವನು. ಪ್ರಾಚೀನಕಾಲದಲ್ಲಿ ಅನೇಕ ಜೀವಜಾತಿಗಳು ಏಕೆ ಅಳಿದು ಹೋದುವು? ಒಂದು ಜೀವಿ ಒಂದು ಕಡೆ ವಿರಳವಾಗಿರುವುದಕ್ಕೂ, ಇನ್ನೊಂದು ಕಡೆ ಹೇರಳವಾಗಿರುವುದಕ್ಕೂ, ಕಾರಣವೇನು? ಒಂದು ಜಾತಿಯ ಬೇರೆ ಬೇರೆ ಜೀವಿಗಳಲ್ಲಿ ವ್ಯತ್ಯಾಸಗಳೇಕೆ ಕಂಡು

ಬರುವುವು ? ಮುಂತಾದ ಸಮಸ್ಯೆಗಳನ್ನೆಲ್ಲ ಜೀವನದ ಸಂಗ್ರಾಮದ ಬೆಳಕಿನಲ್ಲೇ ಅರಿತುಕೊಳ್ಳಬೇಕಾಗುವುದೆಂದು ವಿವರಿಸಿರುವನು.

ಒಂದು ಜಾತಿಯ ಸಸ್ಯಗಳಲ್ಲಾಗಲಿ ಪ್ರಾಣಿಗಳಲ್ಲಾಗಲಿ ಒಂದು ಇನ್ನೊಂದನ್ನು ಪೂರ್ಣವಾಗಿ ಹೋಲುವುದಿಲ್ಲ. ಒಂದಕ್ಕೂ ಇನ್ನೊಂದಕ್ಕೂ ಹಲವು ವ್ಯತ್ಯಾಸಗಳಿದ್ದೇ ಇರುತ್ತವೆ. ಹೀಗೆ ವ್ಯತ್ಯಾಸವನ್ನು ಪಡೆಯುವುದು ಪ್ರತಿಯೊಂದು ಜೀವಿಯ ಹುಟ್ಟುಗುಣ. ಅವುಗಳ ಸ್ವಭಾವ, ಅಂಗರಚನೆ, ಆಕಾರ, ಗಾತ್ರ, ಬಣ್ಣ ಮುಂತಾದ ಗುಣಗಳಲ್ಲಿ ವ್ಯತ್ಯಾಸಗಳು ಕಂಡುಬರುವುವು. ಮಾನವಜಾತಿಯನ್ನೇ ತೆಗೆದುಕೊಂಡರೆ ಹಲವರು ದಢ್ಡರು. ಮತ್ತೆ ಕೆಲವರು ಮೇಧಾವಿಗಳು; ಕೆಲವರು ಸ್ಫುರದ್ರೂಪಿಗಳು, ಇನ್ನು ಕೆಲವರು ಕುರೂಪಿಗಳು; ಹಲವರಿಗೆ ರೋಗಪ್ರತಿಭಟನಾ ಶಕ್ತಿಯಿದ್ದರೆ ಮತ್ತೆ ಕೆಲವರು ಸುಲಭವಾಗಿ ರೋಗಕ್ಕೆ ತುತ್ತಾಗುತ್ತಾರೆ; ಎಸಳು ಮೂಗು ಕೆಲವರಿಗಿದ್ದರೆ ಚೆಂಡು ಮೂಗು ಕೆಲವರಿಗೆ. ಹೀಗೆ ಅನೇಕ ವ್ಯತ್ಯಾಸಗಳನ್ನು ಪರಿಶೀಲಿಸಬಹುದು. ಸಸ್ಯಗಳ ಭಾಗಗಳ ಆಕಾರ, ಗಾತ್ರ, ಬಣ್ಣ, ರಚನೆ, ಸಂಖ್ಯೆ, ಇತ್ಯಾದಿಗಳಲ್ಲೂ ಹಾಗೆಯೇ ವ್ಯತ್ಯಾಸ ಕಂಡುಬರುವುದು. ಈ ವ್ಯತ್ಯಾಸಗಳನ್ನು ಮಾರ್ಪಾಟುಗಳು ಅಥವ ಗುಣವಿಭೇದಗಳು ಎಂದು ಕರೆಯಬಹುದು. ಡಾರ್ವಿನ್ ಒಂದೊಂದು ಜಾತಿಯ ಬೇರೆಬೇರೆ ವ್ಯಕ್ತಿಗಳನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ, ತೋರಿಬಂದ ಗುಣವಿಭೇದಗಳನ್ನು ಪರಿಶೀಲಿಸಿದ್ದನು. ಒಂದೊಂದು ಜೀವಿಯೂ ಜೀವನದ ಸಂಗ್ರಾಮದಲ್ಲಿ ಜಯವನ್ನು ಪಡೆಯಲು ಹೋರಾಡುತ್ತಿರುತ್ತದೆ. ಹೊಸದಾಗಿ ಮೂಡಿರುವ ವಿಭೇದಗಳಲ್ಲಿ ಹಲವು ಆ ಪ್ರಾಣಿಗೆ ಜೀವನದ ಸಂಗ್ರಾಮದಲ್ಲಿ ವಿಜಯವಾಗಲು ನೆರವಾಗುತ್ತವೆ. ಅಂಥ ವಿಭೇದಗಳನ್ನು ಸಹಾಯಕ ವಿಭೇದಗಳೆಂದೂ, ಯಾವ ಮಾರ್ಪಾಡುಗಳು ಆ ಜೀವಿಗೆ ಅಪಾಯಕರವಾಗಿರುವುವೋ ಅವುಗಳನ್ನು ಪ್ರತಿಕೂಲ ವಿಭೇದಗಳೆಂದೂ ಡಾರ್ವಿನ್ ವಿಂಗಡಿಸಿಕೊಂಡನು. ಸಹಾಯಕ ವಿಭೇದಗಳುಳ್ಳ ಪ್ರಾಣಿಗಳೂ ಸಸ್ಯಗಳೂ ಸನ್ನಿವೇಶದೊಡನೆ ಜಯಪ್ರದವಾಗಿ ಹೊಂದಿಕೊಂಡು ಬದುಕಿ, ತಮ್ಮ ಪೀಳಿಗೆಯನ್ನೇ ಮುಂದುವರಿಸುವುವು. ಅವುಗಳ ಸಹಾಯಕ ವಿಭೇದಗಳೂ ತಮ್ಮ ಸಂತತಿಗೆ ಸಾಮಾನ್ಯವಾಗಿ ವಂಶಗತವಾಗಿ ಬರುವುವು. ಕ್ರಮಕ್ರಮವಾಗಿ ಆ ಪೀಳಿಗೆ ಪ್ರವರ್ಧಮಾನಸ್ಥಿತಿಗೇರುವುದು. ಅನ್ವಯಯೋಗ್ಯ

ವಲ್ಲದ ಗುಣವಿಭೇದಗಳುಳ್ಳವು ಜೀವನದ ಸಂಗ್ರಾಮದಲ್ಲಿ ಪರಾಜಿತವಾಗಿ ಅಳಿಯುವುವು. ಅಳಿಯದೆ ಉಳಿದವುಗಳಲ್ಲಿ ಅನ್ವಯಯೋಗ್ಯವಲ್ಲದ ತಮ್ಮ ಗುಣವಿಭೇದಗಳು ಮುಂದಣ ಸಂತತಿಗಳಲ್ಲೂ ಗೋಚರಿಸಿಕೊಂಡು ಕ್ರಮವಾಗಿ ಆ ಪೀಳಿಗೆಯೇ ನಾಶವಾಗುವುದು ಜೀವನದ ಸಂಗ್ರಾಮದಲ್ಲಿ ಯಾವುವು ಜಯಪಡೆಯುವುವೋ ಅವುಗಳನ್ನು ಉತ್ತಮ ಯೋಗ್ಯತೆಯವೆಂದೂ ಮಿಕ್ಕವನ್ನು ಯೋಗ್ಯತೆಯಿಲ್ಲದುವೆಂದೂ ಡಾರ್ವಿನ್ ಕರೆದಿರುವನು. ಪ್ರಕೃತಿಯಲ್ಲಿ ಉತ್ತಮ ಯೋಗ್ಯತೆಯವು ಮಾತ್ರ ಬಾಳಲವಕಾಶವಿರುವುದರಿಂದ ಮಿಕ್ಕವು ಅಳಿಯಲೇಬೇಕಾಗುವುದು. ಅವನು ಪ್ರಕೃತಿಯಲ್ಲಾಗುವ ಈ ಯೋಗ್ಯ ಜೀವಿಗಳ ಆಯ್ಕೆಯನ್ನರಿತುಕೊಂಡು ಅದನ್ನು 'ನೈಸರ್ಗಿಕ ಚುನಾವಣೆ' ಯೆಂದು ಕರೆದನು.

ಒಂದು ಸನ್ನಿವೇಶದಲ್ಲಿ ಅದಕ್ಕೊಪ್ಪುವ ಜೀವವರ್ಗ ಮಾತ್ರ ವಾಸಿಸುತ್ತಿರುತ್ತದೆ. ಮಿಕ್ಕವು ಬಾಳಲಾರವು; ಅಟ್ಲಾಂಟಿಕ್ ಸಾಗರದ ನಡುವೆ ಯಿರುವ ಮಡೀರ ದ್ವೀಪದಲ್ಲಿ ಚಿಟ್ಟೆಗಳಿಗೆ ರೆಕ್ಕೆಯಿಲ್ಲ; ಯೂರೋಪಿನಲ್ಲಿರುವ ಅದೇ ಜಾತಿ ಚಿಟ್ಟೆಗೆ ರೆಕ್ಕೆಯಿದೆ ಇದಕ್ಕೆ ಕಾರಣವೇನು ? ಮಡೀರ ದ್ವೀಪ ಸಾಗರದ ಮಾರುತಗಳ ಹೊಡೆತಕ್ಕೆ ಸಿಕ್ಕಿದೆಯಷ್ಟೆ. ನೀರು ದೂರದವರೆಗೂ ಉಕ್ಕಿಬರುವಾಗ ಚಿಟ್ಟೆಗಳ ರೆಕ್ಕೆ ತೊಯ್ದು ಕೊಚ್ಚಿಕೊಂಡು ಹೋಗಿಬಿಡುವುವು. ಆದುದರಿಂದ ಅಂಥ ಚಿಟ್ಟೆಗಳಿಗೆ ಅದು ಹೊಂದದ ಸನ್ನಿವೇಶ. ಅವುಗಳ ರೆಕ್ಕೆಗಳಲ್ಲಿ ನಶಿಸಿಹೋದ ವಿಭೇದಗಳುಳ್ಳವು ಮಾತ್ರ ಉಳಿದುಕೊಳ್ಳಲು ಅವಕಾಶವಾಯಿತು. ಕ್ರಮಕ್ರಮವಾಗಿ ಪ್ರಧಾನವಾಗಿ ರೆಕ್ಕೆಯಿದ್ದ ಚಿಟ್ಟೆಗಳ ವಂಶ ನಶಿಸುತ್ತಲೂ, ರೆಕ್ಕೆ ಕ್ಷೀಣಿಸಿದ್ದವುಗಳ ವಂಶವೇ ಬೆಳೆಯುತ್ತಲೂ ಬಂದು ಕಾಲಕ್ರಮದಲ್ಲಿ ಅಲ್ಲಿ ಈ ದಿನ ಕಾಣುವ ರೆಕ್ಕೆಯಿಲ್ಲದ ಹಾರಲಾರದ ಚಿಟ್ಟೆಯ ಜಾತಿ ಉದಯವಾಗಿದೆ. ಆ ಸನ್ನಿವೇಶ ಅವುಗಳಿಗೆ ಮಾತ್ರ ತಕ್ಕುದಾಗಿದೆ

ವಿಭೇದ ಮತ್ತು ಸನ್ನಿವೇಶ

ನೈಸರ್ಗಿಕ ಚುನಾವಣೆಯ ತತ್ವ ಡಾರ್ವಿನ್ನನ ಸಂಶೋಧನೆಗಳಲ್ಲೆಲ್ಲ ಪ್ರಧಾನವಾದುದು. ಜೀವಶಾಸ್ತ್ರದಲ್ಲಿ ಅವನಿಗೆ ಆ ತತ್ವವೇ ಚಿರಸ್ಮರಣೀಯ ಸ್ಥಾನವೊಂದನ್ನು ಗಳಿಸಿಕೊಟ್ಟಿದೆ. ಭೌತಿಕ ಶಾಸ್ತ್ರದ ಬೆಳವಣಿಗೆಗೆ ಮೂಲ

ತತ್ವಗಳ ತಳಹದಿಯನ್ನು ನ್ಯೂಟನ್ ಹಾಕಿಕೊಟ್ಟನಷ್ಟೆ. ಡಾರ್ವಿನ್ ಜೀವಶಾಸ್ತ್ರದ ನ್ಯೂಟನ್ನನೆಂದು ಹೆಸರುಗೊಂಡಿರುವನು.

ನೈಸರ್ಗಿಕ ಚುನಾವಣೆ

ನೈಸರ್ಗಿಕ ಚುನಾವಣೆಯ ತತ್ವವನ್ನು ಡಾರ್ವಿನ್ನನ ಹಿಂದಿನವರು ಎಷ್ಟರಮಟ್ಟಿಗೆ ಗ್ರಹಿಸಿದ್ದರೆಂಬುದನ್ನು ಹೇಳುವುದು ಕಷ್ಟವಾದರೂ ಮಾಲ್ತಸ್ಸನೇನೋ ತನ್ನ ಗ್ರಂಥದಲ್ಲಿ ಆ ಅರ್ಥ ಬರುವಂತೆ ಸಲಹೆಮಾಡಿದ್ದನು. ಅವನ ಸಲಹೆ ಡಾರ್ವಿನ್ನನ ವಿಚಾರದೃಷ್ಟಿಯನ್ನು ಪೋಷಿಸಿರಬೇಕು. ಆದ್ದರಿಂದಲೇ ತನ್ನ ತತ್ವದ ತಳಹದಿಗೆ ಮಾಲ್ತಸ್ಸನ ಋಣವನ್ನು ಸ್ಮರಿಸಿಕೊಂಡು 'ಒಮ್ಮೆ ವಿಹಾರಾರ್ಥವಾಗಿ ನಾನು ಮಾಲ್ತಸ್ಸನ ಗ್ರಂಥವನ್ನೋದುತ್ತಿದ್ದೆನು. ಅಷ್ಟುಹೊತ್ತಿಗೆ ನಿಸರ್ಗದಲ್ಲಿ ಪ್ರಚಾರದಲ್ಲಿರುವ ಜೀವನದ ಸಂಗ್ರಾಮವನ್ನು ನಾನು ಪರಿಚಯ ಮಾಡಿಕೊಂಡಿದ್ದುದರಿಂದ, ಆ ಗ್ರಂಥವನ್ನು ಹೆಚ್ಚು ಆಸಕ್ತಿಯಿಂದ ಓದಿದೆನು. ಆಗ ಜೀವನದ ಸಂಗ್ರಾಮದಲ್ಲಿ ಯೋಗ್ಯವಾದುವುಗಳು ಉಳಿದು ಮಿಕ್ಕವು ಅಳಿಯಬೇಕಾಗುತ್ತದೆಯೆಂಬ ತತ್ವದ ದರ್ಶನವಾಯಿತು.' ಎಂದು ಡಾರ್ವಿನ್ ನುಡಿದಿರುವನು.

ನೈಸರ್ಗಿಕ ಚುನಾವಣೆಯ ಕಾರ್ಯವನ್ನು ಜರಡಿಯಾಡುವುದಕ್ಕೆ ಹೋಲಿಸಬಹುದು. ಪದಾರ್ಥಗಳನ್ನು ಜರಡಿಯಾಡಿದಾಗ ಆವಶ್ಯಕತೆಗಿಂತ ಕಡಮೆ ಗಾತ್ರದವೆಲ್ಲ ಬಿದ್ದುಹೋಗುತ್ತವೆ. ಮಿಕ್ಕವು ಮಾತ್ರ ಜರಡಿಯಲ್ಲುಳಿಯುವುವು. ನೈಸರ್ಗಿಕ ಚುನಾವಣೆ ಪ್ರಕೃತಿಯ ಜರಡಿ. ಅದರಲ್ಲಿ ಉಳಿಯಲು ಯೋಗ್ಯತೆಯುಳ್ಳವನ್ನು ಮಾತ್ರ ಆರಿಸಿಕೊಂಡು ಮಿಕ್ಕವನ್ನು ಆ ಮೂಲಕ ತೂರಿಬಿಡಲು ಅವಕಾಶವಾಗುತ್ತದೆ.

ಬೀಗಲ್ ಯಾತ್ರೆಯಿಂದ ಹಿಂದಿರುಗಿದ ಮೇಲೆ ೨೦ ವರ್ಷಗಳವರೆಗೂ ಒಂದೇ ಸಮನೆ ದುಡಿದು ನೈಸರ್ಗಿಕ ಚುನಾವಣೆಯ ತತ್ವವನ್ನು ತಿಳಿದುಕೊಂಡಿದ್ದರೂ ಅದಕ್ಕೆ ಸಂಬಂಧಿಸಿದಂತೆ ಯಾವ ಗ್ರಂಥವನ್ನೂ ಡಾರ್ವಿನ್ ಪ್ರಕಟಿಸಿರಲಿಲ್ಲ. ವ್ಯಾಲೇಸನೂ ಅದೇ ತತ್ವವನ್ನರಿತುಕೊಂಡು ೧೮೫೮ರಲ್ಲಿ ಒಂದು ಚಿಕ್ಕ ಪ್ರಬಂಧವನ್ನು ರಚಿಸಿ, ಡಾರ್ವಿನ್ನನಿಗೆ ಕಳುಹಿಸಿಕೊಟ್ಟನು. ಹಾಗೆಯೇ ಹರ್ಬರ್ಟ್ ಸ್ಪೆನ್ಸರನೂ (ಬಹುಶಃ ಮಾಲ್ತಸ್ತನ ಗ್ರಂಥ ಪರಿಚಯದಿಂದ) ಹೆಚ್ಚು ಕಡಮೆ ಅದೇ ತತ್ವ ಜ್ಞಾನವನ್ನು ದರ್ಶಿಸಿದ್ದನು. ಒಟ್ಟಿನಲ್ಲಿ

ಅಂದು ಉಗ್ರರೂಪವನ್ನು ತಾಳಿದ್ದ ಯೂರೋಪಿನ ಮಿತಿಮೀರಿದ ಜನಸಂಖ್ಯೆಯ ಆಹಾರ ಸಮಸ್ಯೆ ವಿಜ್ಞಾನರಂಗದಲ್ಲಿ ಈ ಹೊಸ ವಿಚಾರದೃಷ್ಟಿಗೆ ಎಡೆಗೊಟ್ಟಿತೆಂದು ಹೇಳಬಹುದು. ಮೇಲೆ ಹೇಳಿದ ಮೂವರೂ ಪ್ರತ್ಯೇಕವಾಗಿ ನೈಸರ್ಗಿಕ ಚುನಾವಣೆಯ ತತ್ತ್ವವನ್ನರಿತುಕೊಂಡಿದ್ದರೂ ಆ ತತ್ತ್ವ ಡಾರ್ವಿನ್ನನ ಹೆಸರಿನೊಡನೆ ಮಾತ್ರ ಹೆಣೆದುಕೊಂಡಿದೆ. ಏಕೆಂದರೆ, ಮಿಕ್ಕವರಂತೆ ಅವನು ಅದನ್ನು ಆಕಸ್ಮಿಕವಾಗಿ ಅರಿತುಕೊಂಡವನಲ್ಲ; ಬಾಲ್ಯದಿಂದಲೂ ತನಗಿದ್ದ ಪದಾರ್ಥ ಪರಿಶೀಲನಾಸಕ್ತಿಯಿಂದಲೂ ಅನುಪಮ ಪ್ರತಿಭಾಶಕ್ತಿಯಿಂದಲೂ ಬೀಗಲ್ 'ಯಾತ್ರೆ'ಯಿಂದ ಪಡೆದಿದ್ದ ವಿಶ್ವಾನುಭವದಿಂದಲೂ ಅವನಿಗೆ ಜೀವರಂಗದ ವಿಶಾಲಪರಿಚಯವಾಗಿತ್ತು. ಪ್ರವಾಸಕಾಲದಲ್ಲಿ ಬೇರೆ ಬೇರೆ ಜಾತಿಯ ಜೀವಿಗಳು ಬೇರೆಬೇರೆ ವಾತಾವರಣಕ್ಕೆ ಹೊಂದಿಕೊಂಡಿರುವುದನ್ನು ಕಂಡು ಅವು ಅಷ್ಟೊಂದು ಜಯಪ್ರದವಾಗಿ ಹೇಗೆ ಹೊಂಧಿಕೊಂಡುವು? ಬೇರೆಬೇರೆ ಜೀವಜಾತಿಗಳು ಉಗಮವಾದುದು ಹೇಗೆ? ಎಂದು ಯೋಚಿಸಲಾರಂಭಿಸಿ ಹಗಲಿರುಳೂ ಸಮಸ್ಯೆಯನ್ನು ಬಿಡಿಸಲು ದುಡಿದು ನೈಸರ್ಗಿಕ ಚುನಾವಣೆಯ ದೃಶ್ಯವನ್ನರಿತುಕೊಂಡಿದ್ದನು. ಮುಂದೆ ಆ ತತ್ತ್ವದ ಬೆಳಕಿನಲ್ಲೇ ಜೀವಪ್ರಪಂಚದ ಇತಿಹಾಸವನ್ನೂ ವಿವರಿಸಿದುದು. ಇತರರಂತೆ ಅವನು ಅದನ್ನು ಒಂದು ವಾದರೂಪದಲ್ಲಿ ಸಲಹೆಮಾಡಿ ತೆಪ್ಪಗಾಗಲಿಲ್ಲ. ಪ್ರಯೋಗ ಫಲಿತಾಂಶಗಳಿಂದ ಪರಿಷ್ಕರಿಸಿ ಅದನ್ನು ತತ್ತ್ವರೂಪಕ್ಕೆ ತಂದನು. ವಿಜ್ಞಾನರಂಗದಲ್ಲಿ ಕೇವಲ ಸಲಹೆಗಳಿಗೆ ಹೆಚ್ಚು ಪ್ರಾಧಾನ್ಯವಿಲ್ಲ. ಪ್ರಯೋಗಗಳಿಂದ ಪರಿನೋಡಿ ತತ್ತ್ವರೂಪಕ್ಕೆ ತರುವುದು ಆವಶ್ಯಕ. ಡಾರ್ವಿನ್ ಈ ಎರಡು ಕಾರ್ಯಗಳನ್ನೂ ಮಾಡಿದ್ದರಿಂದಲೇ ನೈಸರ್ಗಿಕ ಚುನಾವಣೆಯ ತತ್ತ್ವಜನಕನೆಂದು ವಿಖ್ಯಾತನಾಗಿರುವುದು.

ಜೀವಜಾತಿಗಳು ಹುಟ್ಟಿದ ಕ್ರಮವನ್ನು ಅರಿತುಕೊಳ್ಳಲು ಡಾರ್ವಿನ್ ನಿರ್ದಿಷ್ಟವಾಗಿ ಪ್ರಯತ್ನಿಸಿದುದು ೧೮೩೭ರಿಂದ. ೧೮೩೮ರಲ್ಲಿ ನೈಸರ್ಗಿಕ ಚುನಾವಣೆಯ ತತ್ತ್ವದರ್ಶನವನ್ನು ಮಾಡಿಕೊಂಡು ೧೮೪೨ರಲ್ಲಿ ಆ ತತ್ತ್ವದ ರೂಪುರೇಖೆಗಳನ್ನು ಬರೆಯಲು ಮೊದಲು ಮಾಡಿದನು. ಎರಡು ವರ್ಷಗಳ ನಂತರ ಆ ಟಿಪ್ಪಣಿಯನ್ನು ಪರಿಷ್ಕರಿಸಿ ಸುಮಾರು ೧೨೦ ಪುಟಗಳಷ್ಟಕ್ಕೆ ವಿಸ್ತರಿಸಿದನು. ಅಂದಿನಿಂದಲೂ ಆವಶ್ಯಕವಾದ ಪ್ರಯೋಗಗಳನ್ನು ನಡೆಸಿ, ಅಂಕೆ

ಅಂಶಗಳನ್ನೊದಗಿಸಿಕೊಳ್ಳುತ್ತಿದ್ದನು. ಹೀಗೆ ಮೌನವಾಗಿ ಸಂಶೋಧನೆಗಳಲ್ಲಿ ನಿರತನಾಗಿರುವಾಗ ಹೊರಗಿನ ಅನೇಕ ವಿಜ್ಞಾನಿಗಳೊಡನೆ ಪತ್ರವ್ಯವಹಾರವನ್ನಿಟ್ಟುಕೊಂಡು ಅವರಿಂದ ಆವಶ್ಯಕವಾದ ಸಲಹೆಸಹಕಾರಗಳನ್ನು ಪಡೆಯುತ್ತಿದ್ದನು. ಅಂಥ ವಿಜ್ಞಾನಿಗಳಲ್ಲಿ ಲಯಲ್, ಆಸ್ಗ್ರೆ, ಹೂಕರ್, ಹಕ್ಸ್ಲೆ ಮುಂತಾದವರನ್ನು ಇಲ್ಲಿ ಉಲ್ಲೇಖಿಸಬಹುದು. ಲಯಲ್ಲರು ಡಾರ್ವಿನ್ನನ ಸಂಶೋಧನೆಗಳ ಮಹತ್ವವನ್ನು ಅರಿತುಕೊಂಡು ನಿರಂತರವೂ ಉತ್ತೇಜನಕೊಡುತ್ತಿದ್ದರು. ಅವರ ಸಲಹೆಯಂತೆ ಡಾರ್ವಿನ್ ತನ್ನ ಪ್ರಯೋಗ ಫಲಿತಾಂಶಗಳನ್ನೆಲ್ಲ ಶೇಖರಿಸಿ, 'ಜೀವಜಾತಿಗಳ ಹುಟ್ಟು' ಎಂಬ ಗ್ರಂಥವನ್ನು ಬರೆಯಲಾರಂಭಿಸಿದನು.

ಮುದ್ರಣಕ್ಕೆ ಗ್ರಂಥವನ್ನು ಬರೆಯಲು ಡಾರ್ವಿನ್ ಮೊದಲು ಮಾಡಿದುದು ೧೮೫೬ರಲ್ಲಿ. ಸುಮಾರು ಎರಡು ವರ್ಷಗಳ ತನಕ ದುಡಿದು ಗ್ರಂಥದ ಹತ್ತು ಅಧ್ಯಾಯಗಳನ್ನು ಬರೆದು ಮುಗಿಸಿದನು. ತನ್ನ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ಅವನಿಗಿದ್ದ ಉದಾಸೀನತೆಯನ್ನು ಕಂಡು ಲಯಲ್ಲರು ಡಾರ್ವಿನ್ನನಿಗೆ 'ಮತ್ತೊಬ್ಬ ವಿಜ್ಞಾನಿ ಅದೇ ವಿಷಯವನ್ನು ಪ್ರಕಟಿಸಬಹುದು' ಎಂದು ಎಚ್ಚರಿಕೆಯಿತ್ತಿದ್ದರು. ಅವರ ಎಚ್ಚರಿಕೆ ನಿಜವೇ ಆಯಿತು. ಹಿಂದೆ ಹೇಳಿರುವಂತೆ ವ್ಯಾಲೇಸನೂ ಅದೇ ತತ್ವವನ್ನರಿತುಕೊಂಡಿದ್ದನು. ೧೮೫೭ರಲ್ಲಿ ಡಾರ್ವಿನ್ ಅವನಿಗೊಂದು ಕಾಗದ ಬರೆದು ತನ್ನ ಸಂಶೋಧನೆಯ ಸಾರಾಂಶವನ್ನು ತಿಳಿಸಿ ಅವುಗಳನ್ನೆಲ್ಲ ಒಟ್ಟುಗೂಡಿಸಿ ಒಂದು ಗ್ರಂಥರೂಪದಲ್ಲಿ ಪ್ರಕಟಿಸುವ ಕಾರ್ಯದಲ್ಲಿ ತೊಡಗಿರುವನೆಂದು ವಿವರಿಸಿದ್ದನು. ಡಾರ್ವಿನ್ನನ ಈ ಕಾಗದದಿಂದ ಧೈರ್ಯಗೊಂಡ ವ್ಯಾಲೇಸನು ೧೮೫೮ರಲ್ಲಿ ತಾನೂ ಅದೇ ನಿರ್ಧಾರಕ್ಕೆ ಬಂದಿರುವುದನ್ನು ತಿಳಿಸಿ ಹಿಂದೆ ತನ್ನ ತತ್ವವನ್ನೂ ಪ್ರಬಂಧರೂಪದಲ್ಲಿ ಬರೆದು ಅವನಿಗೆ ಕಳುಹಿಸಿದನು.

ವ್ಯಾಲೇಸನ ಪ್ರಬಂಧ ಡಾರ್ವಿನ್ನನ ಕೈ ಸೇರುವ ಹೊತ್ತಿಗೆ ತನ್ನ ಗ್ರಂಥವೂ ಬರೆದು ಮುಗಿಯುವುದರಲ್ಲಿತ್ತು. ವ್ಯಾಲೇಸನ ಪ್ರಬಂಧದಲ್ಲಿ ತಾನು ೨೨ ವರ್ಷಗಳ ಹಿಂದೆಯೇ ಅರಿತುಕೊಂಡಿದ್ದ ಸತ್ಯಾಂಶವಿರುವುದನ್ನು ಕಂಡು ಚಕಿತನಾಗಿ ಹೋಗಿ 'ನಾನೆಲ್ಲೂ ಇಂಥ ಸಾಮ್ಯವನ್ನು ಕಂಡಿಲ್ಲ. ೧೮೪೨

ರಲ್ಲಿ ನಾನು ತಯಾರಿಸಿದ್ದ ಕರಡು ಪ್ರತಿಯನ್ನು ವ್ಯಾಲೇಸನಿಗೆ ಕೊಟ್ಟಿದ್ದರೆ
ಈ ಪ್ರಬಂಧಕ್ಕಿಂತಲೂ ಚೆನ್ನಾಗಿ ಅದರ ಸಾರಾಂಶ
ಒಂದು ಸಾವ್ಕು ವನ್ನು ಅವನು ಬರೆಯುತ್ತಿರಲಿಲ್ಲ' ಎಂದುಕೊಂಡನು.
ಅಪರಿಚಿತನಾದ ಮತ್ತೊಬ್ಬ ವಿಜ್ಞಾನಿ ತನ್ನಂತೆಯೇ ಪ್ರತ್ಯೇಕವಾಗಿ ದುಡಿದು, ತಾನು ದರ್ಶಿಸಿದ್ದ ತತ್ತ್ವವನ್ನೇ ಅರಿತುಕೊಂಡಿರುವುದನ್ನು ಕಂಡಾಗ ಆ ತತ್ತ್ವನಿರೂಪಣೆಯ ಗೌರವಕ್ಕೆ ತನ್ನಂತೆ ವ್ಯಾಲೇಸನೂ ಅರ್ಹನೆಂಬ ಹಿರಿಯ ಭಾವನೆ ಅವನ ಮನಸ್ಸಿನಲ್ಲಿ ಹುಟ್ಟಿತು. ಎಲ್ಲ ವಿಷಯವನ್ನು ತಿಳಿದೂ ತನ್ನ ಗ್ರಂಥಪ್ರಕಟನೆಗೆ ಹಾತೊರೆಯುವುದು ಯೋಗ್ಯವೇ ಎಂಬ ನೈತಿಕ ಸಮಸ್ಯೆ ಅವನ ಮನಸ್ಸಿನಲ್ಲಿ ಎದ್ದುಕೊಂಡಿತು. ಅನೇಕ ವರ್ಷಗಳ ಕಾಲ ದುಡಿದು ಸಂಶೋಧನೆ ನಡೆಸಿ, ನೈಸರ್ಗಿಕ ಚುನಾವಣೆಯ ತತ್ತ್ವವನ್ನು ಡಾರ್ವಿನ್ ನಿರೂಪಿಸಿದ್ದರೂ ವ್ಯಾಲೇಸನ ಕಾರ್ಯವನ್ನರಿತಾಗ ತನ್ನ ಹಕ್ಕನ್ನು ಆ ಕಿರಿಯ ವಿಜ್ಞಾನಿಗೆ ಬಿಟ್ಟುಕೊಡುವುದರಲ್ಲಿದ್ದನು. ತನ್ನ ಇಡೀ ಜೀವಮಾನವನ್ನೇ ಸವೆಸಿ ಯಾವ ಕಾರ್ಯವನ್ನು ಸಾಧಿಸಿದ್ದನೋ ಆ ಕಾರ್ಯಸಾಧನೆಗೆ ಸಲ್ಲಬೇಕಾದ ಗೌರವಕ್ಕಾಶಿಸಲಿಲ್ಲವೆಂಬುದಕ್ಕೆ ಇದು ದೊಡ್ಡ ನಿದರ್ಶನ. "ಹೇಗಾದರೂ ಆಗಲಿ ವಿಜ್ಞಾನ ಬೆಳೆದು ವಿಶ್ವಕಲ್ಯಾಣವಾದರೆ ಸಾಕು" ಎಂಬ ನಿಸ್ವಾರ್ಥ ಬುದ್ಧಿಯಿಂದ ದುಡಿದ ಡಾರ್ವಿನ್ನನನ್ನು ಮೆಚ್ಚಿ ಕೊಂಡಾಡದ ಮನಸ್ಸುಂಟೇ! ತನ್ನ ಜೀವನವನ್ನೇ ಪಣವಾಗಿಟ್ಟು ಸುಮಾರು ಕಾಲು ಶತಮಾನದವರೆಗೂ ದುಡಿದು ದೊರೆತ ಫಲವನ್ನು ಮತ್ತೊಬ್ಬರಿಗೆ ನೀಡಲು ಯತ್ನಿಸುವುದನ್ನು ಕಂಡಾಗ ನಮ್ಮ ಅಂತಃಕರಣ ಕರಗಿ ಹೋಗುವುದು; ಡಾರ್ವಿನ್ ಅತಿಮಾನುಷವ್ಯಕ್ತಿಯಿರಬೇಕೆಂಬ ಭಾವನೆ ಹುಟ್ಟುವುದು.

ಡಾರ್ವಿನ್ನನ ಕಾರ್ಯಮಹೋನ್ನತಿಯನ್ನು ಬಲ್ಲ ಕೆಲವು ಗೆಳೆಯರು ಆ ತತ್ತ್ವನಿರೂಪಣೆಯ ಗೌರವವನ್ನು ವ್ಯಾಲೇಸನಿಗೆ ಬಿಟ್ಟುಕೊಡಲು
ಆ ತತ್ತ್ವದ ನಿರೂಪ ಅವಕಾಶ ಕೊಡಲಿಲ್ಲ. ಅವನಿಗಿದು ಇಷ್ಟವಿಲ್ಲದಿದ್ದರೂ
ಣೆಯ ಗೌರವಕ್ಕಾರು ಗೆಳೆಯರ ಇಷ್ಟದಂತೆ ತನ್ನ ಗ್ರಂಥವನ್ನು ಪ್ರಕಟಿಸಲೊಪ್ಪಿ
ಪಾತ್ರರು ? ದನು. ಆದರೆ ಅದಕ್ಕೆ ಪೂರ್ವಭಾವಿಯಾಗಿ ವ್ಯಾಲೇಸನ
ಅಪ್ಪಣೆಯನ್ನು ಪಡೆದು ತಮ್ಮಿಬ್ಬರ ಸಂಶೋಧನೆಯ ಪ್ರಬಂಧಗಳೆರಡನ್ನೂ

ಲಿನಿಯನ್ ಸಂಘದಲ್ಲಿ ಓದಿ, ಏಕ ಕಾಲದಲ್ಲಿ ಪ್ರಕಟಿಸಲೋಸುಗ ಕಳುಹಿಸಿ ಕೊಟ್ಟನು. ಆ ತತ್ವನಿರೂಪಣೆಗೆ ತನ್ನ ಹೆಸರೊಂದನ್ನೆ ಮುಂದೆ ನೂಕಲು ಮಾತ್ರ ಸಮ್ಮತಿಸಲಿಲ್ಲ. ಇದನ್ನರಿತ ಅವನ ಮಿತ್ರರಾದ ಲಯಲ್ ಮತ್ತು ಹೂಕರ್ ಅವರು “ ಸಂಘದ ಆಶ್ರಯದಲ್ಲಿ ಪ್ರಕಟವಾಗಲಿರುವ ಡಾರ್ವಿನ್ನನ ಮತ್ತು ವ್ಯಾಲೇಸನ ಪ್ರಬಂಧಗಳೆರಡೂ ನೈಸರ್ಗಿಕ ಚುನಾವಣೆಯ ಮೂಲಕ ಹೊಸಹೊಸ ಜೀವಜಾತಿಗಳು ಹುಟ್ಟುವುವೆಂಬುದನ್ನು ವಿವರಿಸುತ್ತವೆ. ಇಬ್ಬರೂ ನಿಸರ್ಗ ವಿಜ್ಞಾನಸಂಶೋಧಕರು. ಪ್ರತ್ಯೇಕವಾಗಿ ದುಡಿದು ಒಂದೇ ತತ್ವವನ್ನರಿತುಕೊಂಡಿರುವರು. ಆದದರಿಂದ ಆ ಗೌರವಕ್ಕೆ ಯಾರು ಪಾತ್ರ ರೆಂಬುದು ವಿಜ್ಞಾನದ ಇತಿಹಾಸದೃಷ್ಟಿಯಿಂದ ಇತ್ಯರ್ಥವಾಗಬೇಕಾಗಿದೆ. ೧೮೪೨ರಲ್ಲೇ ಡಾರ್ವಿನ್ ಆ ವಿಚಾರದ ಮೇಲೆ ಪ್ರಬಂಧವೊಂದನ್ನು ಬರೆದಿದ್ದನು. ೧೮೪೪ ರಲ್ಲಿ ಅದನ್ನೇ ವಿಸ್ತರಿಸಿ ‘ ಜೀವಜಾತಿಗಳ ಹುಟ್ಟು ’ ಎಂಬ ಹೆಸರಿನಿಂದ ಬರೆದಿದ್ದ ಕೈ ಬರಹದ ಪ್ರತಿಯನ್ನು ನಾವು ನೋಡಿದ್ದೆವು. ಆ ಪ್ರಬಂಧದ ಅಭಿಪ್ರಾಯವನ್ನೇ ಅವನು ೧೮೫೭ ರಲ್ಲಿ ಸಂಯುಕ್ತ ಸಂಸ್ಥಾನದ ಆಸ್ಗ್ರೆ ಎಂಬ ತನ್ನ ಗೆಳೆಯನೊಬ್ಬನಿಗೆ ಒರೆದು ತಿಳಿಸಿದ್ದನು. ಹಲವು ಮಿತ್ರರ ಕೋರಿಕೆಯಂತೆ ಡಾರ್ವಿನ್ ತನ್ನ ತತ್ವವನ್ನು ಗ್ರಂಥರೂಪದಲ್ಲಿ ಬರೆಯುತ್ತಿರುವಾಗ ವ್ಯಾಲೇಸನ ಪ್ರಬಂಧವೂ ಒಂದು ಅವನ ಕೈಸೇರಿತು. ಅಷ್ಟುಹೊತ್ತಿಗೆ ಅವನ ಗ್ರಂಥ ಮುಗಿಯುವುದರಲ್ಲಿತ್ತು. ನಮ್ಮಲ್ಲನೇಕರು ಆ ಗ್ರಂಥವನ್ನು ಓದಿ ಅಂದಿಗಾಗಲೇ ಪರಿಚಯ ಮಾಡಿಕೊಂಡಿದ್ದೆವು. ಅದರಲ್ಲಿ ಡಾರ್ವಿನ್ ತನ್ನ ಸಂಶೋಧನೆಗಳ ಫಲಿತಾಂಶಗಳ ಆಧಾರದ ಮೇಲೆ ಜೀವಜಾತಿಗಳು ಹುಟ್ಟುವ ಕ್ರಮವನ್ನು ವಿವರಿಸಿದ್ದನು. ಆ ತತ್ವದ ಆಧಾರದ ಮೇಲೇ ಜೀವರಂಗದ ವಿವಿಧ ಸಮಸ್ಯೆಗಳನ್ನು ಬಿಡಿಸಬೇಕಾಗುತ್ತದೆ. ಆ ತತ್ವ ನಿರೂಪಣೆಯ ಗೌರವಕ್ಕೆ ಡಾರ್ವಿನ್ನನೇ ಪಾತ್ರ. ಆದುದರಿಂದ ಅವನ ಇಡೀ ಗ್ರಂಥವೇ ಬೆಳಕಿಗೆ ಬರಲೆಂದು ಹಾರೈಸುತ್ತೇವೆ.” ಎಂದು ಲಿನಿಯನ್ ಸಂಘದ ಕಾರ್ಯದರ್ಶಿಗೆ ಸತ್ಯಾಂಶವನ್ನು ತಿಳಿಸಿದರು.

ಡಾರ್ವಿನ್ನನಂತೆ ವ್ಯಾಲೇಸನೂ ಉದಾರ ಗುಣದವನು. ವಿಜ್ಞಾನ ರಂಗದಲ್ಲಿ ತನಗಿಂತ ಹೆಚ್ಚು ಕೆಲಸಮಾಡಿ ವಿಶಾಲ ಅನುಭವದಿಂದ ತನಗಿಂತ ಎಷ್ಟೋ ಕಾಲ ಮುಂಚೆಯೇ ಡಾರ್ವಿನ್ ಆ ತತ್ವವನ್ನು ಗ್ರಹಿಸಿದ್ದುದನ್ನು

ತಿಳಿದು ಆ ತತ್ವ ನಿರೂಪಣೆಯ ಗೌರವಕ್ಕೆ ತಾನು ಸ್ಪರ್ಧಿಸಲಿಲ್ಲ. ಡಾರ್ವಿನ್ನನ ಗ್ರಂಥ ಪ್ರಕಟವಾದ ಮೇಲೆ ಆದನ್ನಾಸಕ್ತಿಯಿಂದ ಓದಿ, 'ಇಂಥ ಮಹಾ ಗ್ರಂಥವನ್ನು ನಾನೆಂದಿಗೂ ಬರೆಯುತ್ತಿರಲಿಲ್ಲ' ಎಂದು ಪ್ರಶಂಸಿಸಿ ಅವನನ್ನು ಕೊಂಡಾಡಿದನಂತೆ. ಅಹೋರಾತ್ರಿಯೂ ದ್ವೇಷಾಸೂಯೆಗಳಿಂದ ಕಾದಾಡಿ ತನ್ನ ತನವನ್ನು ಕಾಪಾಡಿಕೊಳ್ಳಲು ಯತ್ನಿಸುತ್ತಿರುವ ಈ ಪ್ರಪಂಚದಲ್ಲಿ ಈ ವಿಜ್ಞಾನಿಗಳ ವ್ಯವಹಾರದಲ್ಲಿ ಕಂಡುಬರುವ ಔದಾರ್ಯ ಎಂಥ ಆದರ್ಶ! ಡಾರ್ವಿನ್ ತನ್ನ ಸೋದರ ವಿಜ್ಞಾನಿಯೊಬ್ಬನೊಡನೆ ನಡೆದುಕೊಂಡ ಈ ವರ್ತನೆಯಿಂದ ಅವನ ಆತ್ಮತೇಜಸ್ಸು ನೈತಿಕ ಪ್ರಪಂಚದಲ್ಲಿಯೂ ಪ್ರಜ್ವಲಿಸುವಂತಾಯಿತು.

ಲಿನಿಯನ್ ಸಂಘದಲ್ಲಿ ಓದಿ ಪ್ರಕಟಿಸಲು ಡಾರ್ವಿನ್ ತನ್ನ ಗ್ರಂಥದ ಸಾರಾಂಶವನ್ನೆಲ್ಲ ಕೇವಲ ಆರು ಪುಟಗಳಲ್ಲಿ ಬರೆದು ಕಳುಹಿಸಿದ್ದನು. ಅವನ ಮತ್ತು ವ್ಯಾಲೇಸನ ಪ್ರಬಂಧಗಳೆರಡೂ ಏಕಕಾಲದಲ್ಲಿ ಪ್ರಕಟವಾದುವು ತನ್ನ ಪ್ರಬಂಧದಲ್ಲಿ ಡಾರ್ವಿನ್ ಜೀವನ ಸಂಗ್ರಾಮದ ಫಲವಾಗಿ ಸ್ಪರ್ಧೆ ಹುಟ್ಟಿ ನೈಸರ್ಗಿಕ ಚುನಾವಣೆಯಾಗುವುದನ್ನು ವಿವರಿಸಿ, "ಆ ಮೂಲಕ ಸಹಾಯಕವಿಭೇದಗಳುಳ್ಳ ಜೀವಿಗಳು ಬದುಕಿ ಬಾಳುವುವು. ಅವುಗಳ ಸಂತತಿಯಲ್ಲೂ ಆ ವಿಭೇದಗಳಲ್ಲಿ ಹಲವು ವಂಶಗತವಾಗುವುವು ಆದದರಿಂದ ಯೋಗ್ಯತೆಯುಳ್ಳವುಗಳ ವಂಶವೇ ಮುಂದುವರಿಯುವಂತಾಗಿ ಮಿಕ್ಕವು ಕ್ರಮವಾಗಿ ಅಳಿದುಹೋಗಬೇಕಾಗುವುದು. ಅಂಥ ಯೋಗ್ಯತೆಯುಳ್ಳವು ಸ್ಥಳದ ದೃಷ್ಟಿಯಿಂದ ಪ್ರತ್ಯೇಕಿಸಿ ಹೋದರೆ ಹೊಸ ಹೊಸ ವಿಭೇದಗಳನ್ನು ಪಡೆದಂತೆಲ್ಲ ಹೊಸ ಜಾತಿಗಳು ಹುಟ್ಟುವುವು" ಎಂದು ವರ್ಣಿಸಿದ್ದನು.

ತತ್ವ ಘೋಷಣೆ

ಗೆಳೆಯರ ಒತ್ತಾಯದಿಂದ ಪ್ರಯಾಸಪಟ್ಟು ಡಾರ್ವಿನ್ ಜೀವಜಾತಿಗಳ ಹುಟ್ಟು ಗ್ರಂಥವನ್ನು ಬರೆದು ಮುಗಿಸಿದ ಮೇಲೆ ಅದನ್ನು ಮುದ್ರಿಸುವುದಕ್ಕೋಸ್ಕರ ಮರ್ರೆ ಪ್ರಕಟನಾಲಯಕ್ಕೊಪ್ಪಿಸಿದನು. ಆ ಪ್ರಕಟನಾಲಯದವರು ಆ ಗ್ರಂಥದಲ್ಲಿ ಹೆಚ್ಚು ಆಸಕ್ತಿಯಿಲ್ಲದೆ ಸುಮಾರು ಐನೂರು ಪ್ರತಿಗಳನ್ನು ಮಾತ್ರ ಮುದ್ರಿಸಬೇಕೆಂದಿದ್ದರು. ಅದರಲ್ಲಿ ಪ್ರತಿಪಾದಿತವಾಗಿದ್ದ ತತ್ವವೆಲ್ಲ ಸುಳ್ಳೆಂದೇ

ಗ್ರಂಥ ಪ್ರಕಟಣೆ

ಅವರ ಭಾವನೆಯಿತ್ತು. ಗ್ರಂಥ ಪ್ರಕಟನಕಾರ್ಯ ಆರಂಭವಾಗುವ ಮುನ್ನ ಕರಡು ಪ್ರತಿಯನ್ನು ಪೋಲಕ್ಕನೆಂಬ ನ್ಯಾಯವಾದಿಯೊಬ್ಬನಿಗೆ ಪರಿಶೀಲನೆಗೆಂದು ಕಳುಹಿಸಿಕೊಟ್ಟಿದ್ದರು. ಪೋಲಕ್ಕನು ಆ ಗ್ರಂಥವನ್ನು ಆಸಕ್ತಿಯಿಂದೋದಿ ಅದರಲ್ಲಿ ಪೋಷಿತವಾಗಿದ್ದ ಹೊಸ ವಿಚಾರದೃಷ್ಟಿಗೂ ನಿರ್ಮಲವಾದಸರಣಿಗೂ ತಲೆದೂಗಿ ಡಾರ್ವಿನ್ ಅಂದಿನ ಮಿಕ್ಕೆಲ್ಲ ವಿಜ್ಞಾನಿಗಳಿಗಿಂತ ಉತ್ತಮ ವರ್ಗದವನೆಂದು ಅಭಿಪ್ರಾಯಪಟ್ಟು ಕಡೆಗೆ ಒಂದು ಸಾವಿರ ಪ್ರತಿಗಳನ್ನಾದರೂ ಮುದ್ರಿಸಬೇಕೆಂದು ಪ್ರಕಟನಾಲಯದವರಿಗೆ ಸಲಹೆಯಿತ್ತನು. ಅದರಂತೆ ೧೮೫೯ ನೆಯ ವರ್ಷದಲ್ಲಿ ಗ್ರಂಥ ಬೆಳಕಿಗೆ ಬಂದಿತು. ಗ್ರಂಥಕರ್ತೃ ಮೊದಲು ಗ್ರಂಥದ ಆವಶ್ಯಕತೆಯನ್ನು ವಿವರಿಸಿ ಅದರಲ್ಲಿರಬಹುದಾದ ನ್ಯೂನತೆಗಳನ್ನು ತೆರದ ಮನಸ್ಸಿನಿಂದ ಒಪ್ಪಿಕೊಂಡಿದ್ದನು. ಒಂದು ಜಾತಿ ಜೀವಿ ಮತ್ತೊಂದು ಕೆಳಜಾತಿಯಿಂದಲೇ ಪರಿಣಾಮಗೊಂಡಿರುವುದೆಂಬ ತನ್ನ ತತ್ವದ ಸತ್ಯಾಂಶದಲ್ಲಿ ಅನುಮಾನವಿಲ್ಲದಿದ್ದರೂ ಹಾಗೆ ಮಾರ್ಪಡಲು ಆವಶ್ಯಕವಾದ ವಿಭೇದಗಳು ಹೇಗೆ ಹುಟ್ಟುವುವೆಂಬುದು ತನಗೆ ಅರಿವಾಗಲಿಲ್ಲೆಂದು ಒಪ್ಪಿಕೊಂಡು ಮುಂದಣ ವಿಜ್ಞಾನ ಜನಾಂಗ ಅದನ್ನು ಕಂಡು ಹಿಡಿಯಬೇಕೆಂದು ಸಲಹೆಮಾಡಿದ್ದನು.

**ಮೂವರು ವಿಮರ್ಶಕರು**

ಡಾರ್ವಿನ್ ಗ್ರಂಥವನ್ನು ರಚಿಸಲಾರಂಭಿಸಿದಾಗ ತನ್ನ ಗೆಳೆಯರಾದ ಲಯಲ್, ಹೂಕರ್ ಮತ್ತು ಹಕ್ಸ್ಲಿ ಈ ಮೂವರ ಮನವೊಪ್ಪುವಂತೆ ಬರೆಯಬೇಕೆಂದು ನಿರ್ಧರಿಸಿದ್ದನು. ಗ್ರಂಥ ಸಿದ್ಧವಾದಾಗ ಎಲ್ಲರೂ ಅದನ್ನು ನೋಡಿ ಸಂತೋಷಪಟ್ಟರು. ಆದರೆ 'ಒಂದು ಜಾತಿ ಇನ್ನೊಂದು ಕೆಳಜಾತಿಯಿಂದಲೇ ಪರಿಣಾಮವಾಯಿತೆಂಬ' ಸತ್ಯಾಂಶ ಮಾನವನಿಗೂ ಅನ್ವಯಿಸುವುದನ್ನೊಪ್ಪಲು ಲಯಲ್ ಸಿದ್ಧವಿರಲಿಲ್ಲ. ಹೂಕರನು ಪೂರ್ಣ ವಿಕಾಸವಾದಿಯಾಗಿದ್ದುದರಿಂದ ಡಾರ್ವಿನ್ ವಿವರಿಸಿದ್ದ ಎಲ್ಲ ಅಂಶಗಳನ್ನೂ ಒಪ್ಪುಮನಸ್ಸಿನಿಂದ ಅನುಮೋದಿಸಿದನು. ಹಕ್ಸ್ಲಿ ಗ್ರಂಥವನ್ನೋದಿ ಸರ್ವವಿಧದಲ್ಲೂ ತನ್ನ ಮೆಚ್ಚಿಗೆಯನ್ನು ಪ್ರದರ್ಶಿಸಿದನು. ಆಗ ಡಾರ್ವಿನ್ ತನ್ನ ಕಾರ್ಯದಲ್ಲಿ ಉತ್ತೀರ್ಣನಾದೆನೆಂದು ಸಮಾಧಾನಪಟ್ಟುಕೊಂಡನು.

ಮುದ್ರಣಕ್ಕೆ ಗ್ರಂಥವನ್ನು ಸಿದ್ಧಪಡಿಸುವ ಮುಂಚೆ ಡಾರ್ವಿನ್ ಅನೇಕ ಪ್ರಯೋಗಗಳನ್ನು ನಡೆಸಿದ್ದನು. ಸಸ್ಯಗಳನ್ನು ಬೆಳೆಸುವುದು, ಪಾರಿವಾಳ ಗಳನ್ನು ಸಾಕುವುದು, ಸಮುದ್ರನಳ್ಳಿಯ ಜೀವನ ಚರಿತ್ರೆಯನ್ನು ಪರಿಶೀಲಿಸು ವುದು, ದೊರೆತ ಅಂಕಿಅಂಶಗಳನ್ನು ತನ್ನ ತತ್ವಪೋಷಣೆಗೆ ಸಿದ್ಧಗೊಳಿಸು ವುದು ಮುಂತಾದ ಕೆಲಸಗಳಿಗಾಗಿ ಅವನು ಸುಮಾರು ಹನ್ನೆರಡು ವರ್ಷಗಳ ಕಾಲ ದುಡಿದನು. ೧೮೪೦ ರಿಂದ ಸುಮಾರು ಹತ್ತು-ಹನ್ನೆರಡು ವರ್ಷಗಳ ಕಾಲ ಒಂದೇ ಸಮನೆ ರೋಗಪೀಡಿತನಾಗಿದ್ದನು. ಹಿಡಿದ ಕಾರ್ಯ ಮುಗಿಯುವ ವರೆಗೂ ತಾನು ಬದುಕಿರಲಾರೆನೆಂಬುದು ಅವನಿಗೆ ಅಂದು ಹೊಳೆದಿರಬೇಕು. ಅದಕ್ಕಾಗಿಯೇ ೧೮೪೪ ರಲ್ಲಿ ತನ್ನ ತತ್ವದ ಸಾರಾಂಶವನ್ನು ಬರೆದಿಟ್ಟು ಅದನ್ನೇ ಪ್ರಕಟಿಸುವಂತೆ ತನ್ನ ಹೆಂಡತಿಗೆ ಹೇಳಿದ್ದನಂತೆ. ತಾನು ನಡೆಸಿದ್ದ ಪ್ರಯೋಗಗಳಲ್ಲಿ ದೊರೆತ ಅಂಕಿ ಅಂಶಗಳನ್ನು ಆ ತತ್ವಪೋಷಣೆಗೆ ಉಪ ಯೋಗಿಸಿಕೊಳ್ಳಲು ಸಿದ್ಧಪಡಿಸಿಟ್ಟು, ಆ ಎಲ್ಲ ಭಾರವನ್ನೂ ಲಯಲ್ ಮತ್ತು ಹೂಕರ್ ಇವರಿಗೆ ವಹಿಸಿದ್ದನು. ದೇಹಾರೋಗ್ಯ ಅಷ್ಟೊಂದು ಕುಗ್ಗಿಹೋಗಿ ದ್ದರೂ ವಿಜ್ಞಾನ ಸೇವೆಯೆಂದರೆ ಅವನ ಅಂಗಾಂಗಗಳಲ್ಲೂ ನವಚೇತನವುಂಟಾ ಗುತ್ತಿತ್ತು. ಆದುದರಿಂದಲೇ ಅವನು ತನ್ನ ಕೃತಿ ಬೀರಿದ ಬೆಳಕನ್ನು ನೋಡಲು ಬದುಕುವಂತಾಗಿರಬೇಕು.

"ತೋಟಗಾರ ಒಂದು ಜಾತಿಯ ಸಸ್ಯಗಳನ್ನು ಬೆಳೆದಾಗ ಬಂದ ಉತ್ತಮ ಬೀಜಗಳನ್ನು ಆರಿಸಿಕೊಂಡು ಆ ಮೂಲಕ ತನ್ನ ಆವಶ್ಯಕತೆಗೆ ಅನುಗುಣವಾದ ಹೊಸ ಸಂತತಿಯನ್ನು ಕಾಲಕ್ರಮದಲ್ಲಿ ನಿರ್ಮಿಸಿಕೊಳ್ಳುವನು. ಹಾಗೆಯೇ ಪ್ರಕೃತಿಯಲ್ಲಿ ಯೋಗ್ಯವಾದವುಗಳ ಆಯ್ಕೆ

ತತ್ವ ನಿರೂಪಣೆ

ಯಾಗುತ್ತದೆ" ಎಂದು ಡಾರ್ವಿನ್ ತನ್ನ ತತ್ವವನ್ನು ಮಂಡಿಸಿ, "ತೋಟಗಾರ ಹತ್ತಾರು ವರ್ಷಗಳಲ್ಲೇ ತನಗೆ ಆವಶ್ಯಕವಾದಂಥ ಮಾರ್ಪಾಟುಗಳನ್ನುಳ್ಳ ಹೊಸ ಜಾತಿಯೊಂದನ್ನು ಸೃಷ್ಟಿಸಿ ಕೊಳ್ಳುವನು. ಅದೇ ಕಾರ್ಯ ಪ್ರಕೃತಿಯಲ್ಲಿ ನಿಧಾನವಾಗಿ ಸಾಗುವುದು. ಇವೆರಡರ ಉದ್ದೇಶವೂ ಉತ್ತಮ ಗುಣಗಳುಳ್ಳ ಹೊಸ ಜಾತಿಯ ನಿರ್ಮಾ ಣವೇ ಆಗಿದೆ" ಎಂದು ವಿವರಿಸಿ ತೋಟಗಾರನನ್ನು ಹೊಸ ಜಾತಿಯ ನಿರ್ಮಾ ಪಕನೆಂದು ಕರೆದಿರುವನು.

ಡಾರ್ವಿನ್ ಎಲ್ಲ ಜಾತಿಯ ಪಾರಿವಾಳಗಳನ್ನೂ ಸಾಕಿ ಅವುಗಳ ಸಂತತಿಗಳಲ್ಲಿ ಕಂಡುಬರುವ ವಿಭೇದಗಳನ್ನು ಪರಿಶೀಲಿಸುತ್ತಿದ್ದನು. ಆ ಕಾರ್ಯದಲ್ಲಿ ಅವನು ಎಳೆಯ ಮಕ್ಕಳಂತೆ ಪಾರಿವಾಳಗಳೊಡನೆ ವ್ಯವಹರಿಸುತ್ತಿರುವುದನ್ನು ನೋಡಿದವರು ಚಕಿತರಾಗಿರಬಹುದು. ಬಾಲ್ಯದಲ್ಲಿ ತನ್ನ ತಂದೆಯ ತೋಟದಲ್ಲಿ ಎಷ್ಟು ಆಸಕ್ತಿಯಿಂದ ಪಾರಿವಾಳಗಳೊಡನೆ ಆಡುತ್ತಿದ್ದನೋ ಅಷ್ಟೇ ಆಸಕ್ತಿಯಿಂದ ಪ್ರಬುದ್ಧ ವಿಜ್ಞಾನಿಯಾದಾಗಲೂ ಅವುಗಳ ಸೌಂದರ್ಯ, ವೈವಿಧ್ಯ, ಸಾಧುಗುಣ ಇತ್ಯಾದಿಗಳನ್ನು ಪರಿಶೀಲಿಸುತ್ತಿದ್ದನು. ಲಂಡನ್ನಿನ ಪಾರಿವಾಳಗಳ ವ್ಯಾಪಾರಿಗಳನ್ನು ಪರಿಚಯಮಾಡಿಕೊಂಡು ಅವರಿಂದ ಆವಶ್ಯಕವಾದ ವಿಚಾರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದನು.

ಪಾರಿವಾಳಗಳ ಸಂತತಿಗಳ ಪರಿಶೀಲನೆ

ದೀರ್ಘಕಾಲದವರೆಗೂ ಪಾರಿವಾಳಗಳ ಸಂತತಿಗಳನ್ನು ಪರಿಶೀಲಿಸಿದ ನಂತರ ಈ ದಿನದ ಸುಮಾರು ಇನ್ನೂರು ಬೇರೆಬೇರೆ ಜಾತಿಯ ಪಾರಿವಾಳಗಳು ಕಾಡು ಪಾರಿವಾಳದಂಥ ಆದಿ ಪೂರ್ವಜನೊಬ್ಬನಿಂದಲೇ ಕ್ರಮಕ್ರಮವಾಗಿ ಮಾರ್ಪಟ್ಟು ಉಗಮವಾಗಿರಬೇಕೆಂದು ಅರಿತುಕೊಂಡನು. ಸುಮಾರು ಐದು ಸಹಸ್ರ ವರ್ಷಗಳ ಹಿಂದಿನಿಂದಲೂ ಮಾನವನು ಪಾರಿವಾಳಗಳನ್ನು ಸಾಕುತ್ತಿರುವನೆಂದೂ ಅಂದಿನಿಂದಲೂ ತನ್ನ ಮನವೊಪ್ಪಿದಂಥ ಪಾರಿವಾಳದ ಜಾತಿಗಳನ್ನು ನಿರ್ಮಿಸಿಕೊಳ್ಳಲು ಪ್ರಯತ್ನಿಸಿದುದರಿಂದಲೇ ಕಾಡು ಪಾರಿವಾಳದಂಥ ಪೂರ್ವಜನಿಂದ ಇಂದಿನ ವಿವಿಧ ಜಾತಿಯ ಪಾರಿವಾಳಗಳು ಉದಿಸಿದುವೆಂದು ವಿವರಿಸಿರುವನು. ಹಾಗೆಯೇ ತೋಳಗಳಂಥ ಕಾಡುಪ್ರಾಣಿಗಳನ್ನು ಪಳಗಿಸಿ ಅವುಗಳ ಸಂತತಿಯಲ್ಲಿ ಉತ್ತಮವಾದುವನ್ನು ಆರಿಸಿಕೊಂಡು ಅವುಗಳ ಪೀಳಿಗೆಯನ್ನೇ ಮುಂದುವರಿಸಿಕೊಳ್ಳುತ್ತಾ ಬಂದು ಮಾನವನು ಈ ದಿನ ತನ್ನ ಮನೆಯನ್ನು ಕಾಯುತ್ತಿರುವ ನಾಯಿಯ ಜಾತಿಯನ್ನು ನಿರ್ಮಿಸಿಕೊಂಡಿರುವನು. ಬಹು ಹಿಂದಿನಿಂದಲೂ ಅನೇಕ ಜಾತಿ ಸಸ್ಯಗಳನ್ನು ಬೆಳೆಯಿಸುತ್ತ ತನಗನುಕೂಲವಾದಂಥ ವಿಧವಿಧ ಸಸ್ಯಜಾತಿಗಳನ್ನು ನಿರ್ಮಿಸಿಕೊಂಡಿರುವನು. ಇಂದು ನಮ್ಮೆದುರಿಗಿರುವ ವಿವಿಧ ಪುಷ್ಪದ ಗಿಡಗಳೂ ತರಕಾರಿಯ ಗಿಡಗಳೂ ಇತರ ತೋಟಗದ್ದೆಗಳ ಬೆಳೆಗಳೂ ಅನೇಕ ವರ್ಷ ಮಾನವನ ಪೋಷ್ಷಿ

ಒಂದು ಜಾತಿಯಿಂದ ನಾನಾ ಜಾತಿಗಳು

ಚಾರಣೆಯಲ್ಲಿ ಬೆಳೆದುದರಿಂದಲೇ ಉಂಟಾದುದು ಎಂದು ವರ್ಣಿಸಿ, 'ಮಾನವನು ಆ ರೀತಿಯಲ್ಲಿ ಹೊಸ ಹೊಸ ಜಾತಿಗಳನ್ನು ಜಾಗ್ರತೆಯಾಗಿ ನಿರ್ಮಿಸಿಕೊಂಡರೆ ಅದೇ ಕಾರ್ಯ ಪ್ರಕೃತಿಯಲ್ಲಿ ನಿಧಾನವಾಗಿ ಸಾಗವುದು' ಎಂದು ಒತ್ತಿ ಹೇಳಿರುವನು.

ಅವನ ತತ್ವದ ಮೇಲೆ ಟೀಕೆಗಳು

ನೈಸರ್ಗಿಕ ಚುನಾವಣೆಯು ಮೂಲಕ ಜೀವಜಾತಿಗಳು ಹೊಸದಾಗಿ ಹುಟ್ಟುವುವೆಂಬುದನ್ನು ಪ್ರಕಟಿಸಿದ ನಂತರ ಆ ತತ್ವದ ಮೇಲೆ ಹಲವು ಟೀಕೆಗಳು ಬಂದಿವೆ. ಅವುಗಳಲ್ಲಿ ಮುಖ್ಯವಾದುದೆಂದರೆ 'ಡಾರ್ವಿನ್ನನ ನೈಸರ್ಗಿಕ ಚುನಾವಣೆ ಜೀವಿಗಳಲ್ಲಿ ವಿಭೇದಗಳು ಹುಟ್ಟುವ ರೀತಿಯನ್ನು ವಿವರಿಸುವುದಿಲ್ಲ' ಎಂಬುದು. ಈ ಟೀಕೆಗೆ ತನ್ನ ಗ್ರಂಥದಲ್ಲಿ ಡಾರ್ವಿನ್ನನೇ ಸಮಂಜಸ ಉತ್ತರವನ್ನು ಕೊಟ್ಟಿರುವನು; 'ಕೆಲವರು ನೈಸರ್ಗಿಕ ಚುನಾವಣೆಯೇ ವಿಭೇದಗಳನ್ನು ಹುಟ್ಟಿಸುತ್ತೆಂದು ತಿಳಿದುಕೊಂಡಿರುವರು, ಅದು ತಪ್ಪು. ವಿಭೇದಗಳು ತಾವಾಗಿಯೇ ಹುಟ್ಟಿದ ಹೊರತು ನೈಸರ್ಗಿಕ ಚುನಾವಣೆಯೇ ಆಗುವುದಿಲ್ಲ' ಎಂದು ಹೇಳಿರುವನು. ಆದರೆ ವಿಭೇದಗಳು ಹೇಗೆ ಹುಟ್ಟುವು ವೆಂಬುದನ್ನು ಅವನ ತತ್ವ ವಿಮರ್ಶಿಸಲು ಯತ್ನಿಸಲಿಲ್ಲ. ವಿಭೇದಗಳು ಹುಟ್ಟುವ ರೀತಿ, ತನಗರಿವಾಗದಿದ್ದುದರಿಂದ ಅದನ್ನು ಮುಂದಣ ವಿಜ್ಞಾನ ಜನಾಂಗ ಕಂಡುಹಿಡಿಯಬೇಕೆಂದು ತಾನೇ ಸಲಹೆ ಮಾಡಿರುವನು. ಆದುದ ರಿಂದ ಈ ಟೀಕೆ ಅನಾವಶ್ಯಕವಾದುದೆಂದು ಹೇಳಬಹುದು. 'ಜೀವಜಾತಿಗಳು ಹುಟ್ಟುವುದಕ್ಕೆ ನೈಸರ್ಗಿಕ ಚುನಾವಣೆಯೊಂದೇ ಕಾರಣವಲ್ಲ'ವೆಂಬುದು ಮತ್ತೊಂದು ಟೀಕೆ. ನಿಜ. ಡಾರ್ವಿನ್ನನೇ ಆ ವಿಚಾರವನ್ನು ಒಪ್ಪಿಕೊಳ್ಳುತ್ತಾ ನೈಸರ್ಗಿಕ ಚುನಾವಣೆ ಅಂಥ ಕಾರಣಗಳಲ್ಲೊಂದೆಂದು ಹೇಳಿರುವನು. ಹೊಸ ಹೊಸ ಸಂಶೋಧನೆಗಳು ನಡೆದಂತೆ ನೈಸರ್ಗಿಕ ಚುನಾವಣೆಯೇ ಹೊಸ ಜಾತಿಗಳ ಹುಟ್ಟಿಗೆ ಪ್ರಧಾನವಾದ ಕಾರಣವೆಂಬುದು ಸ್ಪಷ್ಟವಾಗಿ ಗೊತ್ತಾಗಿದೆ. ಈಚೆಗೆ ಮೆಂಡೆಲ್, ಡೀರೀಸ್ ಮೊದಲಾದ ವಿಜ್ಞಾನಿಗಳ ಸಂಶೋಧನೆಗಳಿಂದ ಹೊಸ ಜಾತಿಗಳ ಹುಟ್ಟಿಗೆ ಬೇರೆ ಕಾರಣಗಳು ಇವೆ ಯೆಂದು ಗೊತ್ತಾದರೂ ಡಾರ್ವಿನ್ನನ ತತ್ವ ಮಾತ್ರ ಎಂದಿಗೂ ಹುಸಿಯಾಗು ವಂತಿಲ್ಲ.

ನೈಸರ್ಗಿಕ ಚುನಾವಣೆಯ ತತ್ವವನ್ನು ಘೋಷಿಸಿದ ಡಾರ್ವಿನ್ ತನ್ನ ಗ್ರಂಥದಲ್ಲಿ ಲೈಂಗಿಕ ಚುನಾವಣೆ ಎಂಬ ಮತ್ತೊಂದು ಭಾಗವನ್ನು ಸೇರಿಸಿ ಅದರಿಂದಲೂ ಹೊಸ ಜಾತಿಗಳು ಹುಟ್ಟಲು ಅವಕಾಶವಾಗುವುದೆಂದು ತೋರಿಸಿ ಕೊಟ್ಟಿರುವನು. ಸಾಮಾನ್ಯವಾಗಿ ಉಚ್ಚವರ್ಗದ ಪ್ರಾಣಿಗಳಲ್ಲಿ ಲಿಂಗ ಪ್ರತ್ಯೇಕವಾಗಿರುತ್ತದೆ. ಗಂಡು, ಹೆಣ್ಣು ಎಂಬುದನ್ನು ಸೂಚಿಸುವ ಜನನಾಂಗಗಳನ್ನು ಪ್ರಧಾನ ಲೈಂಗಿಕ ಗುಣವೆಂದೂ, ಗಂಡಿಗೂ ಹೆಣ್ಣಿಗೂ ಇರುವ ಇತರ ಅಂಗ ವ್ಯತ್ಯಾಸಗಳನ್ನು ಗೌಣ ಲೈಂಗಿಕಗುಣಗಳೆಂದೂ ಅವನು ಕರೆದಿರುವನು. ಗಂಡು ಜಿಂಕೆಗಳ ಕವಲೊಡೆದ ಕೊಂಬೂ ಗಂಡು ಹಕ್ಕಿಗಳ ವಿವಿಧ ವರ್ಣದ ಗರಿಗಳೂ, ಮಧುರವಾದ ಕಂಠವೂ, ಹಲವು ಸಸ್ತನಿಗಳಲ್ಲಿರುವ ಸುಗಂಧ ಗ್ರಂಥಿಗಳೂ, ಗಂಡುಸಿಂಹದ ಕೇಸರವೂ, ಮಾನವನ ಮೀಸೆಯೂ ಗೌಣಲೈಂಗಿಕ ಗುಣಗಳು. ಗಂಡುಗಳ ಈ ವಿಶೇಷ ಗುಣಗಳು ಹೆಣ್ಣುಗಳ ಮನವನ್ನೊಲಿಸಿಕೊಳ್ಳುವುದಕ್ಕಾಗಿಯೇ ಇವೆಯೆಂದು ಡಾರ್ವಿನ್ ವಾದಿಸಿ, 'ಎಲ್ಲಿ ಗಂಡುಗಳು ಹೆಚ್ಚಾಗಿವೆಯೋ ಅಲ್ಲಿ ಚುನಾವಣೆಯೂಗಲೇ ಬೇಕು. ಯಾವ ಗಂಡು ಹೆಣ್ಣಿನ ಮನವನ್ನು ಅತ್ಯಂತ ಹೆಚ್ಚಾಗಿ ಒಲಿಸುವುದೋ ಅದು ಮಾತ್ರ ಆಯ್ಕೆಯಾಗಿ ಮಿಕ್ಕವು ಹಿಂದುಳಿಯಬೇಕಾಗುವುದು. ನಿಸರ್ಗದಲ್ಲಿ ಪ್ರಚಾರದಲ್ಲಿರುವ ಗಂಡುಗಳ ಆಯ್ಕೆಯನ್ನು 'ಲೈಂಗಿಕ ಚುನಾವಣೆ' ಎಂದು ಕರೆಯಬಹುದು' ಎಂಬುದಾಗಿ ತನ್ನ ತತ್ವವನ್ನು ನಿರೂಪಿಸಿರುವನು.

ಲೈಂಗಿಕ ಚುನಾವಣೆ

ನೈಸರ್ಗಿಕ ಚುನಾವಣೆಯಂತೆ ಲೈಂಗಿಕ ಚುನಾವಣೆಯಲ್ಲೂ ಗಂಡುಗಳಲ್ಲಿ ಹೆಣ್ಣನ್ನು ನಾನು ಒಲಿಸಬೇಕು, ತಾನು ಒಲಿಸಬೇಕು ಎಂಬ ಆಸೆಯಿಂದ ಸ್ಪರ್ಧೆಹುಟ್ಟಿ ಹೋರಾಟವಾಗುವುದು. ಚಿಟ್ಟೆಗಳು, ಪಕ್ಷಿಗಳು, ಜೇಡ ಮೊದಲಾದ ಪ್ರಾಣಿವರ್ಗಗಳಲ್ಲಿ ಡಾರ್ವಿನ್ ಈ ದೃಶ್ಯವನ್ನು ಅಭ್ಯಾಸಿಸಿ ವಿಶದವಾಗಿ ವಿವರಿಸಿರುವನು. ಗಂಡು ಹಕ್ಕಿಗಳು ತಮ್ಮ ಗರಿಗಳ ವೈಭವವನ್ನೂ ಕಂಠ ಮಾಧುರ್ಯವನ್ನೂ, ಗಂಡು ಚಿಟ್ಟೆಗಳು ತಮ್ಮ ರೆಕ್ಕೆಗಳ ನಯನ ಮನೋಹರ ವರ್ಣ ವೈವಿಧ್ಯವನ್ನೂ ಹೆಣ್ಣಿನ ಮುಂದೆ ಪ್ರದರ್ಶಿಸುವುವು. ಗಂಡು ಜೇಡ ಹೆಣ್ಣಿನ ಮುಂದೆ ಆವೇಶಪೂರಿತ ನರ್ತನವನ್ನೆಸಗುವುದು.

ಗಂಡುಗಳ ಪ್ರದರ್ಶನ ಸ್ಪರ್ಧೆ

ಇಂಥ ಪ್ರದರ್ಶನ ಸ್ಪರ್ಧೆಯಲ್ಲಿ ಅರ್ಥವಿಲ್ಲವೆಂದು ಯಾರೂ ಹೇಳುವಂತಿಲ್ಲ. ಹೆಣ್ಣು ಹಕ್ಕಿಗಳು ಗಂಡುಗಳ ಕಂಠಮಾಧುರ್ಯಕ್ಕೂ ಗರಿಗಳ ವೈಭವಕ್ಕೂ ಮನಸೋಲುವುವು. ಹೆಣ್ಣು ಚಿಟ್ಟೆಗಳು ಗಂಡುಗಳ ರೆಕ್ಕೆಗಳ ಸುಂದರ ಮನೋಹರ ವರ್ಣಗಳನ್ನು ಕಂಡು ಮಾರು ಹೋಗುವುವು: ಗಂಡು ಜೇಡನ ನರ್ತನ ಕೌಶಲ್ಯವನ್ನು ನೋಡಿ ಹೆಣ್ಣು ಮುಗ್ಧವಾಗಿ ಹೋಗುವುದು. ಇಂಥ ಪ್ರದರ್ಶನದ ಅರ್ಥವನ್ನು ಮತ್ತಾವ ತತ್ವವೂ ವಿವರಿಸುವುದಿಲ್ಲ. ಹಾಗೆ ಗಂಡುಗಳು ತಮ್ಮ ವೈಶಿಷ್ಟ್ಯಗಳನ್ನು ಪ್ರದರ್ಶಿಸಿದನಂತರ ಹೆಣ್ಣು ತನ್ನ ಮನಕ್ಕೆ ಯಾವ ಗಂಡು ಅತ್ಯಾನಂದವನ್ನುಂಟುಮಾಡುತ್ತದೆಯೋ ಆ ಗಂಡನ್ನು ಮಾತ್ರ ಆರಿಸಿಕೊಳ್ಳುವುದರಲ್ಲಿ ಆಶ್ಚರ್ಯವೇನಿಲ್ಲ. ಯಾವುವು ತಮ್ಮ ಗುಣಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ಪ್ರದರ್ಶಿಸಲು ಯೋಗ್ಯವೋ ಆ ಗಂಡುಗಳು ಮಾತ್ರ ಜಯ ಹೊಂದುವುವು. ಮಿಕ್ಕವು ಪರಾಜಯ ಹೊಂದುವುವು.

ಹೆಣ್ಣುಗಳು ಸೌಂದರ್ಯ ಪ್ರೇಮಿಗಳು

ಮಾನವೇತರ ಪ್ರಾಣಿವರ್ಗದಲ್ಲಿ ಹೆಣ್ಣುಗಳು ಸಾಮಾನ್ಯವಾಗಿ ತಾವೇ ಸುಂದರವಾಗಿರದಿದ್ದರೂ ಸೌಂದರ್ಯ ಪ್ರೇಮಿಗಳೆಂಬುದರಲ್ಲಿ ಅನುಮಾನವಿಲ್ಲ. ಆದುದರಿಂದಲೇ ತಮ್ಮನ್ನು ಯಾವ ಗಂಡು ಹೆಚ್ಚು ತಣಿಯಿಸುವುದೋ ಅದನ್ನು ಮಾತ್ರ ಅವು ಆರಿಸಿಕೊಳ್ಳುವುದು. ಅಂಥ ಗಂಡುಗಳು ಎಲ್ಲ ವಿಧದಲ್ಲೂ ಯೋಗ್ಯವಿದ್ದು ಹೆಣ್ಣು ಪ್ರಾಣಿಯನ್ನೂ ಸಂತತಿಯನ್ನೂ ರಕ್ಷಿಸುವ ಶಕ್ತಿಯುಳ್ಳದ್ದಾಗಿರುತ್ತವೆ. ಅಂಥ ಯೋಗ್ಯ ಗಂಡುಗಳ ಆಯ್ಕೆಯಿಂದ ಉತ್ತಮ ಪೀಳಿಗೆಯ ನಿರ್ಮಾಣವಾಗುವುದು. ಆ ಮೂಲಕವೂ ಕಾಲಕ್ರಮದಲ್ಲಿ ಹೊಸ ಜಾತಿಗಳು ಹುಟ್ಟುವುವು.

ಟೀಕೆಗಳು

ಲೈಂಗಿಕ ಚುನಾವಣೆ ನೈಸರ್ಗಿಕ ಚುನಾವಣೆಯ ಒಂದು ಅಂಗ ಮಾತ್ರವೆಂದೂ ಅದರ ನಿರೂಪಣೆ ಅನಾವಶ್ಯಕವೆಂದೂ ಹಲವು ಟೀಕಾಕಾರರು ಹೇಳುವರು. ಮತ್ತೆ ಕೆಲವರು ಲೈಂಗಿಕ ಚುನಾವಣೆಯ ಸತ್ಯಾಂಶದಲ್ಲೇ ಅನುಮಾನಿಸುವರು. ಆದರೆ ಆಧುನಿಕ ಸಂಶೋಧನೆಗಳಲ್ಲಿ ಹಲವು ಡಾರ್ವಿನ್ನನ ತತ್ವಕ್ಕೆ ಬೆಂಬಲ ಕೊಡುತ್ತವೆ. ಯಾವ ಗಂಡುಗಳು ಲೈಂಗಿಕ ಗುಣ

ಗಳನ್ನು ಯಶಸ್ವಿಯಾಗಿ ಪ್ರದರ್ಶಿಸಲು ಯೋಗ್ಯವಾಗಿವೆಯೋ ಅವು ದೈಹಿಕ ಶಕ್ತಿಯಲ್ಲೂ ಉತ್ತಮವಾಗಿರುತ್ತವೆ, ಎಂಬ ಅಂಶ ಈಚೆಗೆ ಸ್ಥಿರಪಟ್ಟಿದೆ. ಆ ತತ್ವದ - ಪ್ರತ್ಯೇಕ ನಿರೂಪಣೆಯಿಂದೇನೂ ನಷ್ಟವಾದಂತೆ ತೋರುವುದಿಲ್ಲ. ಹಾಗೆ ಡಾರ್ವಿನ್ ನಿರೂಪಿಸಲು ಯತ್ನಿಸಿದುದು ಅವನಿಗೇನೂ ಕಳಂಕವಲ್ಲ. ಅದರ ಬದಲು ಅವನ ಸೂಕ್ಷ್ಮಪರಿಶೀಲನಾಶಕ್ತಿಯನ್ನೂ ಪ್ರತಿಭಾಶಕ್ತಿಯನ್ನೂ ತೋರಿಸುತ್ತದೆ.

ಗ್ರಂಥದ ಶೈಲಿಯೂ ಅವನ ಮನಸ್ಸಿನಂತೆ ಸರಳವಾದುದು. ಅಲ್ಲಲ್ಲಿ ಆವೇಶ ವೈಭವಗಳಿಂದ ಶೈಲಿ ಕಾವ್ಯಶಿಖರಕ್ಕೇರಿರುವುದೂ ಉಂಟು. ಆ ಗ್ರಂಥದಲ್ಲಿ ಪ್ರತಿಪಾದಿತವಾಗಿದ್ದ ವಿಕಾಸವಾದವನ್ನೂ ಅದರಿಂದ ಜನ

**ಯುಗಪ್ರವರ್ತಕ ಗ್ರಂಥ**

ಜೀವನದಲ್ಲುಂಟಾದ ವಿಚಾರಕ್ರಾಂತಿಯನ್ನೂ ಮುಂದಣ ಅಧ್ಯಾಯದಲ್ಲಿ ವಿವರಿಸುತ್ತೇವೆ. ಗ್ರಂಥ ಪ್ರಕಟವಾದ ದಿನವೇ ಮುದ್ರಿಸಿದ ಸಹಸ್ರಾರು ಪ್ರತಿಗಳೂ ಮಾರಾಟವಾಗಿ ಹೋದುವು. ಇದೊಂದೇ ಆ ಗ್ರಂಥದ ಮಹತ್ವವನ್ನು ಸಾರುವುದು. ಆರು ವಾರಗಳೊಳಗೆ ಮತ್ತೊಂದು ಮುದ್ರಣವಾಯಿತು. ಅವನ ಜೀವಮಾನ ಕಾಲದಲ್ಲೇ ಆ ಗ್ರಂಥ ಅನೇಕ ಮುದ್ರಣಗಳನ್ನು ಕಂಡಿತು. ಒಂದೊಂದು ಮುದ್ರಣಕ್ಕೂ ಅವನೇ ಗ್ರಂಥವನ್ನು ಪರಿಷ್ಕರಿಸಿ, ಆವಶ್ಯಕವಾದ ಹೆಚ್ಚು ವಿಷಯಗಳನ್ನು ಸೇರಿಸಿ ಸಿದ್ಧಪಡಿಸುತ್ತಿದ್ದನು. ಅಮೆರಿಕದಲ್ಲೂ ಅಧಿಕವಾಗಿ ಮಾರಾಟವಾಯಿತು. ಜರ್ಮನ್, ಫ್ರೆಂಚ್, ಡಚ್, ಸ್ವೀಡನ್, ಹಿಂದುಸ್ಥಾನಿ, ರಷ್ಯ, ಜಪಾನ್ ಮೊದಲಾದ ಜಗತ್ತಿನ ಮುಖ್ಯ ಭಾಷೆಗಳಿಗೂ ಪರಿವರ್ತನೆಯಾಗಿ ಡಾರ್ವಿನ್ನನ ಕೀರ್ತಿ ಎಲ್ಲ ಕಡೆಯೂ ಹರಡಿತು. ಜೀವಜಾತಿಯ ಹುಟ್ಟು ಗ್ರಂಥ ಜಗತ್ತಿನ ಮಹಾಕೃತಿಗಳಲ್ಲೊಂದಾಯಿತು.

# ೬. ವಿಕಸನ ದರ್ಶನ

ನಮ್ಮೆದುರಿಗೆ ಕಾಣುವ ವಿಚಿತ್ರವೂ ಸುಂದರವೂ ಆದ ಈ ಜಗತ್ತು ಇಂದಿನ ಸ್ಥಿತಿಗೆ ಬಂದ ರೀತಿಯನ್ನು ವಿಚಾರಪೂರ್ವಕವಾಗಿಯೂ ವಿಜ್ಞಾನ ಸಮ್ಮತವಾಗಿಯೂ ವಿವರಿಸುವ ಶಾಸ್ತ್ರಕ್ಕೆ ವಿಕಾಸ ತತ್ವವೆನ್ನುತ್ತೇವೆ.

**ವಿಕಾಸತತ್ವ**

ಸಣ್ಣ ರೂಪದಿಂದ ದೊಡ್ಡ ರೂಪಕ್ಕೆ ಬರುವುದಕ್ಕೆ, ಕೆಳ ಮಟ್ಟದಿಂದ ಮೇಲ್ಮಟ್ಟಕ್ಕೇರುವುದಕ್ಕೆ "ವಿಕಸನ" ವೆಂದು ಹೆಸರು. ಹಿಂದಿನದು ವಿಕಸಿಸಿದುದರಿಂದ ಇಂದಿನದು ಸಿದ್ಧಿಸಿತು ; ಇಂದಿನದು ವಿಕಸಿಸಿದಂತೆ ಮುಂದಿನದು ಸಿದ್ಧಿಸುವುದು. ಸಾಸಿವೆಯೊಂದು ಸಣ್ಣದೂ ಸರಳವೂ ಆದ ರೂಪಿನದು. ಅದು ಮೊಳೆತಂತೆ ದೊಡ್ಡದೂ ಸಂಕೀರ್ಣವೂ ಆದ ರೂಪನ್ನು ತಾಳುವುದು. ಹಾಗೆಯೇ ಇಡೀ ಸೃಷ್ಟಿಯೇ ಮೊದಲು ಸರಳ ರೂಪಿನದಾಗಿದ್ದು ಕ್ರಮಕ್ರಮವಾಗಿ ಸಂಕೀರ್ಣತೆಗೇರಿತು. "ಸೃಷ್ಟಿಯ ಆದಿಯಲ್ಲಿ ಈ ದಿನವಿರುವ ಬೇರೆಬೇರೆ ಗ್ರಹ ತಾರಾಮಂಡಲಗಳಿರಲಿಲ್ಲ. ಕುದಿಯುತ್ತಿದ್ದ ತೇಜೋಮೇಘವೊಂದೇ ಇದ್ದಿತು. ಕ್ರಮೇಣ ಆ ಕುದಿಯುವ ಮೇಘದಿಂದ ಸಿಡಿದ ಪ್ರತ್ಯೇಕವಾದ ಭಾಗಗಳು ಈ ದಿನದ ಬೇರೆಬೇರೆ ಗ್ರಹ ತಾರಕೆಗಳಾಗಿವೆ" ಎಂಬ ವಿಶ್ವದ ವಿಕಾಸಕ್ರಮವನ್ನು ಹರ್ಬರ್ಟ್ ಸ್ಪೆನ್ಸರ್ ಮೊದಲಾದವರು ವಿವರಿಸಿರುವರು. ಆದಿಯ ತೇಜೋಮೇಘದಿಂದ ಸಿಡಿದು ಭೂಮಿ ಜನ್ಮವೆತ್ತಿ ಆರಿದ ಬಹು ಕಾಲದಮೇಲೆ ಜೀವೋತ್ಪತ್ತಿಯಾಗಿರಬೇಕು. ನಮ್ಮೆದುರಿಗೆ ಈ ದಿನ ಕಾಣುವ ವಿಶಾಲ ಜೀವಪ್ರಪಂಚ ಸಿದ್ಧಿಸಿದ ರೀತಿಯನ್ನು ಡಾರ್ವಿನ್ ತನ್ನ ಜೀವ ಜಾತಿಗಳ ಹುಟ್ಟು ಗ್ರಂಥದ ಮೂಲಕ ಜನಜೀವನದ ಮುಂದಿಟ್ಟನು.

ಡಾರ್ವಿನ್ನನ ವಿಕಾಸ ತತ್ವವನ್ನು ಬಿಟ್ಟರೆ ಮತ್ತಾವುದೂ ಈ ಸಚೇತನ ಜಗತ್ತಿನ ಇತಿಹಾಸವನ್ನು ಸಮರ್ಪಕವಾಗಿ ವಿವರಿಸಲಾರದು. ಕ್ರೈಸ್ತಮತದ

**ಬೈಬಲ್ಲಿಗೂ ವಿಕಾಸವಾದಕ್ಕೂ ಇರುವ ಭಿನ್ನಾಭಿಪ್ರಾಯ**

ಧರ್ಮಗ್ರಂಥವಾದ ಬೈಬಲ್ಲಿನಲ್ಲಿ ಸೃಷ್ಟಿಕ್ರಮವನ್ನು ಕುರಿತು 'ದೇವರು ಇಡೀ ಜೀವ ಪ್ರಪಂಚವನ್ನೆಲ್ಲ ಒಂದು ವಾರದ ಕಾಲದಲ್ಲಿ ಸೃಷ್ಟಿಸಿ ಮುಗಿಸಿದನು; ಆದಿಯಲ್ಲಿ ಪ್ರತಿಯೊಂದು ಪ್ರಾಣಿಯೂ ಇಂದಿನ ಸ್ವರೂಪದಲ್ಲೇ ಪ್ರತ್ಯೇಕವಾಗಿ ಸೃಷ್ಟಿಯಾ

ಯಿತು; ಮುಂದೆ ಎಂದೆಂದಿಗೂ ಅದೇ ಸ್ವರೂಪದಲ್ಲುಳಿಯುವುದು. ಮೊದಲು ಸಸ್ಯಗಳನ್ನೂ ಅನಂತರ ಜಡವಸ್ತುಗಳಿಂದ ಪಶುಪಕ್ಷಿಗಳನ್ನೂ ನಿರ್ಮಿಸಿ, ಕೊನೆಗೆ ಮಾನವನನ್ನು ತನ್ನ ಪ್ರತಿಬಿಂಬದಂತೆ ವಿಶೇಷ ರೀತಿಯಲ್ಲಿ ಸೃಷ್ಟಿಸಿ, ಜೀವಕಳೆಯಿತ್ತನು. ಮಾನವನಿಗೂ ಇತರ ಜೀವಿಗಳಿಗೂ ಯಾವ ಸಂಬಂಧವೂ ಇಲ್ಲ; ಅವನದೇ ಪ್ರತ್ಯೇಕವೂ ಪವಿತ್ರವೂ ಆದ ಸೃಷ್ಟಿ' ಎಂಬ ಅಭಿಪ್ರಾಯವನ್ನು ಹೇಳುತ್ತದೆ. 'ಸೃಷ್ಟಿಯ ಆದಿಯಲ್ಲಿ ಸಣ್ಣವೂ ಸರಳವೂ ಆದ ಜೀವಿಗಳು ಮಾತ್ರ ಇದ್ದುವು; ಆ ಜೀವಿಗಳು ಕಾಲಕ್ರಮದಲ್ಲಿ ಪರಿಣಾಮಗೊಳ್ಳುತ್ತಾ ಬಂದು ಇಂದಿನ ವಿವಿಧ ಜಾತಿಯ ಸಸ್ಯಗಳೂ ಪ್ರಾಣಿಗಳೂ ಕಾಣಿಸಿಕೊಂಡುವು; ಸೃಷ್ಟಿಯಾದಾಗ ಅವು ಈ ದಿನದ ಸ್ವರೂಪದಲ್ಲಿಯೇ ಸೃಷ್ಟಿಯಾಗಲಿಲ್ಲ; ಮುಂದೆ ಇಂದಿನ ಸ್ಥಿತಿಯಲ್ಲಿ ಉಳಿಯುವುದಿಲ್ಲ; ಬದಲಾಯಿಸುವುದು ಜೀವಿಗಳ ಸ್ವಭಾವ. ಒಂದು ಕೆಳವರ್ಗದ ಜೀವಿಯಿಂದಲೇ ಮೇಲುವರ್ಗದ ಜೀವಿ ಪರಿಣಾಮಗೊಂಡಿರಬೇಕು; ಆದುದರಿಂದ ಎಲ್ಲ ಜೀವಿಗಳಿಗೂ ಒಂದು ವಿಧವಾದ ಬಾಂಧವ್ಯವುಂಟು; ಮಾನವನೂ ಮಿಕ್ಕೆಲ್ಲ ಪ್ರಾಣಿಗಳ ಮಜಲುಗಳನ್ನೂ ದಾಟಿಕೊಂಡು ಬಂದೇ ತನ್ನೀ ಸ್ಥಿತಿಯನ್ನು ಸೇರಿರುವನು. ಅವನದೇನೂ ವಿಶೇಷ ಸೃಷ್ಟಿಯಲ್ಲ' ಎಂಬುದಾಗಿ 'ಜೀವಜಾತಿಗಳ ಹುಟ್ಟು' ಗ್ರಂಥದಲ್ಲಿ ಪ್ರತಿಪಾದಿತವಾಗಿದ್ದ ವಿಕಾಸ ತತ್ವ ಸಾರಿತು. ಸಾಮಾನ್ಯ ಜನರು ಬೈಬಲ್ಲಿನಲ್ಲಿ ಹೇಳಿರುವುದನ್ನು ವೇದವಾಕ್ಯದಂತೆ ಅಂದಿನವರೆಗೂ ನಂಬಿದ್ದರು; ಡಾರ್ವಿನ್ ತನ್ನ ವಿಕಾಸವಾದವನ್ನು ಪ್ರಕಟಿಸಿ, ವಿಚಾರ ಕ್ರಾಂತಿಯ ಕೈದೀವಟಿಗೆಯನ್ನು ಎತ್ತಿ ಹಿಡಿದೊಡನೆಯೇ ಬೈಬಲ್ಲಿನ ಆ ವಾಕ್ಯಗಳು ನಿಜವೇ ಎಂಬುದನ್ನು ಯೋಚಿಸಲಾರಂಭಿಸಿದರು.

ವಿಕಾಸವಾದ ಡಾರ್ವಿನ್ನನ ಕಾಲಕ್ಕೆ ಹೊಸದೇನೂ ಅಲ್ಲ. ಸುಮಾರು ಎರಡು ಸಹಸ್ರ ವರ್ಷಗಳ ಹಿಂದಿನಿಂದಲೂ 'ಸೃಷ್ಟಿ ವಿಕಾಸಾತ್ಮಕವಾದುದು.' ಎಂಬ ವಿಷಯವನ್ನು ಅನೇಕರು ಪ್ರತಿಪಾದಿಸುತ್ತಲೇ ಬಂದಿದ್ದಾರೆ. ಕ್ರಿ. ಪೂ. ೪೯೦ ರಿಂದ ೪೩೦ ರವರೆಗೂ ಬದುಕಿದ್ದ ಎಂಪೆಡಾಕ್ಲೀಸ್ ಎಂಬ ಗ್ರೀಸಿನ ದಾರ್ಶನಿಕನು ಸೃಷ್ಟಿ ವಿಕಾಸವಾದುದೆಂದು ತಿಳಿದುಕೊಂಡಿದ್ದನು. ಕ್ರಿ. ಪೂ. ೯೮ ರಿಂದ ೫೫ ರವರೆಗೂ ಬದುಕಿದ್ದ ಲೂಕ್ರೀಷಿಯಸ್ ಎಂಬ ರೋಮಿನ ಕವಿ ತನ್ನ ಕೃತಿಗಳಲ್ಲಿ

ವಿಕಾಸವಾದ ಬಲುಹಿಂದಿನದು

ಅದೇ ಭಾವನೆಯನ್ನು ಹೊರಗೆಡಹಿರುವನು. ಹ್ಯೂವರ್ ಮತ್ತು ಕ್ಯಾಂಟ್ ಮೊದಲಾದವರೂ ಆ ಅಭಿಪ್ರಾಯವನ್ನೇ ಪ್ರತಿಪಾದಿಸಿದ್ದರು. ಕ್ರಿ. ಶ. ೧೪೫೨ ರಿಂದ ೧೫೧೯ರವರೆಗೆ ಬದುಕಿದ್ದ ಲಿಯನಾರ್ಡೊ ಎಂಬ ಇಟಲಿಯ ಪಂಡಿತನೊಬ್ಬನು ಭೂಮಿಯಲ್ಲಿ ಹೂತುಹೋಗಿದ್ದ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳನ್ನು ಪರಿಶೀಲಿಸಿ ಅಂಥ ಪ್ರಾಚೀನ ಪ್ರಾಣಿಗಳಿಂದ ಕ್ರಮೇಣ ಬೇರೆಬೇರೆ ಪ್ರಾಣಿಗಳು ಹುಟ್ಟಿರಬಹುದೆಂಬ ವಿಕಾಸ ದೃಷ್ಟಿಯನ್ನು ಜನ ಜೀವನದ ಮುಂದಿಟ್ಟನು. ಆದರೆ ಅವನ ಸಂಶೋಧನೆಗೆ ಮನಗೊಟ್ಟು ವಿಮರ್ಶಿಸುವಷ್ಟು ವಿಜ್ಞಾನಪ್ರಪಂಚ ಮುಂದುವರಿದಿರಲಿಲ್ಲ. ಹೀಗೆ ಹೊರನೋಟಕ್ಕೆ ವಿಕಾಸವಾದ ಆಧುನಿಕವಾಗಿ ಕಂಡುಬಂದರೂ ಅದು ಅತಿ ಪುರಾತನವಾದುದು. ಮಾನವನ ಮನಸ್ಸಿನಲ್ಲಿ ವಿಚಾರ ಬುದ್ಧಿ ಅಂಕುರಿಸಿದಂದಿನಿಂದಲೂ ಆ ದೃಷ್ಟಿಯ ಭಾವನೆಗಳು ಜನಜೀವನದಲ್ಲಿ ಏಳುತ್ತಲೇ ಬಂದಿವೆ; ಆದರೆ ಆ ವಾದ ಕ್ರಮವಾದ ತಳಹದಿಯ ಮೇಲೆ ಬೆಳೆದು ವಿಜ್ಞಾನ ಶಾಸ್ತ್ರದಲ್ಲಿ ಒಂದು ಸ್ಥಾನವನ್ನು ಪಡೆಯುವುದಕ್ಕೆ ಮೊದಲಾದುದು ಕೇವಲ ನೂರು ವರ್ಷಗಳಿಂದೀಚೆಗೆ. ಹಿಂದೆ ಜನಜೀವನದಲ್ಲಿದ್ದ ಆ ಭಾವನೆ ಅಷ್ಟಾಗಿ ಬೆಳೆಯದಿದ್ದುದಕ್ಕೆ ಅನೇಕ ಕಾರಣಗಳಿವೆ; ಸಸ್ಯಗಳ ಮತ್ತು ಪ್ರಾಣಿಗಳ ಶರೀರಶಾಸ್ತ್ರ ಇನ್ನೂ ಶೈಶವಾವಸ್ಥೆಯಲ್ಲಿತ್ತು; ಮತವಾದಿಗಳು ವಿಕಾಸವಾದವನ್ನು ಖಂಡಿಸಿ, ಅದು ನಾಸ್ತಿಕ ದೃಷ್ಟಿಯೆಂದು ಸಾರಿದರು; ಹಾಗೆ ಒಬ್ಬಿಬ್ಬರು ಧೈರ್ಯಮಾಡಿ ಆ ವಾದವನ್ನು ಹರಡಲು ಯತ್ನಿಸಿದರೆ ಮತದಿಂದ ಬಹಿಷ್ಕಾರ ಬೀಳುತ್ತಿತ್ತು; ಜೊತೆಗೆ ವಿಚಾರಪರರು ತಿಳಿದುಕೊಂಡ ವಿಷಯವನ್ನು ಪ್ರಚಾರ ಮಾಡಲು ಆವಶ್ಯಕವಾದ ಸೌಕರ್ಯಗಳೂ ಹುಟ್ಟಿಕೊಂಡಿರಲಿಲ್ಲ ಬೈಬಲ್ಲಿನಲ್ಲಿ ಹೇಳಿರುವ ಜೀವಿಗಳ ಪ್ರತ್ಯೇಕ ಸೃಷ್ಟಿಯೂ ಮಾನವನ ವಿಶೇಷ ಸೃಷ್ಟಿಯೂ ಕಟ್ಟುಕತೆಯೆಂತಿರುವುದನ್ನು ಕ್ರಮಕ್ರಮವಾಗಿ ವಿಚಾರಪರರು ಗ್ರಹಿಸಲಾರಂಭಿಸಿದ್ದರೂ ಮತವಾದಿಗಳ ಬಹಿಷ್ಕಾರ ಭೀತಿಯಿಂದ ಬೈಬಲ್ಲಿನಲ್ಲಿ ಹೇಳಿರುವುದನ್ನು ಪ್ರತಿಭಟಿಸಲು ಯತ್ನಿಸುವುದು ಸಾಹಸದ ಕೆಲಸವಾಗಿತ್ತು; ಮಾನವನ ಮತ್ತು ಇತರ ಕೆಳವರ್ಗದ ಪ್ರಾಣಿಗಳ ಅಂಗರಚನೆಯಲ್ಲಿ ಕಂಡುಬರುವ ಸಾಮ್ಯವೇ ಅವುಗಳಿಗಿರುವ ಸಂಬಂಧವನ್ನು ಘೋಷಿಸುತ್ತಿದ್ದರೂ ಅವನದು ವಿಶೇಷ ಸೃಷ್ಟಿಯೇ ಎಂದು ಒಪ್ಪಿ ಕೊಡಬೇಕಾಗಿತ್ತು. ಆದರೆ ಜನಮನದಲ್ಲಿ ವಿಚಾರ

ದೃಷ್ಟಿ ಬೆಳೆದಂತೆ ಧೈರ್ಯವೂ ಹೆಚ್ಚುತ್ತಾ ಬಂದಿತು. ಸತ್ಯಾಂಶ ಪರಿಶೀಲನೆಯು ತನ್ನ ಅಮೃತಾತ್ಮನನ್ನು ಯಾವುದು ಯುಗಯುಗಗಳಿಂದ ಮೆಟ್ಟಿ ನಿಂತಿತ್ತೋ ಆ ಮೌಢ್ಯದ ಸಂಕಲೆಯನ್ನು ಹರಿದು ಮಾನವನು ವಿಚಾರಕ್ರಾಂತಿಯ ಮೆಟ್ಟಿಲನ್ನು ಹತ್ತಲು ಯತ್ನಿಸಿದನು.

**ಲಮಾರ್ಕ್, ಬಫನ್ ಇರಾಸ್ಮಸ್ ಮೊದಲಾದವರು**

ಲಿಯನಾರ್ಡೋವಿನನಂತರ ನೂರು ಶತಮಾನಗಳ ವರೆಗೂ ವಿಕಾಸವಾದ ನಿಂತಲ್ಲಿಯೇ ನಿಂತು ಬಿಟ್ಟಿತು. ಹತ್ತೊಂಭತ್ತನೆಯ ಶತಮಾನದ ಆದಿಯಲ್ಲಿ (೧೭೪೪-೧೮೨೯) ಫ್ರಾನ್ಸಿನ ವಿಖ್ಯಾತ ವಿಜ್ಞಾನಿಯಾದ ಲಮಾರ್ಕನು ವಿಕಾಸವಾದವನ್ನು ಕ್ರಮವಾದ ತಳಹದಿಯೊಂದರ ಮೇಲೆ ಮತ್ತೆ ಜನಜೀವನದ ಮುಂದಿಟ್ಟನು. 'ಜೀವಿಗಳು ವಾತಾವರಣದ ಏರಿಳಿತಗಳೊಡನೆ ಹೊಂದಿಕೊಂಡು ಸರಿಯಾಗಿ ಬಾಳಲು ತಮ್ಮ ಅಂಗರಚನೆಯಲ್ಲಿ ಆವಶ್ಯಕವಾದ ವಿಭೇದಗಳನ್ನು ಹೊಂದುತ್ತಲೇ ಇರುತ್ತವೆ. ಹಾಗೆ ಉಂಟಾದ ವಿಭೇದಗಳು ಆ ಜೀವಿಗಳ ಸಂತತಿಯಲ್ಲೂ ವಂಶಗತವಾಗಿ ಬರುತ್ತವೆ ಹಿಂದಿನ ಪೀಳಿಗೆಯ ಜೀವಿಗಳಂತೆ ಅವೂ ತಮ್ಮ ಜೀವನದಲ್ಲಿ ಆವಶ್ಯಕವಾದ ವಿಭೇದಗಳನ್ನು ಹೊಂದುತ್ತವೆ. ಆ ಮೂಲಕ ಕ್ರಮೇಣ ಹೊಸ ಜಾತಿಗಳೇ ಹುಟ್ಟಲು ಅವಕಾಶವಾಗಿ ಜೀವ ವರ್ಗದ ವಿಕಾಸವಾಗುವುದು' ಎಂಬುದಾಗಿ ಪ್ರತಿಪಾದಿಸಿದನು. ಹಿಂದಿನ ಅನೇಕ ವಿಕಾಸವಾದಿಗಳಂತೆ ಲಮಾರ್ಕನೂ ತನ್ನ ವಾದವನ್ನು ಜನ ಸಾಮಾನ್ಯ ಒಪ್ಪುವಂತೆ ಅಂಕಿಅಂಶಗಳ ಸಹಾಯದಿಂದ ಸಿದ್ಧಾಂತಪಡಿಸಲಿಲ್ಲ. ಆದರೂ ವಿಜ್ಞಾನ ಪ್ರಪಂಚದಲ್ಲಿ ಲಮಾರ್ಕನ ವಿಕಾಸವಾದ ಹೊಸ ಬೆಳಕೊಂದನ್ನು ಹರಡಿ ವಿಚಾರದೃಷ್ಟಿಯನ್ನು ಪ್ರಚೋದಿಸಿತು; ಬೈಬಲ್ಲಿನಲ್ಲಿ ಹೇಳಿರುವುದನ್ನು ವೇದವಾಕ್ಯವೆಂದು ನಂಬಿ, ಕುಳಿತಿದ್ದ ಜನಸಾಮಾನ್ಯವನ್ನು ಮೌಢ್ಯದಿಂದ ಎಚ್ಚರಿಸಲು ನೆರವಾಯಿತು. ೧೭೦೭ರಿಂದ ೧೭೮೮ರ ವರೆಗೂ ಬದುಕಿದ್ದ ಬಫನ್ ಎಂಬ ಮತ್ತೊಬ್ಬ ಫ್ರೆಂಚ್ ವಿಜ್ಞಾನಿ 'ಇಂದಿನ ಜೀವಿಗಳು ಹಿಂದಿನವುಗಳಿಂದ ಪರಿಣಾಮವಾದುವು; ವಾತಾವರಣದಲ್ಲಾಗುವ ಬದಲಾವಣೆಯೇ ಅದಕ್ಕೆ ಮೂಲ ಕಾರಣ' ಎಂದು ತಿಳಿದುಕೊಂಡಿದ್ದರೂ, ಮತಾನುಯಾಯಿಗಳಿಗೆ ಬೆದರಿ ತನ್ನ ತತ್ವವನ್ನು ಆಗ ಪ್ರಕಟಿಸಲೇ ಇಲ್ಲ ಲಮಾರ್ಕನಿಗೂ ಮುಂದೆ

ಇರಾಸ್ಮಸ್ ಡಾರ್ವಿನ್ ಅದೇ ತತ್ತ್ವವನ್ನೇ ಪ್ರತಿಪಾದಿಸಿದ್ದನು. ೧೭೭೬ರಿಂದ ೧೮೩೭ರವರೆಗೂ ಬದುಕಿದ್ದ ಟ್ರೆವೈರಾನಸ್ ಎಂಬ ವಿಜ್ಞಾನಿಯೂ ಬಫನ್ನನ ತತ್ತ್ವವನ್ನೇ ಪ್ರತಿಪಾದಿಸಿದ್ದನು. ಜರ್ಮನಿಯ ವಿಜ್ಞಾನ ಕವಿಯಾದ ಗಯಟೆಯೂ 'ಜೀವಿಗಳೊಳಗೇ ವಿಕಸಿಸುವ ಮಹಾಗುಣವುಂಟು' ಎಂಬುದಾಗಿ ಹೇಳಿ ವಿಕಾಸದೃಷ್ಟಿಯನ್ನು ಪ್ರತಿಪಾದಿಸಿದ್ದನು.

ಹಿಂದಿನವರಾರೂ ವಿಕಾಸವಾದವನ್ನು ಪ್ರಚಾರ ಮಾಡಿ ಜಯಶಾಲಿಗಳಾಗಲಿಲ್ಲ. ಏಕೆಂದರೆ, ಅವರು ಆವಶ್ಯಕವಾದ ಸಂಶೋಧನೆಗಳನ್ನು ನಡೆಯಿಸಿ ಅಂಕಿಅಂಶಗಳನ್ನೊದಗಿಸಿಕೊಂಡು ಆ ಮೂಲಕ ಶಾಸ್ತ್ರೀಯವಾಗಿ ಆ
ಡಾರ್ವಿನ್ ಲಮಾರ್ಕ ವಾದವನ್ನು ಸಿದ್ಧಾಂತಪಡಿಸಲಿಲ್ಲ. ಆ ಕಾರ್ಯ
ನಿಗೂ ಮಾಲ್ತಸ್ಸ ಡಾರ್ವಿನ್ನನ ಮೇಲೆ ಬಿತ್ತು. ಹಿಂದಿನ ವಿಕಾಸವಾದಿ
ನಿಗೂ ಋಣಿ ಗಳಲ್ಲಿ ಡಾರ್ವಿನ್ನನ ವಿಚಾರದೃಷ್ಟಿಯನ್ನು ಯಾರು
ಯಾರು ಎಷ್ಟೆಷ್ಟು ಪೋಷಿಸಿರುವರೆಂದು ಹೇಳುವುದು ಕಷ್ಟವಾದರೂ ಲಮಾರ್ಕನು ಮಾತ್ರ ಅವನ ಮನಸ್ಸಿನ ಮೇಲೆ ತನ್ನ ಕೈವಾಡವನ್ನು ಬೀರಿರುವನೆಂದು ನಿಸ್ಸಂದೇಹವಾಗಿ ಹೇಳಬಹುದು. ಆದುದರಿಂದಲೇ ಡಾರ್ವಿನ್ ಲಮಾರ್ಕನಿಂದ ವಿಜ್ಞಾನ ಪ್ರಪಂಚಕ್ಕಾಗಿರುವ ಸೇವೆಯನ್ನು ಪ್ರಶಂಸಿಸಿರುವುದು. ಆದರೆ ಲಮಾರ್ಕನ ತತ್ತ್ವವಿಕಾಸವಾದವನ್ನು ಪೂರ್ಣವಾಗಿ ವಿವರಿಸಲಾರದೆಂಬುದು ಅವನಿಗೆ ಗೊತ್ತು. ವಾತಾವರಣದೊಡನೆ ಹೊಂದಿಕೊಳ್ಳುವಾಗ ಜೀವಿಗಳ ಅಂಗರಚನೆ ಮಾರ್ಪಾಡಾಗುವುದೆಂಬ ಲಮಾರ್ಕನ ತತ್ತ್ವದ ಒಂದು ಭಾಗವನ್ನು ಅವನು ತನ್ನ ಮಹಾಕಾರ್ಯಕ್ಕುಪಯೋಗಿಸಿಕೊಂಡನೆನ್ನಬಹುದು. ಆದರೆ ಅದೊಂದೇ ಅವನನ್ನು ತೃಪ್ತಿಪಡಿಸಲಿಲ್ಲ. ವಾತಾವರಣದ ಕೈವಾಡ ಜೀವಿಗಳ ವಿಕಸನಕ್ಕೆ ಎಷ್ಟು ನೆರವಾಗುವುದೋ ಅದಕ್ಕೂ ಮಿಗಿಲಾಗಿ ಪ್ರಕೃತಿಯಲ್ಲಿ ಪ್ರಚಾರದಲ್ಲಿರುವ ನೈಸರ್ಗಿಕ ಚುನಾವಣೆ ಕಾರಣವೆಂದು ಡಾರ್ವಿನ್ನನ ಮತ. ಮಾಲ್ತಸ್ಸನ ಗ್ರಂಥದಿಂದ ಈ ಜ್ಞಾನ ಅವನ ಮನಸ್ಸಿನಲ್ಲಿ ಹೇಗೆ ಅಂಕುರವಾಯಿತೆಂಬುದನ್ನು ಹಿಂದೆ ವಿವರಿಸಿರುತ್ತೇವೆ. ಆದುದರಿಂದ ಹಿಂದಿನವರಲ್ಲಿ ಲಮಾರ್ಕನೂ, ಮಾಲ್ತಸ್ಸನೂ ಡಾರ್ವಿನ್ನನ ವಿಕಾಸದೃಷ್ಟಿಯನ್ನು ಪೋಷಿಸಿದ್ದರು.

ಹಿಂದೆ ಹೇಳಿರುವಂತೆ ಡಾರ್ವಿನ್ನನಿಗೆ ವಿಕಾಸವಾದದಲ್ಲಿ ನಂಬಿಕೆ ರಕ್ತಗತವಾಗಿ ಬಂದಿತ್ತೆನ್ನಬಹುದು. ತನ್ನ ಪ್ರತಿಭಾಶಕ್ತಿಯಿಂದ ಜೀವ ವರ್ಗದ ವಿಕಸನದ ರೂಪುರೇಖೆಗಳನ್ನರಿತುಕೊಂಡನು. ಹಿಂದಿನವರಂತೆ ಅದನ್ನೊಂದು ವಾದವಾಗಿ ಬಿಡದೆ ಪ್ರಯೋಗ ಫಲಿತಾಂಶಗಳಿಂದ ಪರಿಷ್ಕರಿಸಿ ತತ್ವರೂಪಕ್ಕೆ ತರಲು ಸುಮಾರು ೨೨ ವರ್ಷಗಳ ತನಕ ಒಂದೇ ಸಮನೆ ದುಡಿದನೆನ್ನಬಹುದು. ಸಸ್ಯಗಳನ್ನೂ ಪ್ರಾಣಿಗಳನ್ನೂ ಬೆಳೆಯಿಸಿ, ಅವುಗಳಲ್ಲಿ ಕಂಡುಬರುವ ವಿಕಸನವನ್ನು ಪರಿಚಯ ಮಾಡಿಕೊಂಡನು. ತಾನು ಪ್ರಾಯೋಗಿಕವಾಗಿ ಪಡೆದ ಆ ಜ್ಞಾನದಿಂದ ಅನಂತಕಾಲದಿಂದಲೂ ಪ್ರಕೃತಿಯಲ್ಲಿ ನಡೆಯುತ್ತಿರುವ ಮಹಾವಿಕಸನವನ್ನು ಗ್ರಹಿಸಿದನು.

ಡಾರ್ವಿನ್ ಹುಟ್ಟು ವಿಕಾಸವಾದಿ

ಜೀವಜಾತಿಗಳ ಹುಟ್ಟು ಗ್ರಂಥದಲ್ಲಿ ಪ್ರತಿಪಾದಿಸಿರುವ ಡಾರ್ವಿನ್ನನ ವಿಕಾಸ ತತ್ವವನ್ನು ಸೂಕ್ಷ್ಮವಾಗಿ ಇಲ್ಲಿ ವಿವರಿಸಬಹುದು; ಪ್ರಕೃತಿಯಲ್ಲಿ ವಿಕಸನ ಕಾರ್ಯ ಅತಿ ಪ್ರಾಚೀನಕಾಲದಿಂದಲೂ ನಡೆಯುತ್ತಿದೆ. ಮುಂದೆ ಎಂದೆಂದಿಗೂ ನಡೆಯತಕ್ಕತಕ್ಕುದು. ಪ್ರತಿಯೊಂದು ಜೀವ ಜಾತಿಯಲ್ಲೂ ಅತಿ ಸಂತಾನವಿದೆ. ಅದರ ಫಲವಾಗಿ ಜೀವನದ ಸಂಗ್ರಾಮ ನಡೆದು ಯೋಗ್ಯವಾದವುಗಳ ಆಯ್ಕೆಯಾಗುವುದು. ಸನ್ನಿವೇಶದ ಹೊಂದಿಕೆಗೆ ಯೋಗ್ಯವಲ್ಲದ ಗುಣಗಳುಳ್ಳವು ಕಾಲಕ್ರಮೇಣ ಅಳಿಯುವುವು. ಆದುದರಿಂದ ಯೋಗ್ಯವಾದುವು ತಮ್ಮ ಸಂತತಿಯನ್ನು ಮುಂದುವರಿಸುವುವು. ಪ್ರತ್ಯೇಕ ಸ್ಥಳದಲ್ಲುಳಿಯುವಂತಾದರೆ ಅವುಗಳಿಗೆ ಮಿಕ್ಕವುಗಳ ಸಂಪರ್ಕವೇ ತಪ್ಪಿಹೋಗಿ, ವಿಶೇಷ ರೀತಿಯ ವಿಭೇದಗಳುಳ್ಳ ತಮ್ಮ ಪೀಳಿಗೆಯೇ ಬೆಳೆಯುತ್ತಾ ಹೋಗುವುದು. ಒಂದು ಸಂತತಿಗೂ ಮುಂದಣ ಸಂತತಿಗೂ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ. ಏಕೆಂದರೆ ವಿಭೇದಗಳನ್ನು ಪಡೆಯುವುದು ಜೀವಿಗಳ ಹುಟ್ಟುಗುಣ. ಆ ಪೀಳಿಗೆಯ ಆದಿಜೀವಿಯೊಂದನ್ನು ಶತಶತಮಾನಗಳನಂತರ ಅದೇ ಪೀಳಿಗೆಯಲ್ಲಿ ಉದಿಸುವ ಮತ್ತೊಂದು ಜೀವಿಯೊಡನೆ ಹೋಲಿಸಿದರೆ ಅನೇಕ ವ್ಯತ್ಯಾಸಗಳು ಕಂಡುಬರುವುವು. ಅವೆರಡೂ ಪ್ರತ್ಯೇಕ ಜಾತಿಗಳೇ ಇರಬಹುದೋ ಏನೋ ಎಂದು ಭಾಸವಾಗುತ್ತದೆ. ಇಂದಿನ ಜೀವಿಗಳೆಲ್ಲ

ಡಾರ್ವಿನ್ನನ ವಿಕಾಸತತ್ವ

ಹಿಂದಿದ್ದ ಜೀವಿಗಳಿಂದ ಆ ರೀತಿಯಲ್ಲಿ ಮಾರ್ಪಟ್ಟು ವಿಕಾಸವಾಗಿರುವುವು.

ಭೂಗೋಳದ ಮೇಲೆ ಜೀವವರ್ಗ ಹುಟ್ಟಿ ಇಂದಿಗಾಗಲೇ ಅನೇಕ ಕೋಟಿ ವರ್ಷಗಳಾಗಿರಬೇಕೆಂದು ಹೇಳುವರು. ಆದಿಯಲ್ಲಿ ಇಂದಿರುವ ಎಲ್ಲ ಜೀವಜಾತಿಗಳೂ ಇರಲಿಲ್ಲ; ಜೀವರಸವೆಂಬ ಮೂಲ ವಸ್ತುವೊಂದು ಮಾತ್ರವಿತ್ತು. ಅದಕ್ಕೆ ಯಾವ ಅಂಗಗಳಾಗಲಿ, ನಿರ್ದಿಷ್ಟ ಶರೀರ ರಚನೆಯಾಗಲಿ ಇರಲಿಲ್ಲ. ಅಂಥ ಜೀವಿಗಳು ಈಗಲೂ ಇವೆ. ನೀರಿನಲ್ಲಿ ವಾಸಿಸುವ ಬಹು ಸೂಕ್ಷ್ಮವಾಗಿರುವ ಅಮೀಬವೆಂಬ ಏಕಕೋಶ ಜೀವಿಯೊಂದನ್ನು ಆ ಮೂಲ ವಸ್ತುವಿನೊಡನೆ ಹೋಲಿಸಬಹುದು. ಬಹುಕಾಲದ ವರೆಗೂ ಸೃಷ್ಟಿಯ ಆದಿಯಲಿ ಈ ಏಕಕೋಶ ಜೀವಗಳಂಥವು ಮಾತ್ರ ಭೂಮಿಯಲ್ಲಿ ವಾಸಿಸುತ್ತಿದ್ದುವು. ಅಂಥ ಜೀವಿಗಳಿಂದ ಒಂದು ಕಡೆ ಸಸ್ಯವರ್ಗವೂ ಇನ್ನೊಂದು ಕಡೆ ಪ್ರಾಣಿವರ್ಗವೂ ಕಾಲಕ್ರಮದಲ್ಲಿ ವಿಕಾಸವಾಗಿರಬೇಕು. ಏಕಕೋಶ ಜೀವಿಗಳಿಂದ ದ್ವಿಕೋಶ ಜೀವಿಗಳೂ ಆಮೇಲೆ ಬಹುಕೋಶ ಜೀವಿಗಳೂ ಕ್ರಮಕ್ರಮವಾಗಿ, ಪರಿಣಾಮವಾಗಿರಬೇಕು. ಅಂಥ ಏಕಕೋಶ ಜೀವಿಗಳಿಂದ ಸ್ಪಂಜಿನ ಹುಳುಗಳೂ. ಹವಳದ ಹುಳುಗಳೂ ಆಮೇಲೆ ಇನ್ನಿತರ ಪ್ರಾಣಿಗಳೂ ಹುಟ್ಟಿರಬೇಕು. ಎಂದರೆ ಮೇಲೆ ವಿವರಿಸಿದ ಆದಿ ಜೀವರಸದಿಂದ ಸಂಕೀರ್ಣತೆಗೇರುತ್ತಾ ಬಂದು ಈ ದಿನದ ವಿವಿಧ ವಿಚಿತ್ರ ಪ್ರಾಣಿಜಾತಿಗಳು ಉದಯವಾಗಿರಬೇಕು. ಹಾಗೆಯೇ ಸಸ್ಯವರ್ಗವೂ.

ನಮ್ಮೆದುರಿಗಿರುವ ಜೀವ ಪ್ರಪಂಚ ಈ ಸ್ಥಿತಿಗೆ ಬರುವುದಕ್ಕೆ ಕೋಟಿಗಟ್ಟಲೆ ವರ್ಷಗಳಾಗಿವೆಯಷ್ಟೆ. ಪ್ರಾಣಿವರ್ಗದ ಇತಿಹಾಸವನ್ನು ಹಲವು ಕಲ್ಪಗಳನ್ನಾಗಿ ವಿಂಗಡಿಸಿ, ಅಭ್ಯಾಸಿಸಬಹುದು. ಆದಿಕಲ್ಪದಲ್ಲಿ ಭೂಗೋಳದ ಮೇಲೆ ಬೆನ್ನೆಲುಬು ಇಲ್ಲದ ಪ್ರಾಣಿಗಳೇ ತುಂಬಿದ್ದುವು; ಅಮೀಬದಂಥ ಏಕಕೋಶ ಜೀವಿಗಳೂ, ಹವಳದ ಹುಳುಗಳೂ, ಎರೆಹುಳುಗಳೂ, ಕೀಟಕಗಳೂ, ಚಿಪ್ಪಿನ ಪ್ರಾಣಿಗಳೂ, ಚೇಳುಗಳೂ, ತಾರಗೆ ಹುಳುಗಳೂ ಹೇರಳವಾಗಿದ್ದುವು. ಆ ಕಲ್ಪದ ಕೊನೆಯಲ್ಲಿ ಇವುಗಳಲ್ಲಿ ಯಾವುದೋ ಒಂದು ಜಾತಿಯಿಂದ ವಿಕಾಸವಾಗಿ ಬೆನ್ನೆಲುಬುಳ್ಳ ಪ್ರಾಣಿಗಳು ಕಾಣಿಸಿಕೊಂಡಿರಬೇಕು. ಎರಡನೆಯದನ್ನು ಮತ್ಸ್ಯಕಲ್ಪವೆಂದು ಹೇಳಬಹುದು. ಆಗ

ಎಲ್ಲೆಲ್ಲೂ ಮೀನುಗಳೇ ಹೇರಳವಾಗಿದ್ದುವು ಆ ಕಲ್ಪದ ಉತ್ತರಾರ್ಧದಲ್ಲಿ ಹಿತ್ತಲವುಂಡಲ, ಕಪ್ಪೆ ಮೊದಲಾದ ದ್ವಿಚರ ಪ್ರಾಣಿಗಳು ಉದಯ ವಾದುವು. ಮೀನುಗಳು ಶುದ್ಧ ಜಲಚರ ಪ್ರಾಣಿಗಳು. ದ್ವಿಚರ ಪ್ರಾಣಿಗಳು ನೆಲದಲ್ಲೂ ಜಲದಲ್ಲೂ ವಾಸಿಸತಕ್ಕುವು ಮೀನಿನಲ್ಲಿ ಈಜುವ ರೆಕ್ಕೆಗಳೇ ಚಲನಾಂಗಗಳು. ಕೈಕಾಲುಗಳಿನ್ನೂ ನಿರ್ಮಾಣವಾಗಿರಲಿಲ್ಲ. ಕಪ್ಪೆಗಳಲ್ಲಿ ನೆಲದ ಮೇಲೆ ಸಂಚರಿಸಲು ಅನುಕೂಲಿಸುವಂತೆ ಕಾಲುಗಳು ಮೂಡಿದುವು. ಮೂರನೆಯ ಕಾಲವನ್ನು ಉರಗಗಳ ಕಲ್ಪವೆನ್ನುವರು. ದ್ವಿಚರ ಪ್ರಾಣಿಯೊಂದರಿಂದ ಉರಗಗಳು ವಿಕಾಸವಾಗಿ ಆ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಗೆ ಒಂದು ಭೂಮಿಯ ಎಲ್ಲ ಕಡೆಯೂ ಹರಡಿಕೊಂಡಿದ್ದುವು. ಜಲ, ನೆಲ, ಆಕಾಶ—ಈ ಎಲ್ಲ ಸನ್ನಿವೇಶಗಳಿಗೂ ಹೊಂದಿಕೊಂಡು ಪ್ರಪಂಚವನ್ನೇ ತಮ್ಮದಾಗಿ ಮಾಡಿಕೊಂಡಿದ್ದುವು. ಹಾವುಗಳು, ಮೊಸಳೆಗಳು, ಉಡಗಳು ಮೊದಲಾದ ಉರಗಗಳ ಜೊತೆಗೆ ಪೆಡಂಭೂತಗಳೆಂಬ ವಿವಿಧ ಜಾತಿಯ ಹೆಗ್ಗಾಳಿಗಳೂ, ಕಿರುಗೌಳಿಗಳೂ ಎಲ್ಲೆಲ್ಲೂ ತುಂಬಿಕೊಂಡು ಆವಾಂತರ ಮಾಡುತ್ತಿದ್ದುವು ಇಂಥ ಅನೇಕ ಜಾತಿಯ ರಾಕ್ಷಸಾಕೃತಿಯ ಉರಗಗಳು ಈ ದಿನ ಬದುಕಿಲ್ಲ ಸನ್ನಿವೇಶದ ಉಗ್ರ ಒದಲಾವಣೆಯಿಂದ ಅವುಗಳ ವಂಶಗಳೆಲ್ಲ ನಾಶವಾಗಿ ಹೋದುವು.

ಪ್ರಾಣಿವರ್ಗದ ಇತಿಹಾಸದಲ್ಲಿ ಉರಗಗಳ ಕಲ್ಪ ಬಲು ಮುಖ್ಯವಾದುದು. ಆಗ ಸಣ್ಣ ಸಣ್ಣ ಹಲ್ಲಿಗಳಂಥ ಪ್ರಾಣಿಗಳಿಂದ ಹಿಡಿದು ಪೆಡಂಭೂತದಂಥ ದೊಡ್ಡ ಪ್ರಾಣಿಗಳ ವರೆಗೂ ಇದ್ದುವು. ಎಲ್ಲ ಸನ್ನಿವೇಶಗಳಿಗೂ ಹೊಂದಿಕೊಂಡು ಜಾತಿಯಲ್ಲೂ ಸಂಖ್ಯೆಯಲ್ಲೂ ಹೇರಳ ಉರಗಗಳ ಕಲ್ಪ ವಾಗಿ ಹೋಗಿದ್ದುವು. ವೈವಿಧ್ಯದಲ್ಲಾಗಲಿ, ಗಾತ್ರದಲ್ಲಾಗಲಿ ಈ ವರ್ಗವನ್ನು ಮೀರಿಸಿದ ಪ್ರಾಣಿವರ್ಗವೇ ಉದಯಿಸಲಿಲ್ಲವೆಂದು ಹೇಳುವರು. ಆ ಕಾಲದಲ್ಲಿ ಬದುಕಿದ್ದ ತೀರೋಮಾರ್ಫವೆಂಬ ಎತ್ತರವಾದ ಕಾಲುಳ್ಳ ಒಂದು ಜಾತಿಯ ಉರಗದಿಂದ ಆ ಕಲ್ಪದ ಕೊನೆಯಲ್ಲಿ ಸಸ್ತನಿವರ್ಗದ ಪ್ರಾಣಿಗಳೂ, ಸ್ವಲ್ಪ ಕಾಲದನಂತರ ಮೊಸಳೆಯಂಥ ಸಣ್ಣ ಜಾತಿಯ ಉರಗಗಳಿಂದ ಪಕ್ಷಿವರ್ಗವೂ ಉದಯವಾದುವು ಈಗ ನಡೆಯುತ್ತಿರುವ ಯುಗವನ್ನು ನವೀನ ಕಲ್ಪ ಅಥವಾ

ಸಸ್ತನಿಗಳ ಕಲ್ಪವೆಂದು ಕರೆಯುಬಹುದು. ಪ್ರಾಣಿವರ್ಗದ ಕಳಶದಂತಿರುವ ಮಾನವನೂ ಸಸ್ತನಿವರ್ಗಕ್ಕೆ ಸೇರಿದವನು. ಆದುದರಿಂದ ಎಲ್ಲ ಪ್ರಾಣಿಗಳಿಗಿಂತ ಮಾನವನೇ ಅತ್ಯಾಧುನಿಕವಾಗಿ ಉದಯವಾದವನು. ಅತ್ಯಂತ ಎಳೆಯುವನಾದರೂ ಮಿಕ್ಕೆಲ್ಲ ಪ್ರಾಣಿಗಳಿಗಿಂತಲೂ ಸನ್ನಿವೇಶದೊಡನೆ ಅತ್ಯಂತ ಚೆನ್ನಾಗಿ ಹೊಂದಿಕೊಂಡಿರುವನು.

**ಜೀವವರ್ಗಗಳ ಏಳುಬೀಳುಗಳು**

ಮೇಲೆ ಜೀವ ವರ್ಗದ ಇತಿಹಾಸವನ್ನು ಹಲವು ಕಲ್ಪಗಳಾಗಿ ವಿಂಗಡಿಸಿ ಒಂದೊಂದಕ್ಕೂ ಆಗ ಅತ್ಯಂತ ಪ್ರಧಾನವಾಗಿದ್ದ ಪ್ರಾಣಿವರ್ಗದ ಹೆಸರನ್ನು ಕೊಟ್ಟಿದೆ: ಆದರೆ ಆ ಕಲ್ಪಗಳಲ್ಲಿ ಮತ್ತಾವ ಪ್ರಾಣಿಗಳೂ ಇರಲಿಲ್ಲವೆಂದಲ್ಲ; ಕೆಳವರ್ಗದ ಪ್ರಾಣಿಗಳೂ ಇದ್ದುವು. ಹೀಗೆಯೇ ಸಸ್ಯವರ್ಗದ ಇತಿಹಾಸವನ್ನೂ ವಿವರಿಸಬಹುದು. ಸಸ್ಯಗಳೂ ಪ್ರಾಣಿಗಳೂ ಕೆಳವರ್ಗದವುಗಳಿಂದ ವಿಕಾಸವಾಗಿ ಇಂದಿನ ಸ್ಥಿತಿಗೆ ಬರಲು ಎಷ್ಟೊಂದುಕಾಲ ಮರಳ ಬೇಕಾಯಿತೆಂದು ಊಹಿಸಿಕೊಳ್ಳಬಹುದು. ಆದಿಸಿಂದಲೂ ಅಗಣಿತ ಜೀವ ಜಾತಿಗಳು ಹುಟ್ಟುತ್ತಿವೆ. ಅವುಗಳಲ್ಲಿ ಯಾವುವು ಜೀವನದ ಸಂಗ್ರಾಮದಲ್ಲಿ ಜಯಪಡೆದುವೋ ಅವು ತಮ್ಮ ವಂಶವನ್ನು ಮುಂದುವರಿಸುವಂತಾಗಿ ಮಿಕ್ಕವು ಅಳಿದು ಹೋದುವು.

ಮೇಲೆ ವಿವರಿಸಿದ ವಿಕಾಸತತ್ವವನ್ನು ಜ್ಞಾನಪ್ರಪಂಚದಲ್ಲಿ ಪ್ರಚಾರಕ್ಕೆ ತಂದವನು ಡಾರ್ವಿನ್. ಅವನ ಹಿಂದಿನವರು ಆ ಕಾರ್ಯದಲ್ಲಿ ತೊಡಗಿದ್ದರೂ ವಿಫಲರಾಗಿದ್ದರು. ಜೀವವರ್ಗ ವಿಕಾಸವಾಗಿರುವ ಮಾರ್ಗವನ್ನರಿತುಕೊಂಡು ಅದನ್ನು ಸಿದ್ಧಾಂತಪಡಿಸಿ ತೋರಿಸಲು ಡಾರ್ವಿನ್ ಆವಶ್ಯಕವಾದ ಅಂಕಿ ಅಂಶಗಳನ್ನು ಹೊಂದಿಸಿಕೊಂಡು ಜನಜೀವನದ ಮುಂದೆ ತನ್ನ ತತ್ವವನ್ನು ಮಂಡಿಸಿದನು. ಅಂದಿಗಾಗಲೇ ಜನಮನದಲ್ಲಿ ವಿಜ್ಞಾನದೃಷ್ಟಿ ಬೆಳೆದು ವಿಚಾರ ಬುದ್ಧಿ ಅಂಕುರವಾಗಿತ್ತು. ಅಂಥ ಸಮಯದಲ್ಲಿ ಅವನ ತತ್ವವನ್ನು ಅನೇಕರು ಬರಮಾಡಿಕೊಂಡು ಪುರಸ್ಕರಿಸಿದರು. ಎಂದರೆ ಡಾರ್ವಿನ್ನನಿಗೆ ಪ್ರತಿಭಟನೆಗಳಿರಲಿಲ್ಲವೆಂದಲ್ಲ; ಯಾವ ವ್ಯಕ್ತಿಯೇ ಆಗಲಿ ಮಹಾಕಾರ್ಯವೊಂದನ್ನು ಸಾಧಿಸಬೇಕಾದರೆ ಸಮಾಜವೂ ಅದನ್ನು ಸ್ವೀಕರಿಸಲು ಅನುವಾಗಿರಬೇಕು. ಹಿಂದಿನ ವಿಜ್ಞಾನಿಗಳನ್ನೇಕರು ಜನ

ಜೀವನದ ಮುಂದೆ ವಿಕಾಸದೃಷ್ಟಿಯನ್ನು ಪ್ರಕಟಿಸಿದಾಗ ಎದ್ದ ಸಮಾಜದ ಕ್ರೋಧಾವೇಶದ ಜ್ವಾಲೆ ಸ್ವಲ್ಪ ಸ್ವಲ್ಪವಾಗಿ ಆರುತ್ತಾ ಬಂದು ಡಾರ್ವಿನ್ ತನ್ನ ತತ್ವವನ್ನು ಪ್ರಕಟಿಸುವುದಕ್ಕೆ ಸರಿಯಾದ ಹಿನ್ನೆಲೆ ಸಿದ್ಧವಾಗಿತ್ತು; ಅವನ ವಾದಸರಣಿ ಸಾಮಾನ್ಯರಿಗೂ ಹಿಡಿಯುವಂತಿತ್ತು. ಅವನು ಕೊಟ್ಟ ಸಾಕ್ಷ್ಯಗಳು ನಿರ್ವಿವಾದವಾಗಿ ಪಂಡಿತಪಾಮರರೊಪ್ಪುವಂತಿದ್ದುವು.

ಪ್ರಾಯೋಗಿಕ ಸಾಕ್ಷ್ಯಗಳು

ಡಾರ್ವಿನ್ನನ ವಿಕಾಸತತ್ವ ಜನಮನದ ಮನ್ನಣೆಯನ್ನು ಪಡೆದು ಜ್ಞಾನರಾಜ್ಯದಲ್ಲಿ ದೊಡ್ಡ ಸ್ಥಾನವೊಂದನ್ನು ಪಡೆದುದು ಅವನು ಒದಗಿಸಿಕೊಂಡ ಸಾಕ್ಷ್ಯಗಳ ಬಲದಿಂದ. ಕೋಸು, ಸೇಬು, ಇತ್ಯಾದಿ ಗಿಡಗಳು ಮಾನವನ ಕೈವಾಡದಲ್ಲಿ ಬೆಳೆದಾಗ ಹೇಗೆ ಹಲವು ಸಂತತಿಗಳಲ್ಲೇ ಅವನ ಇಷ್ಟದಂತೆ ವಿಕಾಸವಾಗುವುವೆಂಬುದನ್ನು ತಿಳಿದುಕೊಂಡು ಆ ಸತ್ಯಾಂಶ ಇಡೀ ಸಸ್ಯವರ್ಗಕ್ಕೇ ಅನ್ವಯಿಸುವುದೆಂದು ತೋರಿಸಿಕೊಟ್ಟನು. ಹಾಗೆಯೇ ಪಾರಿವಾಳಗಳನ್ನು ಸಾಕಿ, ಅವುಗಳ ಸಂತತಿಯಲ್ಲಿ ಹೊಸ ಜಾತಿಗಳು ಕಾಲಕ್ರಮದಲ್ಲಿ ವಿಕಾಸವಾಗುವುದನ್ನು ಆಧಾರವಾಗಿಟ್ಟುಕೊಂಡು ಇಂದಿನ ಎಲ್ಲ ಪ್ರಾಣಿಗಳೂ ಕೆಳವರ್ಗದ ಪ್ರಾಣಿಗಳಿಂದ ವಿಕಾಸವಾದುವೆಂದು ತೋರಿಸಿಕೊಟ್ಟನು. ಮಹಾಜ್ಞಾನವನ್ನು ಇಂಥ ಸರಳಮಾರ್ಗದಲ್ಲಿ ಪ್ರತಿಪಾದಿಸಿದ್ದರಿಂದ ಅವನ ತತ್ವ ಜನಮನವನ್ನು ಬೇಗ ನಾಟಿತು.

ಅಂಗರಚನೆಯ ಸಾಕ್ಷ್ಯ

ಪ್ರಾಣಿಗಳನ್ನಾಗಲಿ, ಸಸ್ಯಗಳನ್ನಾಗಲಿ ಹಲವು ವರ್ಗಗಳಾಗಿ ವಿಂಗಡಿಸಬಹುದು. ಬೆನ್ನೆಲುಬಿನ ಪ್ರಾಣಿಗಳನ್ನೇ ಉದಾಹರಣೆಗೆ ತೆಗೆದುಕೊಂಡರೆ, ಅವನ್ನು ಮತ್ಸ್ಯವರ್ಗ, ದ್ವಿಚರ ಪ್ರಾಣಿವರ್ಗ, ಉರಗವರ್ಗ, ಪಕ್ಷಿವರ್ಗ ಮತ್ತು ಸಸ್ತನಿವರ್ಗಗಳೆಂಬ ಪಂಚಪಂಗಡಗಳಾಗಿ ವಿಂಗಡಿಸಬಹುದು. ಈ ಪಂಗಡಗಳು ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಮೇಲ್ದರ್ಜೆಯವು. ಆದರೂ ಈ ಎಲ್ಲ ಪಂಗಡಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಒಂದರೊಡನೊಂದು ಅಂಗರಚನೆಯಲ್ಲಿ ಸಾಮ್ಯವನ್ನು ತೋರುತ್ತದೆ. ಆದುದರಿಂದ ಆ ಪ್ರಾಣಿಗಳೆಲ್ಲ ಒಂದರೊಡನೊಂದು ಪೂರ್ವಸಂಬಂಧವುಳ್ಳವೇ. ಒಂದೊಂದು ವರ್ಗದ ಪ್ರಾಣಿಯು ಮೈರಚನೆಯೂ ಹೊರನೋಟಕ್ಕೆ ವ್ಯತ್ಯಾಸಗಳನ್ನು

ಪ್ರದರ್ಶಿಸಿದರೂ ಒಳರಚನೆಯಲ್ಲಿ ಹೋಲಿಕೆ ಇದ್ದೇ ಇರುತ್ತದೆ. ಆ ಸಾಮ್ಯವನ್ನು ತಿಳಿದುಕೊಳ್ಳಲು ಒಂದು ಉದಾಹರಣೆ ಕೊಡಬಹುದು; ಮೀನಿನ ಮುಂದಿನ ಈಜು ರೆಕ್ಕೆಗಳು, ಕಪ್ಪೆಯ ಮುಂಗಾಲುಗಳು, ಹಲ್ಲಿ, ಮೊಸಳೆ, ಆಮೆ—ಮೊದಲಾದ ಉರಗಗಳ ಮುಂಗಾಲುಗಳು, ಪಕ್ಷಿಯ ರೆಕ್ಕೆಗಳು, ಮಾನವನ ಕೈಗಳು ಇವೆಲ್ಲ ಹೊರ ನೋಟಕ್ಕೆ ಒಂದನ್ನೊಂದು ಹೋಲುವುದೇ ಇಲ್ಲ. ಆದರೂ ಅವೆಲ್ಲ ಮೀನಿನ ಮುಂದಿನ ಜೊತೆರೆಕ್ಕೆಗಳಿಂದ ವಿಕಾಸವಾದುವೆಂದು ಡಾರ್ವಿನ್ ತೋರಿಸಿಕೊಟ್ಟಿರುವನು. ಬೇರೆ ಬೇರೆ ವರ್ಗಗಳಿಂದ ಉದಹರಿಸಿದ ಮೇಲಣ ಪ್ರಾಣಿಗಳ ಆಯಾ ಅಂಗಗಳಲ್ಲಿರುವ ಮಾಂಸಖಂಡಗಳು, ನರಗಳು, ರಕ್ತನಾಳಗಳು, ಮೂಳೆಗಳು ಮೊದಲಾದುವನ್ನು ಪರೀಕ್ಷಿಸಿದರೆ ಸಾಮ್ಯ ತೋರಿಬರುತ್ತದೆ. ಇಂಥ ಸಾಮ್ಯ ಪ್ರದರ್ಶನದಲ್ಲಿ ಅರ್ಥವಿಲ್ಲವೇ ಎಂದು ಡಾರ್ವಿನ್ ಪ್ರಶ್ನಿಸಿ 'ಒಂದು ಪ್ರಾಣಿಗೂ ಇನ್ನೊಂದು ಪ್ರಾಣಿಗೂ ಸಂಬಂಧವಿರುವುದರಿಂದಲೇ ಆ ಅಂಗಗಳು ಹೋಲಿಕೆಯನ್ನು ತೋರಿಸುವುವು' ಎಂದು ದೃಢೀಕರಿಸಿರುವನು. ಬೈಬಲ್ಲಿನಲ್ಲಿ ಹೇಳಿರುವಂತೆ ಆ ಪ್ರಾಣಿಗಳು ಪ್ರತ್ಯೇಕವಾಗಿ ಸೃಷ್ಟಿಯಾಗಿದ್ದರೆ ಆ ಸಾಮ್ಯವೇ ತೋರಿಬರುತ್ತಿರಲಿಲ್ಲ. ಮೇಲೆ ವಿವರಿಸಿದ ಐದು ವಿಧವಾದ ಅಂಗಗಳೂ ಒಬ್ಬ ಪೂರ್ವಜನಿಂದ ಬಂದು ಅವಶ್ಯಕತೆಗನುಸಾರವಾಗಿ ವಿವಿಧ ರೂಪಗಳಲ್ಲಿ ಮಾರ್ಪಾಡಾಗಿವೆ. ಹಾಗೆಯೇ ಇತರ ಅಂಗಗಳನ್ನೂ ಹೋಲಿಸಿದಾಗ ಆ ಸಾಮ್ಯ ಇನ್ನೂ ಚೆನ್ನಾಗಿ ದೃಢಪಡುತ್ತದೆ. ಕೆಳ ವರ್ಗದಿಂದ ಮೇಲ್ವರ್ಗಕ್ಕೆ ಪ್ರಾಣಿಗಳು ವಿಕಾಸವಾದಂತೆ ಅವುಗಳ ಅಂಗಗಳು ಸರಳರೂಪದಿಂದ ಸಂಕೀರ್ಣತೆಗೇರುವುವು; ವಾತಾವರಣದೊಡನೆ ಸರಿಯಾಗಿ ಹೊಂದಿಕೊಳ್ಳುವಂತೆ ವೃದ್ಧಿಹೊಂದುವುವು. ಹಾಗೆ ವಿಕಾಸವಾಗುವಾಗ ಜೀವಿಗಳು ಎರಡು ಮಾರ್ಗಗಳನ್ನನುಸರಿಸಬಹುದು; ಎಲ್ಲಿ ಅಂಗಗಳು ಹೆಚ್ಚು ಹೆಚ್ಚು ಸಂಕೀರ್ಣತೆಗೇರಿ ಪ್ರಧಾನವಾಗಿ ಬೆಳೆಯುವುವೋ ಅದನ್ನು ಉತ್ಕ್ರಾಂತಿ ಮಾರ್ಗವೆಂದೂ, ಎಲ್ಲಿ ಅಂಗಗಳು ನಶಿಸಿ ಹೋಗಿ, ಆ ಮೂಲಕ ಸನ್ನಿವೇಶದೊಡನೆ ಹೊಂದಿಕೊಳ್ಳುವುವೋ ಅದನ್ನು ಅವಕ್ರಾಂತಿ ಮಾರ್ಗವೆಂದೂ ಕರೆಯುಬಹುದು. ಮೀನಿನ ಈಜು ರೆಕ್ಕೆಗಳಿಂದ ಕಪ್ಪೆಯ ಕಾಲೂ, ಹಲ್ಲಿ, ಮೊಸಳೆ ಮೊದಲಾದ ಉರಗಗಳ ಕಾಲೂ ಉತ್ಕ್ರಾಂತಿ ದೆಸೆಯಲ್ಲಿ ವಿಕಾಸವಾಗಿವೆ; ಹಾವುಗಳ

ಲ್ಲಾದರೆ, ಆ ಕಾಲುಗಳು ಕ್ರಮಕ್ರಮವಾಗಿ ನಶಿಸುತ್ತಾ ಬಂದು ಅವಕ್ರಾಂತಿ ದೆಸೆಯಲ್ಲಿ ವಿಕಾಸವಾಗಿವೆ. ಉರಗಗಳ ಮುಂಗಾಲುಗಳಿಂದ ಒಂದು ಕಡೆ ಪಕ್ಷಿಗಳ ರೆಕ್ಕೆಗಳೂ, ಇನ್ನೊಂದು ಕಡೆ ಮಾನವನ ಕೈಗಳೂ ವಿಕಾಸವಾಗಿವೆ. ಇವೆಲ್ಲ ಅಂಶಗಳನ್ನೂ ಪ್ರಾಣಿಗಳ ಒಳರಚನೆಯಿಂದ ದೊರೆತ ಸಾಕ್ಷ್ಯಗಳಿಂದ ಸಿದ್ಧಪಡಿಸಿ ತೋರಿಸಿ, ಒಂದು ವರ್ಗಕ್ಕೂ ಇನ್ನೊಂದು ವರ್ಗಕ್ಕೂ ಇರುವ ಸಾಮ್ಯವನ್ನು ಮತ್ತಾವ ತತ್ವವೂ ವಿವರಿಸಲಾರದೆಂದು ಡಾರ್ವಿನ್ ವಾದಿಸಿರುವನು. ಆದುದರಿಂದ ಮತ್ಸ್ಯವರ್ಗದಿಂದ ದ್ವಿಚರ ಪ್ರಾಣಿವರ್ಗವೂ ದ್ವಿಚರ ಪ್ರಾಣಿವರ್ಗದಿಂದ ಉರಗಗಳ ವರ್ಗವೂ ಕ್ರಮವಾಗಿ ವಿಕಾಸವಾಗಿರಬೇಕು. ಉರಗಗಳಿಂದ ಒಂದು ಕಡೆ ಪಕ್ಷಿವರ್ಗವೂ ಇನ್ನೊಂದು ಕಡೆ ಸಸ್ತನಿವರ್ಗವೂ ಉದಯವಾಗಿರಬೇಕು.




ಪಕ್ಕದ ನಕ್ಷೆಯಲ್ಲಿ ಆದಿ ಜೀವರಸದಿಂದ ಕ್ರಮಕ್ರಮವಾಗಿ ವಿವಿಧ ಜೀವವರ್ಗಗಳು ವಿಕಾಸವಾದ ಮಾರ್ಗವನ್ನು ಸ್ಥೂಲವಾಗಿ ಚಿತ್ರಿಸಿದೆ.

---

**ಪ್ರಾಣಿಗಳ ವಿಕಾಸಮಾರ್ಗ**

ಪ್ರಾಣಿಗಳಲ್ಲಿ ಯಾವ ಅಂಗಗಳಿಗೆ ಕೆಲಸವಿಲ್ಲದೆ ಹೋಗುವುದೋ ಆ ಅಂಗಗಳು ಕ್ರಮೇಣ ನಶಿಸುತ್ತಾ ಬಂದು, ಕೆಲವು ಸಂತತಿಗಳನಂತರ ಕೇವಲ ಗುರುತನ್ನು ಮಾತ್ರ ತೋರಿಸುವುವು. ಅಂಥ ನಶಿಸಿಹೋಗಿರುವ ಅಂಗಗಳನ್ನು ಅವಯುವಶೇಷವೆಂದು ಹೇಳಬಹುದು. ಡಾರ್ವಿನ್ ಅವುಗಳನ್ನು ಅನೇಕ ಪ್ರಾಣಿಗಳಲ್ಲಿ ಪರೀಕ್ಷಿಸಿ, ಅವಯುವಶೇಷಗಳು, ಅವುಗಳನ್ನು ಪೂರ್ಣಾವಸ್ಥೆಯಲ್ಲಿ ಹೊಂದಿದ್ದ ಪೂರ್ವಜರಿಂದಲೇ ಬಂದಿರಬೇಕೆಂದು ವಾದಿಸಿದನು. ಇತರ ಸಸ್ತನಿಗಳಿಗಿರುವಂತೆ ತಿಮಿಂಗಿಲಕ್ಕೂ ಎರಡು ನಾಲು ಹಲ್ಲುಗಳಿವೆ. ಆದರೆ ಅವು ವಸಡನ್ನು ಭೇದಿಸಿಕೊಂಡು ಹೊರಮೂಡುವುದೇ ಇಲ್ಲ. ಹೊರಗಡೆ ಅವುಗಳಿಗೆ ಹಲ್ಲು ಕಾಣದಿದ್ದರೂ ಅವಯುವಶೇಷವಾಗಿ ಉಳಿದುಕೊಂಡಿವೆ. ಆದುದರಿಂದ ತಿಮಿಂಗಿಲ ದಂತವುಳ್ಳ ಪೂರ್ವಜರಿಂದಲೇ ಬಂದಿರಬೇಕು. ನ್ಯೂಸಿಲೆಂಡಿನ 'ಕಿವಿ' ಎಂಬ ಪಕ್ಷಿಗೆ ರೆಕ್ಕೆಯಿಲ್ಲದಿದ್ದರೂ ಆದಕ್ಕೆ ಸಂಬಂಧಿಸಿದ ಮೂಳೆಗಳ ಕುರುಹು ಅವಯುವಶೇಷವಾಗಿ ಉಳಿದಿರುವುದರಿಂದ ಅದು ರೆಕ್ಕೆಯುಳ್ಳ ಪೂರ್ವಜನಿಂದಲೇ ಉಗಮವಾಗಿರಬೇಕು. ಮಾನವನ ದೇಹದಲ್ಲಿ ಇಂಥ ಅನೇಕ ಅವಯುವಶೇಷಗಳಿವೆ. ಅವನ ದೇಹವನ್ನು ಅವಯುವಶೇಷಗಳ ಪ್ರದರ್ಶನಾಲಯವೆಂದು ಕರೆದರೂ ಕರೆಯಬಹುದು. ಮೊಟಕಾಗಿರುವ ಅವನ ಬೆನ್ನೆಲುಬನ್ನು ಪರೀಕ್ಷಿಸಿದರೆ ಬಾಲವುಳ್ಳ ಪೂರ್ವಜರಿಂದ ವಿಕಾಸಗೊಂಡಿರಬೇಕೆಂದು ಗೊತ್ತಾಗುವುದು; ನಶಿಸಿಹೋಗಿರುವ ಅವನ ಕೋರೆಹಲ್ಲುಗಳನ್ನು ನೋಡಿದರೆ ಅವನು ಮಾಂಸಭಕ್ಷಿಯಾದ ಪೂರ್ವಜನೊಬ್ಬನಿಂದ ಪರಿಣಾಮವಾಗಿರಬೇಕೆಂದು ಗೊತ್ತಾಗುವುದು. ಮಾನವನ ಕಿವಿಗೂ ಬಾಯಿಗೂ ಮಧ್ಯೆಯಿರುವ ಈಸ್ಟೇಷಿಯನ್ ದ್ವಾರವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅದು ಮೀನಿನ ಉಸಿರಾಡುವ ಅಂಗವಾದ ಕಿವಿರು ದ್ವಾರವನ್ನು ಹೋಲುವುದೆಂಬುದು ತಿಳಿಯುವುದು. ಮಾನವನಲ್ಲಿರುವ ಈ ದ್ವಾರ ಅವನ ಮತ್ಸ್ಯಪೂರ್ವಜರ ಸ್ಮರಣೆಯನ್ನು ತರುವುದು. ಯಾವ ಕೆಲಸವಿಲ್ಲದಿದ್ದರೂ ಈ ಅವಯುವಶೇಷಗಳು ತಮ್ಮ ಕುರುಹನ್ನು ಮಾತ್ರ ಪ್ರದರ್ಶಿಸುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಅವುಗಳ ಐತಿಹಾಸಿಕ ಸಮಸ್ಯೆಯನ್ನು ಮತ್ತಾವ ತತ್ವವೂ ಬಿಡಿಸಲಾರದು. ಡಾರ್ವಿನ್

ಅವಯುವಶೇಷಗಳ ಸಾಕ್ಷ್ಯ

ಆ ಅವಯುವಶೇಷಗಳಿಗೆ ಮಹತ್ತರ ಸ್ಥಾನವೊಂದನ್ನು ಕೊಟ್ಟು 'ನಮ್ಮ ಶರೀರದಲ್ಲಿ ಅವು ಯಾವ ಕೆಲಸ ಮಾಡದಿದ್ದರೂ ನಮ್ಮ ಪೂರ್ವಜರೆಲ್ಲರ ಇತಿಹಾಸವನ್ನೂ ಮೌನವಾಗಿ ಪ್ರದರ್ಶಿಸುತ್ತಿವೆ' ಎಂದಿರುವನು. ಮಾನವ ದೇಹದಲ್ಲಿರುವ ಸುಮಾರು ನೂರು ಅವಯುವಶೇಷಗಳ ಇತಿಹಾಸವನ್ನೂ ಅರಿತುಕೊಂಡಾಗ ಅವನು ಹೇಗೆ ಇತರ ಎಲ್ಲ ಕೆಳವರ್ಗಗಳನ್ನೂ ದಾಟಿ ಉನ್ನತಸ್ಥಾನವನ್ನು ಸೇರಿರುವನೆಂಬುದು ಅರಿವಾಗುವುದೆಂದು ವಿವರಿಸಿ, ತನ್ನ ವಾದಕ್ಕೆ ಡಾರ್ವಿನ್ ಬಲವಾದ ಸಾಕ್ಷ್ಯವನ್ನೊದಗಿಸಿಕೊಂಡಿರುವನು.

**ಪಳೆಯುಳಿಕೆಗಳ ಸಾಕ್ಷ್ಯ**

ಭೂಗೋಳದ ಮೇಲೆ ಜೀವಿಗಳು ಉದಿಸಿದಂದಿನಿಂದಲೂ ಅನೇಕ ಪ್ರಾಣಿಗಳು ಹುಟ್ಟಿ ಸಾಯುತ್ತಿವೆ. ಹಿಂದೆ ವಿವರಿಸಿರುವಂತೆ ಹಲವು ಪ್ರಾಣಿಗಳ ಅಸ್ಥಿಪಂಜರ ಮೊದಲಾದ ಕಠಿಣ ಭಾಗಗಳು ಭೂಗತವಾಗಿ ಶತಶತಮಾನಗಳನಂತರ ಪಳೆಯುಳಿಕೆಗಳಾಗುತ್ತವೆ. ವರ್ಷವರ್ಷವೂ ಅವುಗಳ ಮೇಲೆ ಮಣ್ಣಿನ ಹೊಸ ಹೊಸ ಪದರಗಳು ಬೀಳುತ್ತವೆ. ಕಾಲಕಳೆದಂತೆ ಈ ಪದರಗಳ ಸಂಖ್ಯೆಯೂ ಹೆಚ್ಚುತ್ತದೆ. ಹೊಸಹೊಸ ಪದರಗಳಲ್ಲೂ ಪ್ರಾಣಿಗಳ ಅವಶೇಷಗಳು ಬಂದು ಬಿದ್ದು ಕ್ರಮೇಣ ಅವೂ ಪಳೆಯುಳಿಕೆಗಳಾಗಿ ಮಾರ್ಪಡುವುವು ಆದುದರಿಂದ ಆ ಪದರಗಳಲ್ಲಿ ಮೇಲಕ್ಕೆ ಬಂದಂತೆಲ್ಲ ಅರ್ವಾಚೀನ ಕಾಲದ ಪ್ರಾಣಿಗಳ ಪಳೆಯುಳಿಕೆಗಳೂ, ಕೆಳಕ್ಕೆ ಹೋದಂತೆಲ್ಲ ಪ್ರಾಚೀನಕಾಲದ ಪ್ರಾಣಿಗಳವೂ ಸಿಕ್ಕುವುವು.

ತನಗಿದ್ದ ಭೂಮಿಶಾಸ್ತ್ರದ ಪರಿಚಯದಿಂದ ಡಾರ್ವಿನ್ ಅಮೆರಿಕದಲ್ಲಿ ದೊರೆತ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳನ್ನು ಪರಿಶೀಲಿಸಿ ಆ ಪ್ರಾಣಿಗಳ ಅಂಗರಚನಾದಿ ಸ್ವರೂಪವನ್ನು ಅರಿತುಕೊಂಡಿದ್ದನು. ಅಂಥ ಪ್ರಾಚೀನ ಪ್ರಾಣಿಗಳಿಗೂ ಈದಿನ ಬದುಕಿರುವ ಅವುಗಳ ಸಂಬಂಧಿಗಳಿಗೂ ಇರುವ ಸಾಮ್ಯವನ್ನು ಅರಿತುಕೊಂಡು ಇಂದಿನವು ಹಿಂದಿನವುಗಳಿಂದ ವಿಕಾಸವಾಗಿರಬೇಕೆಂದು ಅನುಮೇಯಿಸಿರುವನು. ಹಿಂದಿನವು ಕ್ರಮಕ್ರಮವಾಗಿ ಮಾರ್ಪಡುತ್ತ ಬಂದಂತೆ ಅವುಗಳಿಂದ ಹೊಸ ಜಾತಿ ಉದಯವಾಯಿತು. ಆದುದರಿಂದಲೇ ಅಂದಿನ ಪ್ರಾಣಿ ಜಾತಿಗಳು ಈ ದಿನ ಇಲ್ಲದಿರುವುದು. ಅವುಗಳಿಂದ ಮಾರ್ಪಟ್ಟು ವಿಕಾಸಹೊಂದಿರುವ ಅವುಗಳ ಸಂಬಂಧಿಗಳು (ಸಂತತಿ) ಮಾತ್ರ ಇವೆ.

ಭೂಗತವಾಗಿರುವ ಆ ಪ್ರಾಣಿಗಳ ಪಳೆಯುಳಿಕೆಗಳು ಹೇಳುತ್ತಿರುವ ಸಾಕ್ಷ್ಯ ಡಾರ್ವಿನ್ನನ ವಿಕಾಸತತ್ವದ ಬೆನ್ನೆಲುಬಿನಂತಿದೆ. ಅಳಿದುಹೋದ ಆ ಪ್ರಾಚೀನ ಪ್ರಾಣಿಗಳ ಪಳೆಯುಳಿಕೆಗಳು ಮೌನವಾಗಿ ಭೂಮಿಯಲ್ಲಿದ್ದರೂ ಉಚ್ಚವರ್ಗದ ಎಲ್ಲ ಪ್ರಾಣಿಗಳೂ ಕೆಳವರ್ಗದ ಪ್ರಾಣಿಗಳಿಂದಲೇ ವಿಕಾಸವಾದುವೆಂಬ ಸತ್ಯಾಂಶವನ್ನು ಘೋಷಿಸುತ್ತಿವೆ. ಒಂದೊಂದು ಪದರದಲ್ಲಿರುವ ಪಳೆಯುಳಿಕೆಗಳೂ ಜೀವವರ್ಗ ವಿಕಾಸವಾದ ಮಾರ್ಗವನ್ನೂ ತೋರಿಸುತ್ತವೆ.

ಭೂಸಂಶೋಧನೆಯಿಂದ ಹಲವು ಸತ್ಯಾಂಶಗಳು ಹೊರಬಿದ್ದಿವೆ. ಅತ್ಯಂತ ಕೆಳಭಾಗದ ಪದರಗಳಲ್ಲಿ ಬೆನ್ನೆಲುಬಿಲ್ಲದ ಬೇರೆ ಬೇರೆ ಪ್ರಾಣಿಗಳು ಮಾತ್ರ ಪಳೆಯುಳಿಕೆಗಳನ್ನು ಬಿಟ್ಟಿವೆ. ಮೇಲಕ್ಕೆ ಒಂದಂತೆ ಬೆನ್ನೆಲುಬುಳ್ಳ ಪ್ರಾಣಿಗಳ ಪಳೆಯುಳಿಕೆಗಳು ದೊರೆತಿವೆ; ಮೊದಲು ಮೀನುಗಳವೂ, ಆ ಮೇಲೆ ದ್ವಿಚರ ಪ್ರಾಣಿ, ಉರಗ, ಸಸ್ತನಿ ಮತ್ತು ಪಕ್ಷಿಗಳ ಪಳೆಯುಳಿಕೆಗಳೂ ಕ್ರಮವಾಗಿ ದೊರೆತಿವೆ. ಆದುದರಿಂದ ಆದಿಯಲ್ಲಿ ಬೆನ್ನೆಲುಬಿಲ್ಲದ ಪ್ರಾಣಿಗಳೇ ಹೇರಳವಾಗಿದ್ದುವು. ಅವುಗಳಲ್ಲಾವುದೋ ಜಾತಿಯಿಂದ ಅನಂತರ ಬೆನ್ನೆಲುಬಿನ ಪ್ರಾಣಿಗಳು ವಿಕಾಸವಾಗಿರಬೇಕು. ಬಹುಕಾಲದ ವರೆಗೂ ಮೀನುಗಳ ಹೊರತು ಮತ್ತಾವ ಉಚ್ಚವರ್ಗದ ಬೆನ್ನೆಲುಬಿನ ಪ್ರಾಣಿಗಳೂ ಇರಲಿಲ್ಲ. ಅನಂತರ ಕಪ್ಪೆ ಮೊದಲಾದ ದ್ವಿಚರ ಪ್ರಾಣಿಗಳೂ, ಅವುಗಳಿಂದ ಉರಗಗಳೂ, ವಿಕಾಸವಾಗಿರಬೇಕು. ಉರಗಗಳಿಂದ ಕೊನೆಯಲ್ಲಿ ಸಸ್ತನಿಗಳೂ ಪಕ್ಷಿಗಳೂ ವಿಕಾಸವಾಗಿರಬೇಕು. ಇದೇ ವಿಕಾಸಕ್ರಮವನ್ನು ಹಿಂದೆ ವಿವರಿಸಿದ ಅಂಗರಚನೆಯ ಸಾಕ್ಷ್ಯವೂ ದೃಢಪಡಿಸುತ್ತದೆ.

ಉರಗಗಳಿಂದ ಪಕ್ಷಿಗಳು ವಿಕಾಸವಾದುವೆಂದರೆ ಸಾಮಾನ್ಯರು ನಂಬುವುದು ಕಷ್ಟ. ಏಕೆಂದರೆ, ಉರಗಕ್ಕೂ ಪಕ್ಷಿಗೂ ಇರುವ ವ್ಯತ್ಯಾಸಗಳು ಅಷ್ಟೊಂದು ಅಗಾಧವಾಗಿವೆ. ಹಲ್ಲು, ಪರೆ, ನಾಲ್ಕು ಕಾಲು ಮೊದಲಾದ ಗುಣಗಳುಳ್ಳ ಉರಗಗಳು ಮಾರ್ಪಾಡಾಗುತ್ತಾ

**ಬೆಸುಗೆಯ ಪ್ರಾಣಿಗಳು**

ಬಂದು ಕ್ರಮೇಣ ಹಲ್ಲಿಲ್ಲದ, ಗರಿಗಳುಳ್ಳ, ರೆಕ್ಕೆಯುಳ್ಳ ಪಕ್ಷಿರೂಪವನ್ನು ಹೇಗೆ ತಾಳಿದುವೆಂಬುದನ್ನು ನಮಗೆ ತಿಳಿಸಿಕೊಡಲು ಇವೆರಡು ವರ್ಗಗಳನ್ನೂ ಕೂಡಿಸುವ ಮಧ್ಯ

ವರ್ಗದ ಪ್ರಾಣಿಗಳು ಈ ದಿನ ಬದುಕಿಲ್ಲ. ಆದರೆ ಅವು ಒಂದಾನೊಂದು ಕಾಲದಲ್ಲಿ ಬದುಕಿಯೇ ಇದ್ದಿರಬೇಕು. ಅವುಗಳನ್ನು ಬೆಸಗೆಯ ಪ್ರಾಣಿಗಳೆಂದು ಕರೆಯಬಹುದು. ಅವುಗಳ ಸಹಾಯದಿಂದ ಎರಡು ವರ್ಗಕ್ಕೂ ಇರುವ ಅಂತರವನ್ನು ಬೆಸೆದು ಸಂಬಂಧವನ್ನು ಕಲ್ಪಿಸಬಹುದು. ಅಂಥ ಪ್ರಾಣಿಗಳ ಪಳೆಯುಳಿಕೆಗಳು ಭೂಮಿಯಲ್ಲಿ ದೊರೆತಿವೆ. ಕೆಲವು ವರ್ಷಗಳ ಹಿಂದೆ ದೊರಕಿದ ಆರ್ಕ್ಟಿಯಾಪೆರಿಕ್ಸ್ ಎಂಬ ಪ್ರಾಚೀನ ಪ್ರಾಣಿಯೊಂದನ್ನು ಇಲ್ಲಿ ಉದಹರಿಸಬಹುದು. ಅದರಲ್ಲಿ ಹಲ್ಲುಗಳಿದ್ದವು: ಅದು ಉರಗದ ಗುಣ; ರೆಕ್ಕೆಗಳಿದ್ದುವು: ಅದು ಪಕ್ಷಿಯ ಗುಣ; ಎಂದರೆ ಆ ಪ್ರಾಣಿ ಉರಗ ವರ್ಗದಿಂದ ಅಂದು ತಾನೇ ವಿಕಾಸವಾಗುತ್ತಿತ್ತು. ಆದುದರಿಂದಲೇ ಉರಗ ಮತ್ತು ಪಕ್ಷಿ ಇವೆರಡರ ಗುಣಗಳೂ ಅದರಲ್ಲಿದ್ದುವು. ದಕ್ಷಿಣ ಅಮೆರಿಕದಲ್ಲಿ ದೊರೆತ ಪ್ರಾಚೀನ ಕುದುರೆಗಳ ಪಳೆಯುಳಿಕೆಗಳನ್ನು ಡಾರ್ವಿನ್ ಪರಿಶೀಲಿಸಿದ ನಷ್ಟೆ. ಈ ದಿನದ ಕುದುರೆಗೂ ನಾಯಿಯಂಥ ಅದರ ಪೂರ್ವಜನಿಗೂ ಇರುವ ಅಂತರ ಅಗಾಧವಾದುದು. ಅಲ್ಲಿ ಅವನು ಪರಿಶೀಲಿಸಿದ್ದ ಪೆನ ಕೋಡಸ್ ಎಂಬ ಪ್ರಾಚೀನ ಕುದುರೆಯೊಂದರ ಪಳೆಯುಳಿಕೆಯ ಸಹಾಯದಿಂದ ನವೀನ ಕುದುರೆಗೂ ತನ್ನ ಪೂರ್ವಜನಿಗೂ ಇರುವ ಅಂತರವನ್ನು ಹೆಣೆದು ಕುದುರೆಗಳ ವಂಶವಿಕಾಸವನ್ನು ಪೂರ್ಣವಾಗಿ ವಿವರಿಸಲು ಸಹಾಯವಾಯಿತು. ಹಾಗೆಯೇ ಇನ್ನೂ ಅನೇಕ ಉದಾಹರಣೆಗಳನ್ನು ಕೊಟ್ಟು ತನ್ನ ತತ್ವವನ್ನು ಬಲಪಡಿಸಿರುವನು.

ಜೀವಜಾತಿಗಳ ಹುಟ್ಟು ಪ್ರಕಟವಾಗುವ ಹೊತ್ತಿಗೆ ಜೀವ ವಿಜ್ಞಾನದ ಒಂದು ಅಂಗವಾದ ಭ್ರೂಣಶಾಸ್ತ್ರವೂ ಸಾಕಷ್ಟು ಬೆಳೆದಿತ್ತು. ತನ್ನ ತತ್ವ ಸಾಧನೆಗೆ ಡಾರ್ವಿನ್ ಆ ಕಡೆಯಿಂದಲೂ ಆವಶ್ಯಕವಾದ ಅಂಶಗಳನ್ನು ಒದಗಿಸಿಕೊಂಡನು. ಒಂದು ಪ್ರಾಣಿಯ ಭ್ರೂಣ

**ಭ್ರೂಣಶಾಸ್ತ್ರದ ಸಾಕ್ಷ್ಯ**

ಬೆಳೆಯುವಾಗ ಅದು ತನ್ನ ಪೂರ್ವಜರೆಲ್ಲರ ಅವಸ್ಥೆಗಳನ್ನೂ ದಾಟಿ ಕೊನೆಗೆ ಪ್ರೌಢಾವಸ್ಥೆಗೇರುವುದು. ಮಾನವನ ಭ್ರೂಣದ ಬೆಳವಣಿಗೆಯನ್ನು ಪರೀಕ್ಷಿಸಿದರೆ ಒಂದು ಅವಸ್ಥೆಯಲ್ಲಿ ಕತ್ತಿನ ಹತ್ತಿರ ಮೀನಿಗಿರುವಂತೆ ಕಿವಿರು ರಂಧ್ರಗಳು ಕಂಡುಬರುವುವು. ಹಾಗೆಯೇ ಇನ್ನೊಂದು ಅವಸ್ಥೆಯಲ್ಲಿ ಬಾಲ ಪ್ರಧಾನವಾಗಿ ಕಾಣುವುದು.

ಬೆಳವಣಿಗೆಯನಂತರ ಕಿವಿರೂ ಇರುವುದಿಲ್ಲ; ಬಾಲವೂ ಇರುವುದಿಲ್ಲ; ಹಾಗಿದ್ದರೂ ಆ ಅಂಗಗಳು ಬೆಳವಣಿಗೆಯಲ್ಲೇಕೆ ಗೋಚರಿಸಬೇಕು? ಹಾಗೆ ಗೋಚರಿಸುವುದರ ಅರ್ಥವೇನು? ಆ ಅರ್ಥವನ್ನು ವಿಕಾಸ ತತ್ವದ ದೃಷ್ಟಿಯಲ್ಲಲ್ಲದೆ ಮತ್ತಾವ ದೃಷ್ಟಿಯಲ್ಲಿ ವಿಮರ್ಶಿಸಬೇಕು? ಮಾನವನ ಬೆಳವಣಿಗೆಯುಲ್ಲೊಮ್ಮೆ ಕಿವಿರುಗಳು ಕಾಣಿಸಿಕೊಳ್ಳುವುದರಿಂದ ಕಿವಿರುಗಳುಳ್ಳ ಮತ್ಸ್ಯಪೂರ್ವಜನ ಅವಸ್ಥೆಯನ್ನು ಸ್ಮರಿಸಿದಂತಾಗುತ್ತದೆ; ಬಾಲ ಕಾಣುವುದರಿಂದ ಬಾಲವುಳ್ಳ ಮಂಗ ಪೂರ್ವಜರನ್ನು ಸ್ಮರಣೆಗೆ ತರುತ್ತದೆ. ಡಾರ್ವಿನ್ ಬಾರ್ನಕಲ್ ಎಂಬ ಸಮುದ್ರದ ನಳ್ಳಿಯೊಂದರ ಜೀವನ ಚರಿತ್ರೆಯ ಮೇಲೆ ಎಂಟು ವರ್ಷಗಳ ವರೆಗೂ ದುಡಿದು ಸಂಶೋಧಿಸಿದ್ದನೆಂದು ಹಿಂದೆ ವಿವರಿಸಿರುವೆವು. ಆದರ ಜೀವನ ಚರಿತ್ರೆಯಲ್ಲಿ ಪ್ರೌಢಾವಸ್ಥೆಯನ್ನು ಸೇರುವುದಕ್ಕೆ ಮುಂಚೆ ಅನಾವಶ್ಯಕವಾದ ಅನೇಕ ಅವಸ್ಥೆಗಳು ಗೋಚರಿಸುವುವು. ಹಾಗೆ ಅನಾವಶ್ಯಕವಾದ ಆ ರೂಪಗಳನ್ನು ತಾಳುವುದು ಅರ್ಥವಿಹೀನವಲ್ಲವೆಂದು ತೋರಿಸಿಕೊಟ್ಟು 'ಆ ಪ್ರಾಣಿ ತನ್ನ ಜೀವನ ಚರಿತ್ರೆಯಲ್ಲಿ ಪ್ರೌಢಾವಸ್ಥೆಗೇರುವುದಕ್ಕೆ ಮುಂಚೆ ಯಾವ ಯಾವ ಅವಸ್ಥೆಗಳನ್ನು ದಾಟುವುದೋ, ಕ್ರಮವಾಗಿ ಅಂಥ ಪೂರ್ವಜರನ್ನೆಲ್ಲ ಸ್ಮರಿಸಿಕೊಳ್ಳುವುದು' ಎಂದು ವಿವರಿಸಿ ಆ ಸಾಕ್ಷ್ಯವನ್ನು ತನ್ನ ತತ್ವ ಸಾಧನೆಗೆ ಉಪಯೋಗಿಸಿಕೊಂಡನು.

ಭ್ರೂಣಶಾಸ್ತ್ರ ಬೆಳೆದಂತೆ ಡಾರ್ವಿನ್ನನ ಈ ಸಾಕ್ಷ್ಯ ಸಾಧುವಾದುದೆಂದು ಸ್ಥಿರವಾಗುತ್ತಿದೆ. ಸಸ್ತನಿಯೊಂದರ ಭ್ರೂಣದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಮೊದಲು ಏಕಕೋಶತ್ವವೂ ಆ ಮೇಲೆ ಬಹುಕೋಶ ಜೀವನ ಚರಿತ್ರೆಯಲ್ಲಿ ಸ್ವರೂಪವೂ ಕಂಡುಬಂದ., ಮೀನು, ದ್ವಿಚರ ಪ್ರಾಣಿ, ವಂಶೇತಿಹಾಸದ ಉರಗ ಈ ವರ್ಗಗಳ ಗುಣವಿಶೇಷಗಳೂ ಕ್ರಮವಾಗಿ ಪಠನೆ ಗೋಚರಿಸಿಕೊಳ್ಳುವುವು. ಎಂದರೆ ಆ ಸಸ್ತನಿ ಅಂಥ ಪೂರ್ವಜರ ಅವಸ್ಥೆಯನ್ನೆಲ್ಲ ದಾಟಿ ಬಂದಿರಬೇಕೆಂಬ ಅರಿವಾಗುತ್ತದೆ. ಹೀಗೆಯೇ ವಿವಿಧ ಪ್ರಾಣಿಗಳ ಭ್ರೂಣದ ಬೆಳವಣಿಗೆಯನ್ನು ಅಭ್ಯಾಸಿಸಿದಾಗ ಅವು ವಿಕಾಸವಾದ ಮಾರ್ಗವನ್ನರಿತುಕೊಳ್ಳಬಹುದು. ಒಂದೊಂದು

ಪ್ರಾಣಿಯ ಜೀವನಚರಿತ್ರೆಯಲ್ಲೂ ಆ ಪ್ರಾಣಿಯ ಇಡೀ ವಂಶದ ಇತಿಹಾಸವೇ ಪಠನೆಯಾಗುವಂತಾಗುವುದು.

ಈ ದಿನ ಯಾವ ಯಾವ ಪ್ರಾಣಿಗಳು ಯಾವ ಯಾವ ಭೂಭಾಗಗಳಲ್ಲಿ ವಾಸಿಸುತ್ತಿವೆ, ಹಿಂದಿನವು ಎಲ್ಲೆಲ್ಲಿ ವಾಸಿಸುತ್ತಿದ್ದುವು ಎಂಬ ವಿಚಾರ ತನ್ನ ಪ್ರಪಂಚಪ್ರವಾಸದಿಂದ ಡಾರ್ವಿನ್ನನಿಗೆ ಪರಿಚಯವಾಗಿತ್ತು.

ಪ್ರಾಣಿಗಳ ಪ್ರಸರಣ

ಕೊಲಂಬಸ್ಸನು ಮೊದಲು ಅಮೆರಿಕಕ್ಕೆ ಹೋದಾಗ ಅಲ್ಲಿ ಕುದುರೆಗಳಿರಲಿಲ್ಲ. ಈಗಿರುವ ಕುದುರೆಗಳೆಲ್ಲ ಸ್ಪೈನ್ ಮೊದಲಾದ ಯೂರೋಪಿನ ದೇಶಗಳಿಂದ ತಂದವು. ಆದರೂ ಅಮೆರಿಕದಲ್ಲಿ ಪ್ರಾಚೀನಕಾಲದಲ್ಲಿ ಬದುಕಿದ್ದ ಕುದುರೆಗಳ ಪಳೆಯುಳಿಕೆಗಳು ದೊರಕಿದ್ದುವು. ನಿಜವಾಗಿ ನೋಡಿದರೆ ಅಲ್ಲಿ ದೊರೆಯುವಷ್ಟು ಕುದುರೆಯ ಪಳೆಯುಳಿಕೆಗಳು ಇನ್ನಾವ ಭೂಭಾಗದಲ್ಲೂ ದೊರಕಿಲ್ಲವೆನ್ನಬಹುದು. ಹಾಗೆ ಅಮೆರಿಕ ಪ್ರಾಚೀನಕಾಲದಲ್ಲಿ ಕುದುರೆಗಳ ಮಾತೃಸ್ಥಾನವಾಗಿದ್ದರೂ ಅಲ್ಲಿ ಏಕೆ ಅದರ ವಂಶವೇ ಗತಿಸಿಹೋಯಿತೆಂಬ ಸಮಸ್ಯೆ ಅವನ ಮನಸ್ಸಿನಲ್ಲಿ ಆಗಲೇ ಎದ್ದಿತು. ಹಿಂದೆ ಅಮೆರಿಕ ಯೂರೇಷಿಯಗಳೊಡನೆ ಕೂಡಿಕೊಂಡಿತ್ತು. ಆಗ ಭೂಮಾರ್ಗವಾಗಿ ಅಮೆರಿಕದಿಂದ ಬಂದ ಹಲವು ಕುದುರೆಗಳ ಸಂತತಿಯೇ ಇಂದು ಯೂರೇಷಿಯದಲ್ಲಿರುವುದು. ಆದರೆ ಅಮೆರಿಕದಲ್ಲಿ ಅನಂತರ ಎದ್ದ ಭಯಂಕರ ಜ್ವಾಲಾಮುಖಿಯೊಂದರ ಫಲವಾಗಿ ಅಮೆರಿಕಾಖಂಡ ಯೂರೇಷಿಯದಿಂದ ಪ್ರತ್ಯೇಕವಾದುದಲ್ಲದೆ ಸನ್ನಿವೇಶದಲ್ಲಿ ಉಗ್ರಬದಲಾವಣೆಯಾಗಿ ಅಲ್ಲಿನ ಕುದುರೆಗಳೆಲ್ಲ ಅಳಿದು ಭೂಗತವಾದುವು. ಆದುದರಿಂದಲೇ ಅಮೆರಿಕದಲ್ಲಿ ಕೊಲಂಬಸ್ಸನು ಹೋದಾಗ ಕುದುರೆಗಳಿರಲಿಲ್ಲ. ಡಾರ್ವಿನ್ ತನ್ನ ಪ್ರತಿಭಾಶಕ್ತಿಯಿಂದ ಈ ಸತ್ಯಾಂಶವನ್ನು ಅರಿತುಕೊಂಡು ಇಂದಿನ ಕುದುರೆಗಳೆಲ್ಲ ಅಮೆರಿಕದಲ್ಲಿ ಪಳೆಯುಳಿಕೆಗಳನ್ನು ಬಿಟ್ಟಿರುವ ಪೂರ್ವಜರಿಂದಲೇ ವಿಕಾಸವಾದವೆಂದು ತೋರಿಸಿಕೊಟ್ಟು ತನ್ನ ವಾದವನ್ನು ಸಮರ್ಥಿಸಿದನು. ಹಾಗೆಯೇ ಹಿಂದೊಮ್ಮೆ ಆಸ್ಟ್ರೇಲಿಯ, ಅಮೆರಿಕದೊಡನೆಯೂ ಏಷ್ಯದೊಡನೆಯೂ ಕೂಡಿಕೊಂಡಿತ್ತು. ದಕ್ಷಿಣ ಅಮೆರಿಕದಲ್ಲಿ ಹೇರಳವಾಗಿ ದೊರೆಯುವ ಒಂದು ಜಾತಿಯ ಪ್ರಾಚೀನ ಉಡದ ಪಳೆಯುಳಿಕೆಗಳು ನ್ಯೂಸಿಲೆಂಡಿನಲ್ಲೂ ದೊರೆ

ತಿವೆ. ಆದರೆ ಪ್ರಪಂಚದ ಮತ್ತೆ ಯಾವ ಭಾಗದಲ್ಲೂ ದೊರೆತಿಲ್ಲ. ಮೇಲಣ ಸಮಸ್ಯೆಯಂತೆ ಇದನ್ನೂ ಬಿಡಿಸಿ ಡಾರ್ವಿನ್ ತನ್ನ ವಾದವನ್ನು ಸಾಧಿಸಿಕೊಂಡಿರುವನು. 'ಮಾತೃಸ್ಥಾನವಾದ ಅಮೆರಿಕದಿಂದ ಆ ಪ್ರಾಚೀನ ಉಡದ ಜಾತಿ ವಲಸೆ ಹೊರಟು ಆಸ್ಟ್ರೇಲಿಯದ ನ್ಯೂಸಿಲೆಂಡಿನ ವರೆಗೂ ಬಂದಿರಬೇಕು; ಅಷ್ಟು ಹೊತ್ತಿಗೆ ಆಸ್ಟ್ರೇಲಿಯ ಇತರ ಖಂಡಗಳಿಂದ ಪ್ರತ್ಯೇಕ ವಾಗಿ ಹೋಯಿತು. ಆದುದರಿಂದ ನ್ಯೂಸಿಲೇಂಡಿನಿಂದ ಪ್ರಪಂಚದ ಇತರ ಭಾಗಗಳಿಗೆ ಆ ಪ್ರಾಣಿ ಹೋಗಲಾಗಲಿಲ್ಲ. ಆ ಕಾರಣದಿಂದಲೇ ಅದರ ಪಳೆಯುಳಿಕೆಗಳು ಇನ್ನೆಲ್ಲೂ ಇಲ್ಲದಿರುವುದು' ಎಂದು ತೋರಿಸಿಕೊಟ್ಟು ಅಮೆರಿಕದ ಉಡದಿಂದಲೇ ನ್ಯೂಸಿಲೆಂಡಿನದು ಉದಯವಾಗಿದೆಯೆಂದು ವಾದಿಸಿ ದನು.

ಇಂಥ ಪ್ರಬಲ ಸಾಕ್ಷ್ಯಗಳನ್ನು ಜನಜೀವನದ ಮುಂದಿಟ್ಟೊಡನೆಯೇ ಅನೇಕರು ಅವನ ವಿಕಾಸ ತತ್ವವನ್ನು ಒಪ್ಪಬೇಕಾಗಿ ಬಂದಿತು. ಬೈಬಲ್ಲಿನಲ್ಲಿ ಹೇಳಿರುವುದು ಹುಸಿಯೆಂಬುದರಲ್ಲಿ ಅನುಮಾನವೇ ಇಲ್ಲದಂತಾಯಿತು.

**ವಿಚಾರ ಕ್ರಾಂತಿಯ ಧ್ವಜ ಪತಾಕೆ**

ಡಾರ್ವಿನ್ನನ ಗ್ರಂಥ ಬೈಬಲ್ಲನ್ನು ಪ್ರತಿಭಟಿಸಿ ನಿಂತಿತಲ್ಲಾ ಎಂದು ಮತವಾದಿಗಳು ರೇಗಿದರು. ಶತಶತಮಾನ ಗಳಿಂದಲೂ ವೇದವಾಕ್ಯವೆಂದು ನಂಬಿದ್ದ ಬೈಬಲ್ಲಿನ ನುಡಿ ಹುಸಿಯೆಂದು ಸಾರಿದ ವಿಕಾಸವಾದ ನಾಸ್ತಿಕ ದೃಷ್ಟಿಯೆಂದು ಘೋಷಿಸಿ ದರು. ಇಷ್ಟೆಲ್ಲಕ್ಕೂ ಕಾರಣನಾದ ಡಾರ್ವಿನ್ನನ ಮೇಲೆ ಕ್ರೈಸ್ತಮತ ಆಗ್ರಹಗೊಂಡು ದೂಷಿಸಲಾರಂಭಿಸಿತು. ದೇಶಾದ್ಯಂತವೂ ಎರಡು ಗುಂಪುಗ ಳಾದುವು; ಬೈಬಲ್ಲನ್ನು ಪವಿತ್ರ ದೃಷ್ಟಿಯಿಂದ ನೋಡುತ್ತಿದ್ದ ಮತಾನು ಯಾಯಿಗಳ ಗುಂಪು ಒಂದು ಕಡೆ; ಮೌಢ್ಯವನ್ನು ಕಳೆಯಲು ವಿಚಾರ ದೀವಟಿಗೆಯನ್ನು ಜನಜೀವನದಲ್ಲಿ ಬೆಳಗಿದ ವಿಜ್ಞಾನಿಗಳ ತಂಡ ಇನ್ನೊಂದು ಕಡೆ. ಆಗಾಗ ಅಲ್ಲಲ್ಲಿ ಈ ಎರಡು ಪಂಥದವರಿಗೂ ಘರ್ಷಣೆಗಳಾಗು ತ್ತಿದ್ದುವು. ಹಿಂದಿನ ವಿಕಾಸವಾದಿಗಳಾರೂ ಜನಜೀವನದಲ್ಲಿ ಇಂಥ ವಿಚಾರಘರ್ಷಣೆಯನ್ನೆಬ್ಬಿಸಿರಲಿಲ್ಲ. ಬೈಬಲ್ಲಿನಲ್ಲಿ ಹೇಳಿರುವ ಸೃಷ್ಟಿಯ ಕ್ರಮ ಅರ್ಥವಿಹೀನವೆಂದು ವಿಜ್ಞಾನಿಗಳನೇಕರಿಗೆ ಗೊತ್ತಿದ್ದರೂ, ಅದನ್ನು ತೋರಿಸಿಕೊಡಲು ಅವರಿಗೆ ಸಲಕರಣೆಗಳಿರಲಿಲ್ಲ. ಅಂಥ ಸಲಕರಣೆಗಳನ್ನು

ಡಾರ್ವಿನ್ ಒದಗಿಸಿಕೊಟ್ಟನು. ಜೀವಜಾತಿಗಳ ಹುಟ್ಟು ಗ್ರಂಥ ಪ್ರಕಟವಾದೊಡನೆಯೇ ಅದರಲ್ಲಿ ಡಾರ್ವಿನ್ ಕೊಟ್ಟಿದ್ದ ಸಾಕ್ಷ್ಯಗಳ ಬಲದಿಂದ ವಿಜ್ಞಾನಿಗಳು ತಮ್ಮ ವಿಚಾರಕ್ರಾಂತಿಯ ಧ್ವಜಪತಾಕೆಯನ್ನು ಮತವಾದಿಗಳ ಮೇಲೆ ಎತ್ತಿ ಹಿಡಿಯಲು ಅವಕಾಶವಾಯಿತು.

ಸಮಾಜದಲ್ಲಿ ಘರ್ಷಣೆ

ಮೊದಮೊದಲು ಸಮಾಜದಲ್ಲಿ ಘರ್ಷಣೆಗಳು ಉಗ್ರವಾಗಿದ್ದುವು. ಒಬ್ಬರನ್ನೊಬ್ಬರು ವಾಚಾಮಗೋಚರ ನಿಂದಿಸಿದ ಕತೆಗಳೂ ಉಂಟು. ಎಂದಿನಿಂದಲೋ ಪೂಜ್ಯತೆಯನ್ನು ಪಡೆದಿದ್ದ ಬೈಬಲ್ಲನ್ನು ಕಟ್ಟುಕತೆಯೆಂದು ಕರೆಯುವರಲ್ಲಾ ಎಂದು ಮತವಾದಿಗಳಿಗೆ ಕ್ರೋಧವುಂಟಾಯಿತು. ಆದರೆ ಡಾರ್ವಿನ್ನನ ಗ್ರಂಥವನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಓದಿದವರೆಲ್ಲರೂ ಕ್ರಮೇಣ ವಿಕಾಸತತ್ವವನ್ನು ಒಪ್ಪುತ್ತಾ ಬಂದರು. ಅವನ ಜೀವಿತಕಾಲದಲ್ಲೇ ಅನೇಕ ಮತವಾದಿಗಳು ವಿಕಾಸವಾದವನ್ನೊಪ್ಪಿ ಆ ತತ್ವಜನಕನನ್ನು ಮನ್ನಿಸಲಾರಂಭಿಸಿದರು. ಅಂಥ ಅನೇಕರ ಹೆಸರುಗಳನ್ನು ಅವನು ತನ್ನ ಆತ್ಮಕಥೆಯಲ್ಲಿ ಉಲ್ಲೇಖಿಸಿರುವನು.

ಸಾರ್ವಜನಿಕ ಚರ್ಚೆ

ಕ್ರೈಸ್ತಮತವೇ ತನ್ನ ಮೇಲೆ ಆಗ್ರಹಗೊಂಡು ದೂರುತ್ತಿದ್ದರೂ ಡಾರ್ವಿನ್ ಮಾತ್ರ ಸಾರ್ವಜನಿಕವಾಗಿ ವಾದವಿವಾದಗಳಲ್ಲಿ ಎಂದೂ ಭಾಗವಹಿಸುತ್ತಿರಲಿಲ್ಲ. ಮತವಾದಿಗಳೂ ವಿಜ್ಞಾನಿಗಳೂ ಅಲ್ಲಲ್ಲಿ ಕಾದಾಡಿದ ಪ್ರಸಂಗಗಳು ಇನ್ನೂ ಬಳಕೆಯಲ್ಲಿವೆ. ಅವುಗಳಲ್ಲಿ ಒಂದನ್ನು ಇಲ್ಲಿ ಉಲ್ಲೇಖಿಸಬಹುದು. ಒಮ್ಮೆ ಬ್ರಿಟಿಷ್ ಅಸೋಸಿಯೇಷನ್ನಿನ ಆಶ್ರಯದಲ್ಲಿ ವಿಕಾಸವಾದದ ಮೇಲೆ ಸಾರ್ವಜನಿಕ ಚರ್ಚೆಯೊಂದು ಏರ್ಪಾಟಾಯಿತು. ಡಾರ್ವಿನ್ ಆ ಕಾರ್ಯದಲ್ಲಿ ಭಾಗವಹಿಸುವ ಸ್ವಭಾವದವನಲ್ಲವಾದುದರಿಂದ ಮತವಾದಿಗಳ ಅವಹೇಳನದಿಂದ ಅವನನ್ನು ರಕ್ಷಿಸಲು ವಿಜ್ಞಾನಪ್ರೇಮಿಗಳನೇಕರು ವಾದಕ್ಕೆ ಸಿದ್ಧರಾಗಿ ಬಂದು ನೆರೆದಿದ್ದರು. ಮತಾನುಯಾಯಿಗಳ ಮುಂದಾಳುತನವನ್ನು ವಹಿಸಿದ್ದ ವಿಲ್ಬರ್ ಫೋರ್ಸ್ ಎಂಬ ಪಾದ್ರಿ ಮಾತನಾಡುತ್ತ, ವಿಕಾಸವಾದಿಗಳೆಲ್ಲ ನಾಸ್ತಿಕರೆಂದೂ ಆ ವಾದ ಬರೀ ಕಲ್ಪನೆಯ ಕನಸೆಂದೂ ಸಾರಿ, ವಿಜ್ಞಾನಿಗಳನ್ನು ಹೀನಾಯವಾಗಿ ನಿಂದಿಸಿದನು. ಡಾರ್ವಿನ್ನನ ಪರಮ

ಮಿತ್ರನೂ ವಿಕಾಸ ವಾದದ ಉಗ್ರಪ್ರಚಾರಕನೂ ಆದ ಹಕ್ಸ್ಲಿಯ ಕಡೆ ತಿರುಗಿ, 'ನೀವು ಮಂಗಗಳ ಸಂತತಿಯವರೆಂದು ಹೇಳುವಿರಲ್ಲಾ, ಹಾಗೆ ಮಂಗವಾಗಿದ್ದವರು ನಿಮ್ಮಮ್ಮನೋ, ನಿಮ್ಮ ತಾತನೋ?' ಎಂದು ಆ ಪಾದ್ರಿ ಕುತ್ಸಿತವಾಗಿ ಪ್ರಶ್ನಿಸಿದನು. ಹಕ್ಸ್ಲಿ ವೇದಿಕೆಯ ಕಡೆಗೆ ಬಂದು, ವಿಕಾಸವಾದ ಕಲ್ಪನೆಯ ತತ್ವವಲ್ಲವೆಂದು ವಿವರಿಸಿ, 'ನಮ್ಮ ಪೂರ್ವಜರು ಮಂಗಗಳಾಗಿದ್ದರೂ ಚಿಂತೆಯಿಲ್ಲ; ಅದು ನನಗೆ ಅವಮಾನವಲ್ಲ. ಆದರೆ ತಮ್ಮ ಕಲೆ, ಸಂಸ್ಕೃತಿ ಮತ್ತು ವಾಕ್ಚಾತುರ್ಯಗಳನ್ನು ಇತರರ ಅವಹೇಳನಕ್ಕೂ, ಸುಳ್ಳು ಹೇಳುವುದಕ್ಕೂ ಉಪಯೋಗಿಸುವ ಪೂರ್ವಜನು ಮಾತ್ರ ನನಗೆ ಬೇಡ' ಎಂದು ವಿಲ್ಬರ್ ಫೋರ್ಸನ ಟೀಕೆಗೆ ಸಮಂಜಸ ಉತ್ತರವನ್ನು ಕೊಟ್ಟನು.- ಬೀಗಲ್ ನಾವೆಯ ಮುಖಂಡನಾಗಿದ್ದ ರಾಯನೂ ವಿಕಾಸ ತತ್ವದ ಪ್ರತಿಭಟನಕಾರರಲ್ಲೊಬ್ಬನಾಗಿದ್ದನು. ಅವನೂ ಆ ದಿನ ಮಾತನಾಡುತ್ತ ಬೈಬಲ್ಲನ್ನು ಸಭೆಯಲ್ಲಿ ಎತ್ತಿ ಹಿಡಿದು, ವಿಕಾಸ ದೃಷ್ಟಿಯನ್ನು ಖಂಡಿಸಿದನು. ಆ ತತ್ವ ನಿರೂಪಣೆಗೆ ತಾನು ಹೇಗೆ ಡಾರ್ವಿನ್ನನಿಗೆ ನೆರವಾಗಿದ್ದನೆಂದು ವಿವರಿಸಿ, ಅದಕ್ಕಾಗಿ ತನ್ನನ್ನೇ ದೂಷಿಸಿಕೊಂಡನು. ಅನೇಕ ವಿಜ್ಞಾನಿಗಳೂ ಡಾರ್ವಿನ್ನನ ಕಡೆ ವಾದಿಸಿ ವೀರಾವೇಶದಿಂದ ಮತವಾದಿಗಳನ್ನು ಪ್ರತಿಭಟಿಸಿದರು.

ಆರ್ಕಿಡ್ ಹೂಗಳಲ್ಲಿ ಗರ್ಭ ಕಟ್ಟುವಿಕೆ

ಹೊರಗೆ ಘರ್ಷಣೆಗಳಾಗುತ್ತಿದ್ದರೂ ಡಾರ್ವಿನ್ ಮೌನವಾಗಿ ಡಾನಿನಲ್ಲಿದ್ದನು. ಸಮಾಜದ ನಿಂದೆಗೆ ಮನಗೊಡದೆ ಸಂಶೋಧನೆಗಳಲ್ಲಿ ನಿರತನಾಗಿರುತ್ತಿದ್ದನು. ಅದುವರೆಗೆ ತಾನು ಕೊಟ್ಟಿದ್ದ ಸಾಕ್ಷ್ಯಗಳಲ್ಲಿ ಪ್ರಾಣಿವರ್ಗದವೇ ಹೆಚ್ಚಾಗಿದ್ದುವು. ಆದುದರಿಂದ ಸಸ್ಯವರ್ಗದಿಂದಲೂ ಆವಶ್ಯಕವಾದ ಅಂಕಿಅಂಶಗಳನ್ನು ಒದಗಿಸಿಕೊಳ್ಳಲು ಬಿಡುವಿಲ್ಲದೆ ದುಡಿದು ೧೮೬೨ರಲ್ಲಿ 'ಆರ್ಕಿಡ್ ಹೂಗಳಲ್ಲಿ ಗರ್ಭ ಕಟ್ಟುವಿಕೆ' ಎಂಬ ಗ್ರಂಥವನ್ನು ಪ್ರಕಟಿಸಿದನು. ಆರ್ಕಿಡ್ (ಸೀತಾಳಿ) ಹೂಗಳ ದಳ ಮೊದಲಾದ ಭಾಗಗಳು ಮಾರ್ಪಾಡಾಗಿರುವುದನ್ನು ವಿವರಿಸಿ, ಆ ಮಾರ್ಪಾಡುಗಳೆಲ್ಲ ಹೇಗೆ ಚಿಟ್ಟೆಯ ಸಹಾಯವನ್ನು ಪಡೆದು ಗರ್ಭ ಧರಿಸುವುದಕ್ಕಾಗಿಯೇ ಆಗಿವೆಯೆಂಬುದನ್ನು ತೋರಿಸಿಕೊಟ್ಟನು. ಸಾಮಾನ್ಯ ಹೂಗಳಿಗಿಂತಲೂ ಆರ್ಕಿಡ್ ಹೂಗಳು ವಿಚಿತ್ರ

ರಚನೆಯು. ದಳಗಳ ಕೆಳಗೆ ಆಳವಾದ ಕೊಳವೆಯಲ್ಲಿ ಮಧುರಸವಿರುತ್ತದೆ. ಉದ್ದವಾದ ಸೊಂಡಿಲುಳ್ಳ ಚಿಟ್ಟೆಗಳು ಆ ಹೂವಿನ ಮೇಲೆ ಕುಳಿತು ಮಧುರಸವನ್ನು ಕುಡಿಯಲು ಯತ್ನಿಸುವುವು. ಆಗ ಆ ಹೂವಿನ ಪರಾಗ ಧೂಳಿ (ಗಂಡು ಜನನವಸ್ತು) ಆ ಚಿಟ್ಟೆಯ ಮೈಗೆ ಅಂಟಿಕೊಳ್ಳುವುದು. ಆ ಚಿಟ್ಟೆ ಅದೇ ಜಾತಿಯ ಮತ್ತೊಂದು ಹೂವನ್ನು ಹೊಕ್ಕಾಗ ತನ್ನ ಮೈಮೇಲಿರುವ ಪರಾಗರೇಣುಗಳು ಆ ಹೂವಿನ ಶಲಾಕಾಗ್ರ (ಹೆಣ್ಣು ಜನನಾಂಗದ ಕಳಶ)ಕ್ಕೆ ತಗುಲಿಕೊಂಡು ಗರ್ಭಧಾರಣೆಯಾಗಿ ಮಿಶ್ರ ಸಂತಾನವಾಗುವುದು. ಅನೇಕ ಬಗೆಯ ಆರ್ಕಿಡ್ ಹೂಗಳಲ್ಲಿ ಗರ್ಭ ಕಟ್ಟುವ ಕ್ರಮವನ್ನು ಪರಿಶೀಲಿಸಿ, ಡಾರ್ವಿನ್ 'ನಿಸರ್ಗದಲ್ಲಿ ಹೂಗಳೆಲ್ಲ ಮಿಶ್ರ ಸಂತಾನವನ್ನೇ ಅಪೇಕ್ಷಿಸುವುವೆಂದೂ ಅದಕ್ಕಾಗಿ ತಮ್ಮ ಭಾಗಗಳಲ್ಲಿ ಆವಶ್ಯಕವಾದ ಮಾರ್ಪಾಡುಗಳನ್ನು ಮಾಡಿಕೊಂಡು ಅನ್ಯಪರಾಗರೇಣುವನ್ನು ಪಡೆಯುವುವೆಂದೂ ನಿರ್ಧರಿಸಿದನು. ಸಾಮಾನ್ಯವಾಗಿ ಹೂಗಳಲ್ಲಿ ಗಂಡು ಮತ್ತು ಹೆಣ್ಣು ಜನನಾಂಗಗಳು ಜೊತೆಯಲ್ಲೇ ಇರುತ್ತವೆ. ಆದರೂ ತಮ್ಮ ಪರಾಗ ರೇಣುವನ್ನೇ ಉಪಯೋಗಿಸುವುದನ್ನು ಕೈಲಾದ ಮಟ್ಟಿಗೂ ತಡೆಯುವುವೆಂದು ಆವನು ಅರಿತುಕೊಂಡು ಮಿಶ್ರಸಂತಾನದಿಂದ ಆ ಪೀಳಿಗೆ ಉತ್ತಮಗೊಳ್ಳುವುದೆಂದು ಸಲಹೆ ಮಾಡಿದನು. ಎರಡು ಹೂಗಳ ಅಥವ ಗಿಡಗಳ ಜನನವಸ್ತುಗಳು ಗರ್ಭಧಾರಣೆಯಲ್ಲಿ ಭಾಗ ವಹಿಸುವುದರಿಂದ ಆವೆರಡು ಗಿಡಗಳ ಅಥವ ಹೂಗಳ ಒಳ್ಳೆಯ ಗುಣಗಳೂ ಮಿಶ್ರಸಂತಾನದಲ್ಲಿ ಗೋಚರಿಸುವುವು. ಎಂದರೆ ಮಿಶ್ರಸಂತಾನದಿಂದಲೂ ಹೊಸ ಹೊಸ ಗುಣಗಳು ಹುಟ್ಟುತ್ತ ಬಂದು ಹಲವು ಸಂತತಿಗಳನಂತರ ಹೊಸ ಜಾತಿಗಳು ಹುಟ್ಟಲು ಅವಕಾಶವಾಗುವುದು. ಸಸ್ಯಶಾಸ್ತ್ರದ ಈ ಜ್ಞಾನವನ್ನು ಮೊದಲು ಬೆಳಕಿಗೆ ತಂದವನು ಡಾರ್ವಿನ್. ಹಿಂದಿನವರನೇಕರು ಚಿಟ್ಟೆಗಳು ಹೂವಿನ ಮೇಲೆ ಹಾರಾಡುತ್ತಿರುವುದನ್ನು ವರ್ಣಿಸಿದ್ದರೇ ಹೊರತು ಆವೆರಡಕ್ಕೂ ಇರುವ ಸಂಬಂಧವನ್ನು ವಿಜ್ಞಾನದೃಷ್ಟಿಯಿಂದ ವಿವರಿಸಿರಲಿಲ್ಲ. ಅವುಗಳ ಸಂಬಂಧದಿಂದ ಸೃಷ್ಟಿಯಲ್ಲಾಗುವ ವಿಕಸನಕಾರ್ಯವನ್ನು ಅಳೆದು ತೋರಿಸಿ, ಸಸ್ಯ ಶಾಸ್ತ್ರದಲ್ಲಿ ಹೊಸದೊಂದು ಭಾಗವನ್ನೇ ನಿರ್ಮಿಸಿಕೊಟ್ಟು ಡಾರ್ವಿನ್ ವಿವಿಧ ಸಂಶೋಧನೆಗಳಿಗೆ ಎಡೆಗೊಟ್ಟನು. ಅವನ ಈ ಸೇವೆ

ಯನ್ನು ಪ್ರಶಂಸಿಸಿ ರಾಯಲ್ ಸೊಸೈಟಿಯವರು ಡಾರ್ವಿನ್ನನಿಗೆ ಕೋಪ್ಲಿ ಸ್ವರ್ಣ ಪದಕವನ್ನಿತ್ತು ಗೌರವಿಸಿದರು.

೧೮೭೫ರಲ್ಲಿ 'ಸುರುಳಿ ಬಳ್ಳಿಗಳ ಚಲನೆ ಮತ್ತು ಸ್ವಭಾವ' ಎಂಬ ಮತ್ತೊಂದು ಗ್ರಂಥವೂ ಹೊರಬಿತ್ತು. ಅದು ೧೮೬೫ರಲ್ಲೇ ಲಿನಿಯನ್ ಸಂಘದ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಕಾಂಡದಲ್ಲಿ ಶಕ್ತಿಯಿಲ್ಲದ ಲತೆಗಳು ನೆಟ್ಟಗೆ ನಿಲ್ಲಲಾರವು. ದಟ್ಟವಾದ ಕಾಡುಗಳಲ್ಲಿ ಲತೆಗಳು ಕೆಳಗೆ ಉಳಿದರೆ ಅವುಗಳಿಗೆ ಬೇಕಾದ ಗಾಳಿಬೆಳಕುಗಳು ದೊರೆಯುವಂತಿಲ್ಲ. ಆದ್ದರಿಂದ ನಿರ್ಬಲಕಾಂಡದ ಸಸ್ಯಗಳು ಹತ್ತಿರವಿರುವ ಯಾವುದಾದರೂ ಆಶ್ರಯವನ್ನು ತಬ್ಬಿ ಮೇಲಕ್ಕೇರಿ ಗಾಳಿಬೆಳಕುಗಳನ್ನು ಪಡೆದುಕೊಳ್ಳುವುವು. ಡಾರ್ವಿನ್ ಅಂಥ ಅನೇಕ ಸಸ್ಯಗಳನ್ನು ಪರಿಶೀಲಿಸಿ ಅವೆಲ್ಲ ಆಶ್ರಯವನ್ನು ಹಿಡಿದುಕೊಂಡು ಹತ್ತುವುದಕ್ಕೆ ಅನುಕೂಲವಾದ ಅಂಗಗಳನ್ನು ಬೆಳೆಯಿಸಿಕೊಂಡಿರುವುದನ್ನು ತಿಳಿದುಕೊಂಡನು. ಜೀವನದ ಹೋರಾಟದಲ್ಲಿ ಜಯಪಡೆಯಲು ಅವು ಸುರುಳಿಗಳನ್ನೋ, ಮುಳ್ಳುಗಳನ್ನೋ, ಅಪ್ಪುಬೇರುಗಳನ್ನೋ ಬೆಳೆಯಿಸಿಕೊಂಡು ಆ ಮೂಲಕ ತಮ್ಮ ಆವಶ್ಯಕತೆಗಳನ್ನೊದಗಿಸಿಕೊಳ್ಳುವುವು. ಆ ಅಂಗಗಳು ಅವುಗಳಿಗೆ ಜೀವನದ ಸಂಗ್ರಾಮದಲ್ಲಿ ಎಷ್ಟೊಂದು ನೆರವಾಗಿವೆಯೆಂಬುದನ್ನು ಪ್ರಕಟಿಸಿದ ವಿಜ್ಞಾನಿಗಳಲ್ಲಿ ಡಾರ್ವಿನ್ನನೇ ಮೊದಲನೆಯವನು. ಸಸ್ಯಗಳಲ್ಲಿ ಯಾವ ವಿಧವಾದ ಚಲನೆಯೂ ಇಲ್ಲವೆಂದು ಅನೇಕರು ನಂಬಿದ್ದರು. ಆದುದರಿಂದಲೇ ಅವನ್ನು ಅಚರಗಳೆಂದು ಕರೆಯುತ್ತಿದ್ದುದು. ಡಾರ್ವಿನ್ ತನ್ನ ಗ್ರಂಥದಲ್ಲಿ 'ಅದು ಸರಿಯಲ್ಲ; ಅವೂ ಬೇಕಾದಾಗ ಚಲನೆಯನ್ನು ಪ್ರದರ್ಶಿಸುವುವು. ಸಸ್ಯಗಳಿಗೆ ತಾವಿರುವ ಸ್ಥಳದಲ್ಲೇ ಗಾಳಿ, ನೀರು, ಲವಣ ಮೊದಲಾದ ಆಹಾರ ಪದಾರ್ಥಗಳು ದೊರೆಯುವುದರಿಂದ ಸ್ಥಳದಿಂದ ಸ್ಥಳಕ್ಕೆ ಚಲಿಸಬೇಕಾಗಿಲ್ಲ. ಆದರೂ ಅವು ಜಡವಾಗಿಲ್ಲ. ಕೆಲವು ಲತೆಗಳ ಸುರುಳಿಗಳು ಆಶ್ರಯವನ್ನು ಕೈಬೆರಳಿನಂತೆ ಸುತ್ತಿ, ತಬ್ಬಿ, ಹತ್ತುವುದನ್ನು ನೋಡಿದರೆ, ಅವುಗಳ ಅದ್ಭುತ ಚಲನಶಕ್ತಿಯ ಅರಿವಾಗುವುದು. ಭೂಮಿಯ ಆಕರ್ಷಣೆಗೆ ಬೇರೂ, ಬೆಳಕಿನ ಆಕರ್ಷಣೆಗೆ ಕಾಂಡವೂ ಒಳಪಟ್ಟು ನಿರ್ದಿಷ್ಟಮಾರ್ಗದಲ್ಲಿ ಬೆಳೆಯುವುದನ್ನು ಪರಿಶೀಲಿಸಿದರೆ ಸಸ್ಯದಲ್ಲಿರುವ

ಸುರುಳಿ ಬಳ್ಳಿಗಳ ಸ್ವಭಾವ

ಚಲನೆಯ ಸ್ವಭಾವ ಗೊತ್ತಾಗುವುದು. ಎಳೆಯದಾಗಿರುವ ಲತೆಗಳ ಕುಡಿಗಳಿಗೆ ಅಪಾರ ಚಲನಶಕ್ತಿಯೂ ಸೂಕ್ಷ್ಮಸ್ಪರ್ಶನ ಶಕ್ತಿಯೂ ಇರುವುವು. ಕುಡಿ ಬಲಿತಂತೆ ಆ ಶಕ್ತಿಗಳು ಕುಂದುತ್ತಾ ಬರುವುವು. ಹಾಗೆಯೇ ಸಸ್ಯಗಳ ಬೇರ ತುದಿಯೂ ಅದ್ಭುತ ಚಲನಶಕ್ತಿಯುಳ್ಳದ್ದು' ಎಂದು ವಿವರಿಸಿ, ಸಸ್ಯಗಳೂ ಪ್ರಾಣಿಗಳಂತೆ ಸಚೇತನ ವಸ್ತುಗಳೆಂದು ತೋರಿಸಿಕೊಟ್ಟನು.

ಮನುಷ್ಯನು ಪಳಗಿಸಿದ ಸಸ್ಯಗಳು ಮತ್ತು ಪ್ರಾಣಿಗಳು

ಜೀವಜಾತಿಗಳ ಹುಟ್ಟು ಗ್ರಂಥ ಜನಜೀವನದಲ್ಲಿ ಕುತೂಹಲವನ್ನು ಹೆಚ್ಚಿಸುತ್ತಲೇ ಇತ್ತು. ಮತ್ತೆ ಮತ್ತೆ ಗ್ರಂಥ ಮುದ್ರಣವಾಗಬೇಕಾದುದರಿಂದ ಡಾರ್ವಿನ್ ಆ ಕಡೆಯೂ ಮನಸ್ಸು ಕೊಡಬೇಕಾಗಿತ್ತು. ಅಷ್ಟು ಹೊತ್ತಿಗೆ 'ಮನುಷ್ಯನು ಪಳಗಿಸಿದ ಸಸ್ಯಗಳು ಮತ್ತು ಪ್ರಾಣಿಗಳು' ಎಂಬ ಇನ್ನೊಂದು ಗ್ರಂಥವನ್ನೂ ಅವನು ಸಿದ್ಧಪಡಿಸಿದ್ದರೂ ವಿವಿಧ ಕಾರ್ಯಗಳ ಕಡೆ ಗಮನ ಕೊಡಬೇಕಾಗಿದ್ದುದರಿಂದ ಆ ಗ್ರಂಥವನ್ನು ೧೮೬೮ರ ವರೆಗೂ ಪ್ರಕಟಿಸಲಾಗಲಿಲ್ಲ. ಆ ಗ್ರಂಥದಲ್ಲಿ ತಾನು ಅಂದಿನವರೆಗೆ ಬೆಳೆಸಿದ್ದ ತೋಟದ ಸಸ್ಯಗಳ ಮತ್ತು ಸಾಕುಪ್ರಾಣಿಗಳ ವಿಷಯವನ್ನು ವಿವರಿಸಿದ್ದನು. ಮೊಲಗಳ ಮತ್ತು ಪಾರಿವಾಳಗಳ ಸಂತತಿಗಳಲ್ಲಿ ಹೊಸ ಹೊಸ ವಿಭೇದಗಳು ಹುಟ್ಟಿ ಆ ಮೂಲಕ ಮಾನವನ ಕೈವಾಡದಲ್ಲಿ ಹೇಗೆ ಹೊಸ ಹೊಸ ಜಾತಿಗಳೇ ವಿಕಾಸವಾಗುವುವೆಂಬುದನ್ನು ತೋರಿಸಿಕೊಟ್ಟಿರುವನು. ಪಾರಿವಾಳಗಳ ಸಾಕುವಿಕೆಯ ಮೇಲೆ ವಿಸ್ತಾರವಾಗಿಯೂ ಪ್ರಬುದ್ಧವಾಗಿಯೂ ಇರುವ ಒಂದು ಅಧ್ಯಾಯವನ್ನೇ ಅದರಲ್ಲಿ ಸೇರಿಸಿರುವನು. ಆ ಅಧ್ಯಾಯ ಪಾರಿವಾಳದ ವ್ಯಾಪಾರಿಗಳಿಗೆ ಕೈಪಿಡಿಯಾಗಿ ಪರಿಣಮಿಸಿತೆಂದರೆ ಆಶ್ಚರ್ಯವಲ್ಲ.

ಡಾರ್ವಿನ್ನನ ಸಂಶೋಧನೆಗಳ ಫಲವಾಗಿ ಭ್ರೂಣಶಾಸ್ತ್ರ ಬಹುವಾಗಿ ಬೆಳೆಯಿತೆನ್ನಬಹುದು. ಅಂದಿನವರೆಗೂ ತಾಯಿತಂದೆಗಳ ಗುಣಗಳು ಸಂತತಿಯಲ್ಲಿ ಹೇಗೆ ವಂಶಗತವಾಗುವುವೆಂಬುದರ ಜ್ಞಾನ ಸ್ವಲ್ಪವೂ ಇರಲಿಲ್ಲ.

ಆನುವಂಶೀಯ ಗುಣಗಳು

ಅಂಥ ಸಮಯದಲ್ಲಿ ಡಾರ್ವಿನ್ ತಾನು ನಡೆಸಿದ್ದ ಹಲವು ಸಂಶೋಧನೆಗಳ ಆಧಾರದ ಮೇಲೆ "ಶರೀರದ ಎಲ್ಲ ಭಾಗಗಳಲ್ಲೂ 'ಪ್ಯಾಂಜೀನು'ಗಳೆಂಬ ಸೂಕ್ಷ್ಮ ಬಿಂದುಗಳಿವೆ; ಆ ಬಿಂದುಗಳು ಎಲ್ಲ ಭಾಗಗಳಿಂದಲೂ ಜನನೇಂದ್ರಿ

ಯಕ್ಕೆ ಹರಿದು ಒಂದು ಸಂಗ್ರಹವಾಗುವುವು. ತಾಯಿತಂದೆಯರ ಜನನೇಂದ್ರಿಯಗಳ ಮೂಲಕ ಆ ಬಿಂದುಗಳು ಸಂತತಿಗೂ ಬರುವುವು. ಆ ಬಿಂದುಗಳೇ ಆನುವಂಶೀಯ ಗುಣಾಧಾರಿಗಳಾದುದರಿಂದ ತಾಯಿತಂದೆಯರಿಬ್ಬರ ಗುಣಗಳೂ ಸಂತತಿಯಲ್ಲಿ ಗೋಚರಿಸುವುವು' ಎಂದು ಸಲಹೆ ಮಾಡಿದನು. ಈ ಸಲಹೆ ಅಷ್ಟೊಂದು ಸಾಧುವಲ್ಲದಿದ್ದರೂ ಅದರ ಪರಿಚಯದಿಂದಲೇ ಮುಂದೆ ವೈಸ್‌ಮನ್ ಮೊದಲಾದವರು ಒಂದು ಹೆಜ್ಜೆ ಮುಂದಿಟ್ಟು ಹೊಸ ಬೆಳಕನ್ನು ಕಾಣಲು ಅವಕಾಶವಾಯಿತು. ಜೀವ ವಿಜ್ಞಾನದ ಬೇರೆ ಬೇರೆ ಭಾಗಗಳು ಶೈಶವಾವಸ್ಥೆಯಲ್ಲಿರುವಾಗ ಡಾರ್ವಿನ್ ಹೀಗೆ ಹೊಸ ತಳಹದಿಯನ್ನು ಹಾಕಿಕೊಟ್ಟು ಸತ್ಯಶೋಧನೆಯ ದಾರಿ ತೋರಿದುದೇ ಒಂದು ಹಿರಿಯ ಸೇವೆಯಾಗಿ ಪರಿಣಮಿಸಿತು.

# ೭. ಮಾನವನ ಉಗಮೋತ್ಸವ

'ಜೀವಜಾತಿಗಳ ಹುಟ್ಟು' ಗ್ರಂಥದಲ್ಲೇ ಮಾನವನು ಕೆಳವರ್ಗದ ಪ್ರಾಣಿಗಳಿಂದ ವಿಕಾಸವಾದವನೆಂಬ ಸತ್ಯಾಂಶವನ್ನು ಡಾರ್ವಿನ್ ಸೂಚಿಸಿದ್ದರೂ, ಅದನ್ನೇ ಪ್ರತ್ಯೇಕ ವಾದವಾಗಿ ಹೂಡಿರಲಿಲ್ಲ. ತನ್ನ ವಿಕಾಸ

**ಮಾನವನ ವಂಶ**

ತತ್ವ ಜನಜೀವನದಲ್ಲಿ ವಿಚಾರಕ್ರಾಂತಿಯನ್ನೆಬ್ಬಿಸಿ, ಸರಿಯಾದ ಹಿನ್ನೆಲೆಯನ್ನು ಸಿದ್ಧಪಡಿಸಿದನಂತರ ೧೮೭೧ರಲ್ಲಿ 'ಮಾನವನ ಅವತರಣ' ಎಂಬ ಮತ್ತೊಂದು ಗ್ರಂಥವನ್ನು ಪ್ರಕಟಿಸಿದನು. ಅದರಲ್ಲಿ 'ಮಾನವನೂ ಇತರ ಪ್ರಾಣಿಗಳಂತೆ ಒಂದು ಜೀವಿ; ಕೆಳವರ್ಗದ ಅವಸ್ಥೆಗಳನ್ನೆಲ್ಲ ದಾಟಿ ಸೃಷ್ಟಿಯ ಮಹೋನ್ನತ ಸ್ಥಾನವನ್ನು ಸೇರಿರುವನು.' ಎಂದು ವಿವರಿಸಿ, ಮಾನವನ ಹತ್ತಿರದ ಪೂರ್ವಜರು ಮಂಗಗಳಂಥ ಪ್ರಾಣಿಗಳೆಂದು ವಾದಿಸಿರುವನು. ಬುದ್ಧಿಶಕ್ತಿಯಲ್ಲೂ ಸನ್ನಿವೇಶಕ್ಕೆ ಹೊಂದಿಕೊಳ್ಳುವುದರಲ್ಲೂ ಮಾನವನು ಎಲ್ಲ ಪ್ರಾಣಿಗಳಿಗಿಂತಲೂ ಮೇಲ್ತರದವನು. ಇಂದಿನ ಎಲ್ಲ ಮಾನವರೂ 'ಹೋಮೋ ಸೇಪಿಯನ್ಸ್' ಎಂಬ ಒಂದೇ ಜಾತಿಗೆ ಸೇರಿದವರು. ಬೇರೆ ಬೇರೆ ಬುಡಕಟ್ಟುಗಳಾಗಿ ವಿಂಗಡಿಸುವುದು ಕೃತಕವಾದುದು.

ಹಿಂದೆ ವಿವರಿಸಿದಂತೆ 'ಮಾನವನನ್ನು ದೇವರು ತನ್ನ ಪ್ರತಿಬಿಂಬದಂತೆ ನಿರ್ಮಿಸಿ ಜೀವ ಕಳೆಯಿತ್ತನು. ಮಿಕ್ಕ ಪ್ರಾಣಿಗಳಿಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ಅವನದೇ ವಿಶೇಷ ಸೃಷ್ಟಿ' ಎಂಬುದು ಕ್ರೈಸ್ತ ಸಮಾಜದ ಅನಾದಿಕಾಲದ ನಂಬಿಕೆ. ೧೮೫೯ರಲ್ಲಿ ಡಾರ್ವಿನ್ ವಿಕಾಸ ತತ್ವವನ್ನು ಪ್ರಕಟಿಸಿದನಂತರ ಆ ನಂಬಿಕೆಯಲ್ಲಿ ಅನುಮಾನ ಹುಟ್ಟಿತು. ಮಾನವನು ಇಂದಿನ ರೂಪದಲ್ಲೇ ಆದಿಯಲ್ಲಿ ಸೃಷ್ಟಿಯಾಗಿದ್ದರೆ ವಿಕಾಸ ತತ್ವ ಮಾನವವರ್ಗಕ್ಕೆ ಅನ್ವಯಿಸುವುದಿಲ್ಲವೆ? ಹಾಗೆ ಅನ್ವಯಿಸಿದರೆ ಸೃಷ್ಟಿಯಾದಂದಿನಿಂದಲೂ ವಿಕಾಸವಾಗದೆ ಉಳಿದಿರುವನೆ? ಇಲ್ಲ, ಬೈಬಲ್ಲಿನ ವಾಕ್ಯ ಸುಳ್ಳೆ? ಸುಳ್ಳಾದರೆ, ಆದಿಮಾನವನ ರೂಪಾವುದಿರಬಹುದು? ಡಾರ್ವಿನ್ ಹೇಳುವಂತೆ ಮಾನವನು ಕೆಳವರ್ಗದಿಂದ ವಿಕಾಸವಾಗಿದ್ದರೆ

ಅವನ ಹತ್ತಿರದ ಪೂರ್ವಜರು ಹೇಗಿದ್ದರು? ಅಂಥ ಪೂರ್ವಜನಿಂದ ಉದಿಸಿದ ಮತ್ತಾವ ಪ್ರಾಣಿಗಳು ಇಂದು ಬದುಕಿರಬಹುದು? ಆದಿಮಾನವನ ರೂಪದಿಂದ ನಾವು ಈ ದಿನದ ಸ್ಥಿತಿಯನ್ನು ತಾಳಿದುದು ಹೇಗೆ? ಇತ್ಯಾದಿ ಪ್ರಶ್ನೆಗಳೆದ್ದು ವಿಚಾರಪರರ ಪರಿಶೀಲನೆಗೊಳಗಾಗಿದ್ದವು ೧೮೭೧ರಲ್ಲಿ ಡಾರ್ವಿನ್ ಪ್ರಕಟಿಸಿದ ಗ್ರಂಥ ಆ ಸಮಸ್ಯೆಗಳಿಗೆಲ್ಲ ಸಮಂಜಸ ಉತ್ತರವನ್ನು ಕೊಟ್ಟು ವಿಕಾಸ ತತ್ವವನ್ನು ಮತ್ತಷ್ಟು ಬಲಪಡಿಸಿತು.

ಮಾನವನ ಅವತರಣ ಗ್ರಂಥ ಪ್ರಕಟವಾದ ಮೊದಮೊದಲು ಸಾಮಾನ್ಯ ಜನರಲ್ಲಿ ತಪ್ಪು ಅಭಿಪ್ರಾಯ ಉಂಟಾಯಿತು. ಮತಪ್ರೇಮಿಗಳನೇಕರು ಆಕ್ರೋಶದಿಂದ 'ಮಾನವನು ಯಾವುದೋ ಮಂಗನ ಮರಿಯಂತೆ!' ಎಂದು ಅಪಪ್ರಚಾರ ಮಾಡಲು ಯತ್ನಿಸಿದರು. ಡಾರ್ವಿನ್ ಪ್ರತಿಪಾದಿಸಿದ್ದ ಮಾನವನು ಮಂಗನ ಸಂತತಿಯವನೆಂಬ ವಾದವನ್ನು ಕುತ್ಸಿತವಾಗಿ ಟೀಕಿಸಲಾರಂಭಿಸಿದರು. ಗ್ರಂಥವನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸದೆ ಕೇವಲ ಮತಾಭಿಮಾನದಿಂದ ಹಾಗೆ ಮಾಡಿದುದೇ ಇದಕ್ಕೆ ಕಾರಣವೆನ್ನಬೇಕು. ಆ ಗ್ರಂಥವಲ್ಲಿ ಈ ದಿನದ ಮಂಗಗಳಿಂದ ಮಾನವನು ಉದಿಸಿದನೆಂದು ಎಲ್ಲೂ ಹೇಳಿಲ್ಲ; ನಿರ್ದಿಷ್ಟವಾಗಿ, ಆವುದೋ ಪ್ರಾಚೀನಕಾಲದಲ್ಲಿದ್ದ ಮಂಗಗಳಂಥ ಪ್ರಾಣಿಗಳಿಂದ ಮಾನವವರ್ಗ ಪರಿಣಾಮಗೊಂಡು ವಿಕಾಸವಾಗಿರುವುದೆಂದೇ ಅಭಿಪ್ರಾಯಪಟ್ಟಿರುವನು. ಇತ್ತೀಚೆಗೆ ನಡೆದಿರುವ ವಿವಿಧ ಸಂಶೋಧನೆಗಳೂ ಅವನ ದೃಷ್ಟಿಯನ್ನೇ ದೃಢಪಡಿಸುತ್ತವೆ. ಆ ವಿಚಾರವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ.

ಹಿಂದೆ ಹೇಳಿದಂತೆ ಪ್ರಾಚೀನಕಾಲದ ಉರಗಜಾತಿಯೊಂದರಿಂದ ಈ ದಿನದ ಸಸ್ತನಿಗಳು ವಿಕಾಸವಾದುವು. ಅವುಗಳನ್ನು ಹನ್ನೊಂದು ಪಂಗಡಗಳಾಗಿ ವಿಂಗಡಿಸಿರುವರು. ಅವುಗಳಲ್ಲಿ 'ಪ್ರೈಮೇಟ್' ಅಥವಾ 'ಪ್ರಾಮುಖಿಗಳು' ಎಂಬುದೇ ಉನ್ನತ ವರ್ಗ. ಪ್ರಾಮುಖಿಗಳನ್ನು

**ಪ್ರಾಮುಖಿಗಳು** ಮೂರು ಗುಂಪುಗಳಾಗಿ ವಿಂಗಡಿಸಬಹುದು. ಅರ್ಧ ಕಪಿಗಳು; ಕಪಿಗಳು; ಮತ್ತು ಮಾನವರು. ಲೋರಿಸ್ (ಬಿದುರಿನ ಚದುರೆ), ಲೆಮ್ಯೂರ್ ಮೊದಲಾದವು ಅರ್ಧ ಕಪಿಗಳು. ಇವುಗಳಲ್ಲಿ ಬಿದುರಿನ ಚದುರೆ ಎಂಬುದು ನಮ್ಮ ದೇಶದ ಕಾಡುಗಳಲ್ಲಿದೆ.

ಮನುಷ್ಯರನ್ನು ಕಂಡರೆ ನಾಚಿಕೊಳ್ಳುವುದು. ಬುದ್ಧಿಶಕ್ತಿಯಲ್ಲೂ ಅಷ್ಟಾಗಿ ಮುಂದುವರಿದಿಲ್ಲ.

ಅರ್ಧ ಕಪಿಗಳಿಗಿಂತಲೂ ಹೆಚ್ಚು ವಿಕಾಸವಾದುವು ಪೂರ್ಣ ಕಪಿಗಳು. ಮಾನವನಿಗೂ ಈ ಕಪಿಗಳಿಗೂ ಅನೇಕ ಹೋಲಿಕೆಗಳಿವೆ. ಮೆದುಳಿನ ಬೆಳವಣಿಗೆಯಲ್ಲೂ ಗರ್ಭಕೋಶದ ರಚನೆಯಲ್ಲೂ ಅವು ಮಾನವನನ್ನು ಹೋಲುತ್ತವೆ ಪೂರ್ಣ ಕಪಿಗಳಿಗೆ ಮಾನವನಿಗಿರುವಂತೆ ಕೈ ಹೆಬ್ಬೆರಳುಗಳು ಇತರ ಬೆರಳುಗಳಿಗೆ ಅಭಿಮುಖವಾಗಿವೆ; ಆದರೆ ಮಾನವನ ಕಾಲಿನಲ್ಲಿ ಈ ಹೋಲಿಕೆ ಅಳಿಸಿಹೋಗಿದೆ; ಮಾನವನಿಗಿರುವಂತೆ ಪೂರ್ಣ ಕಪಿಗಳಿಗೂ ಎರಡೇ ಸ್ತನ್ಯ ಗ್ರಂಥಿಗಳಿವೆ. ಗಲ್ಲದ ಮಡಿಕೆಯ ದ್ವಿತ್ವದಲ್ಲೂ ಅಸ್ತಿ ಪಂಜರದ ರಚನೆಯಲ್ಲೂ ಹೆಚ್ಚು ಸಾಮ್ಯ ಕಂಡುಬರುತ್ತದೆ. ಒಟ್ಟಿನಲ್ಲಿ ಮಾನವನಿಗೂ ಪೂರ್ಣ ಕಪಿಗಳಿಗೂ ಮಿಕ್ಕ ಯಾವ ಪ್ರಾಣಿಯೊಡನೆಯೂ ಇಲ್ಲದಷ್ಟು ಸಾಮ್ಯವಿರುತ್ತದೆ. ಆದುದರಿಂದಲೇ ಡಾರ್ವಿನ್ ಇಂದಿನ ಮಂಗಗಳು ಮಾನವನಿಗೆ ಹತ್ತಿರದ ಸಂಬಂಧಿಗಳೆಂದು ಹೇಳಿರುವುದು.

ಪೂರ್ಣ ಕಪಿಗಳು

ಪೂರ್ಣ ಕಪಿಗಳಲ್ಲಿ ಎರಡು ವಿಧ. ಅಮೆರಿಕದ ಚಪ್ಪಟೆಮೂಗಿನ ಕಪಿಗಳು; ಯುರೋಪಿನ ಮತ್ತು ಆಫ್ರಿಕದ ಉನ್ನತ ಮೂಗಿನ ಕಪಿಗಳು; ಅಮೆರಿಕದ ಕಪಿಗಳ ನಾಸಿಕದ್ವಾರ ಪಾರ್ಶ್ವಕ್ಕೆ ತಿರುಗಿದೆ ಮಾನವನಿಗಿಂತ ಅವುಗಳಿಗೆ ನಾಲ್ಕು ಹಲ್ಲುಗಳು ಹೆಚ್ಚಾಗಿವೆ. ಉನ್ನತ ಮೂಗಿನ ಕಪಿಗಳು ಏಷ್ಯ, ಯೂರೋಪ್ ಮತ್ತು ಆಫ್ರಿಕಾಖಂಡಗಳಲ್ಲಿವೆ. ಅವುಗಳ ನಾಸಿಕದ್ವಾರ ನಮಗಿರುವಂತೆ ಕೆಳಮುಖವಾಗಿದೆ. ಎರಡು ದ್ವಾರಗಳಿಗೂ ಮಧ್ಯೆ ಮೃದ್ವಸ್ಥಿಯೊಂದು ಎತ್ತರವಾಗಿ ಬೆಳೆದಿರುವುದರಿಂದ ಮಾನವನಿಗಿರುವಂತೆ ಮೂಗು ಉನ್ನತವಾಗಿದೆ. ಅವುಗಳಿಗೆ ಮೂವತ್ತೆರಡು ಹಲ್ಲುಗಳು ಮಾತ್ರ. ಬಾಲಕ್ಕೆ ಸುರುಳಿ ಸುತ್ತಿಕೊಳ್ಳುವ ಶಕ್ತಿಯಿಲ್ಲ. ಆದುದರಿಂದ ಪೂರ್ಣ ಕಪಿಗಳಲ್ಲಿ ಉನ್ನತ ಮೂಗಿನ ಕಪಿಗಳೇ ಮಾನವನೊಡನೆ ಹೆಚ್ಚು ಸಾಮ್ಯ ತೋರಿಸುತ್ತವೆ.

ಅಮೆರಿಕದ ಮತ್ತು ಯೂರೋಪಿಯದ ಕಪಿಗಳು

ಉನ್ನತ ಮೂಗಿನ ಕಪಿಗಳಲ್ಲಿ ಚಿಂಪಂಜಿ, ಗೋರಿಲ್ಲ, ಒರಾಂಗುಟಾನ್ ಮತ್ತು ಗಿಬ್ಬನ್ ಕಪಿಗಳು ಮಾನವನನ್ನು ಅತ್ಯಂತ ಹೆಚ್ಚಾಗಿ ಹೋಲುವುದರಿಂದ ಅವುಗಳನ್ನು ಮಾನವಮಂಗಗಳೆಂದು ಕರೆಯುವರು. ಅವುಗಳ

ಮಾನವ ಮಂಗಗಳು

ಕೋರೆಹಲ್ಲು ಪ್ರಧಾನವಾಗಿದೆ; ಮುಸುಡಿ ಸ್ವಲ್ಪ ಉದ್ದ; ಸಾಮಾನ್ಯವಾಗಿ ಕೈಗಿಂತ ಕಾಲೇ ಉದ್ದ. ಗಿಬ್ಬನ್ ಮತ್ತು ಒರಾಂಗುಟಾನ್ ಮಂಗಗಳಲ್ಲಿ ಬಾಲವೇ ಇಲ್ಲ; ಇತರ ಮಂಗಗಳಿಗಿಂತ ಇವು ಎರಡು ಕಾಲಲ್ಲಿ ಚೆನ್ನಾಗಿ ನಡೆಯಬಲ್ಲುವು; ಗಲ್ಲದ ಎರಡು ಮಡಿಕೆಗಳೂ ಚೆನ್ನಾಗಿ ಬೆಳೆದಿವೆ; ಮಾನವನಿಗಿರುವಂತೆ ಬುರುಡೆ ಬೆನ್ನುಮೂಳೆಯ ಮೇಲೆ ನಿಂತಿದೆ. ಆದ್ದರಿಂದ ಇವೆರಡೂ ಮಾನವನನ್ನು ತುಂಬ ಹೋಲುತ್ತವೆ. ಗಿಬ್ಬನ್ ಮಂಗ ಸುಮಾತ್ರ, ಜಾವ, ಅರಕ್ಕಾನ್, ಇಂಡಿಯ ಮೊದಲಾದೆಡೆಗಳಲ್ಲಿದೆ; ಹಗಲಲ್ಲಿ ಮರಗಳ ಮೇಲೂ, ರಾತ್ರಿಯಲ್ಲಿ ಬಯಲುಪ್ರದೇಶದಲ್ಲೂ ವಾಸಿಸುವುದು; ಕೈ ಬೀಸಿಕೊಂಡು ಮಾನವನಂತೆ ನಡೆಯಬಲ್ಲುದು; ಶರೀರ ಮೂರಡಿ ಎತ್ತರವಾಗಿದ್ದರೂ ಮೆದುಳು ಅಪಾರವಾಗಿ ಬೆಳೆದಿದೆ; ಗಟ್ಟಿಯಾಗಿ ಕಿರಿಚಬಲ್ಲುದು; ಮರಿಗಳೆಂದರೆ ಬಲು ಪ್ರೇಮ. ಮಾನವನಂತೆ ಕೋಪತಾಪಾದಿಗಳನ್ನು ಪ್ರದರ್ಶಿಸಬಲ್ಲುದು. ಒರಾಂಗುಟಾನ್ ಸುಮಾತ್ರ, ಬೋರ್ನಿಯೊಗಳಲ್ಲಿ ವಾಸಿಸುತ್ತದೆ. ಇದು ಗಿಬ್ಬನ್ನಿನಂತೆ ಗಿರಿಗಳಲ್ಲಿರದೆ ಬಯಲಿನಲ್ಲಿ ವಾಸಿಸುತ್ತದೆ. ಮಾನವನಂತೆ ಮೇಲ್ಮುಖವಾಗಿ ಮಲಗಿ ಚಳಿಯಾದಾಗ ಮರದೆಲೆಗಳನ್ನು ಹೊದಿಸಿಕೊಳ್ಳುವುದಂತೆ. ಬುದ್ಧಿಶಕ್ತಿಯಲ್ಲಿ ಅಪಾರ ಬೆಳವಣಿಗೆಯಾಗಿದ್ದರೂ ಗಿಬ್ಬನ್ನಿನಷ್ಟು ಚುರುಕಾಗಿಲ್ಲ.

ಚಿಂಪಂಜಿ ಮತ್ತು ಗೋರಿಲ್ಲಗಳೂ ಅನೇಕ ಅಂಶಗಳಲ್ಲಿ ಮಾನವನನ್ನು ಹೋಲುತ್ತವೆ. ಚಿಂಪಂಜಿ ಆಫ್ರಿಕದ ಹಲವು ಕಡೆಗಳಲ್ಲಿದೆ. ಮುಂಗಾಲುಗಳು ಹಿಂಗಾಲುಗಳಿಗಿಂತ ತುಂಡು; ಮುಖದಲ್ಲೂ ಅಂಗೈಯಲ್ಲೂ ಕೂದಲಿಲ್ಲ. ಗೋರಿಲ್ಲ ಆಫ್ರಿಕದ ಹಲವೆಡೆಗಳಲ್ಲಿದೆ. ಅದು ೫–೬ ಅಡಿಗಳಷ್ಟು ಎತ್ತರವಾಗಿದ್ದು ಗಾತ್ರದಲ್ಲೂ ಎತ್ತರದಲ್ಲೂ ಮಾನವನನ್ನು ಹೋಲುವುದು. ಇದಕ್ಕೂ ಅಂಗಾಲು ಅಂಗೈಗಳಲ್ಲಿ ಕೂದಲಿಲ್ಲ. ಆದರೆ ಮುಂಗಾಲುಗಳು ಹಿಂಗಾಲುಗಳಿಗಿಂತ ಉದ್ದ.

ಹೀಗೆ ಮಾನವ ಮಂಗಗಳು ಅನೇಕ ಅಂಶಗಳಲ್ಲಿ ಮಾನವನನ್ನು ಹೋಲುವುದಾದರೂ ಎಲ್ಲ ಹೋಲಿಕೆಗಳೂ ಒಂದೇ ಜಾತಿಯಲ್ಲಿಲ್ಲ. ಚಿಂಪಂಜಿ ತಲೆಬುರುಡೆಯ ಆಕಾರದಲ್ಲೂ, ಗೋರಿಲ್ಲ ಎತ್ತರ, ಗಾತ್ರ, ಕೈಕಾಲುಗಳ ರಚನೆ ಮೊದಲಾದುವುಗಳಲ್ಲೂ ಮಾನವನನ್ನು ಹೋಲುವುವು. ಎದೆಯ ವಿಸ್ತೀರ್ಣದಲ್ಲೂ ಮಾನಸಿಕ ಬೆಳವಣಿಗೆಯಲ್ಲೂ ಗಿಬ್ಬನ್ ಹೆಚ್ಚು ಸಾಮ್ಯವನ್ನು ತೋರುತ್ತದೆ. ಹಾಗೆಯೇ ಒರಾಂಗುಟಾನ್ ಇನ್ನು ಹಲವು ವಿಧವಾದ ಹೋಲಿಕೆಗಳನ್ನು ತೋರಿಸುತ್ತದೆ. ಇವೆಲ್ಲ ಹೋಲಿಕೆಗಳನ್ನು ಪ್ರದರ್ಶಿಸುವ ಒಂದು ಜಾತಿಯ ಮಂಗ ಈ ದಿನ ಬದುಕಿಲ್ಲ. ಆದುದರಿಂದ ಇಂಥ ಕಪಿಗಳಾವುವೂ ಮಾನವರ ಪೂರ್ವಜರಲ್ಲ. ಮೇಲಣ ಎಲ್ಲ ಹೋಲಿಕೆಗಳನ್ನೂ ಪಡೆದಿದ್ದ ಮಂಗಜಾತಿಯೊಂದು ಪ್ರಾಚೀನಕಾಲದಲ್ಲಿದ್ದಿರಬೇಕು. ಅಂಥ ಪ್ರಾಚೀನ ಪೂರ್ವಜನಿಂದ ಒಂದು ಕಡೆ ಮಾನವನೂ, ಇನ್ನೊಂದು ಕಡೆ ಮಾನವ ಮಂಗಗಳೂ, ಹುಟ್ಟಿ ವಿವಿಧ ಮಾರ್ಗಗಳಲ್ಲಿ ವಿಕಾಸನಾಗಿರಬೇಕು. ಡಾರ್ವಿನ್ ಮಾನವನಿಗೆ ಮಂಗಪೂರ್ವಜತ್ವವನ್ನು ಕೊಟ್ಟಿರುವುದು ಈ ಅರ್ಥದಲ್ಲಿ. ಒಂದು ರೀತಿಯಲ್ಲಿ ನೋಡಿದರೆ ಮಾನವನಿಗೂ ಈ ದಿನದ ಮಾನವಮಂಗಗಳಿಗೂ ಸೋದರತ್ವವಿದೆಯೆಂದು ಹೇಳಬಹುದು. ಆದುದರಿಂದ ಇಂದಿನ ಮಾನವಮಂಗಗಳು ಮಾನವನಿಗಿಂತ ವಿಕಾಸಮಾರ್ಗದಲ್ಲೇನೂ ಹಿಂದುಳಿದವಲ್ಲ. ಒಬ್ಬ ಪೂರ್ವಜನಿಂದಲೇ ಹೊರಟು ತಮ್ಮದೇ ಒಂದಾದ ಮಾರ್ಗದಲ್ಲಿ ವಿಕಾಸವಾಗಿರುವುವು. ಮಾನವನು ಮತ್ತೊಂದು ಮಾರ್ಗದಲ್ಲಿ ವಿಕಾಸವಾಗಿ ಹೆಚ್ಚು ಅನ್ವಯಶಕ್ತಿಯನ್ನು ಪಡೆದು ಈ ದಿನದ ಸ್ಥಿತಿಗೆ ಬಂದಿರುವನು.

ಮಾನವ ಮಂಗಗಳು ಮಾನವನ ಸೋದರರು

ಪ್ರಾಚೀನಕಾಲದಲ್ಲಿದ್ದ ಮಂಗ ಪೂರ್ವಜನಿಂದ ಮಾನವನು ಪರಿಣಾಮಗೊಳ್ಳುವಾಗ ಮೂರು ಮುಖ್ಯಾಂಶಗಳಲ್ಲಿ ಮಾರ್ಪಾಡು ಹೊಂದಿರುವನು. ಮೊದಲನೆಯದಾಗಿ, ಎರಡು ಕಾಲುಗಳ ಮೇಲೆ ನಿಂತು ನಡೆಯುವಂತಾದುದು. ಅದರಿಂದ ಉದರದ ಅಂಗಗಳು ಸ್ವಲ್ಪ ಕೆಳಕ್ಕೆ ಸರಿದು, ಅವುಗಳನ್ನು ಹೊರತಕ್ಕ ಮಾಂಸಖಂಡಗಳು ಬಲವಾದುವು. ತಲೆಬುರುಡೆ ಬೆನ್ನೆಲುಬಿನ

ಮೂರು ಮುಖ್ಯ ಮಾರ್ಪಾಟುಗಳು

ಮೇಲೆ ನೆಟ್ಟಗೆ ನಿಲ್ಲುವಂತಾದುದೇ ಎರಡನೆಯ ಮಾರ್ಪಾಡು. ಇದರಿಂದ ಕಣ್ಣು ನೋಟ ಬಹು ದೂರದ ವರೆಗೂ ಹಾಯುವಂತಾಗಿ, ಶತ್ರುಗಳ ಆಗ ಮನವನ್ನರಿತುಕೊಂಡು ಎಚ್ಚರದಿಂದಿರಲು ಅವಕಾಶವಾಯಿತು; ರುಂಡ, ಮುಂಡ, ಕೈಕಾಲುಗಳನ್ನು ಬೇಕಾದ ಕಡೆಗೆ ತಿರುಗಿಸುವ ಶಕ್ತಿಬಂದು ವಿಷಮ ಸನ್ನಿವೇಶಗಳಲ್ಲಿ ಹೋರಾಡಲು ಅನುಕೂಲವಾಯಿತು. ನೇತ್ರ ಪಟುತ್ವ ಹೆಚ್ಚಿದಂತೆ ಮಿದುಳಿನ ಬೆಳವಣಿಗೆಯೂ, ಬುದ್ಧಿಶಕ್ತಿಯೂ ಹೆಚ್ಚಿದುವು. ಮೂರನೆಯದಾಗಿ ಕೈಗಳು ಬಿಡುವಾದುವು. ಇದರಿಂದ ಸನ್ನಿವೇಶದೊಡನೆ ಹೊಂದಿಕೊಳ್ಳಲು ಆವಶ್ಯಕವಾದ ಅನುಕೂಲಗಳನ್ನು ಕಲ್ಪಿಸಿಕೊಳ್ಳುವ ಅವಕಾಶ ದೊರೆಯಿತು. ಹೆಬ್ಬೆರಳು ಇತರ ಬೆರಳುಗಳೊಡನೆ ಅಭಿಮುಖವಾಗಿ ಮಾರ್ಪಟ್ಟಂತೆ ಪದಾರ್ಥಗಳನ್ನು ಹಿಡಿದುಕೊಂಡು, ತನ್ನಿಷ್ಟದಂತೆ ರಚಿಸಿಕೊಳ್ಳುವ ಶಕ್ತಿ ಬಂದಿತು.

ಡಾರ್ವಿನ್ನನ ಕಾರ್ಯ

ಆಫ್ರಿಕದ, ಯೂರೋಪಿನ ಅಥವಾ ಏಷ್ಯದ ಯಾವುದೋ ಪ್ರಾಚೀನ ಮಂಗ ಜಾತಿಯೊಂದು ಮಾನವನ ಪೂರ್ವಜನಿರಬೇಕೆಂದು ಹೇಳುತ್ತ ಡಾರ್ವಿನ್ 'ಅಂಥ ಮಂಗ ಪೂರ್ವಜನ ಮೈಮೇಲೆಲ್ಲ ಕೂದಲಿತ್ತು; ಕಿವಿಗಳು ಮೊನೆಯಾಗಿಯೂ ಚಲಿಸುವಂತೆಯೂ ಇದ್ದುವು; ಬಾಲವೂ ಇದ್ದಿರಬೇಕು' ಎಂದು ನಿರ್ಧರಿಸಿ ಅಂಥ ಪ್ರಾಣಿಗಳು ಕಾಡಿನಲ್ಲಿ ವಾಸಮಾಡುತ್ತಿದ್ದಿರಬೇಕೆಂದು ವಾದಿಸಿರುವನು. ಮಾನವನ ಉಗಮಸ್ಥಳದ ಮತ್ತು ಕಾಲದ ವಿಚಾರವಾಗಿ ನಿರ್ದಿಷ್ಟವಾದ ಅಭಿಪ್ರಾಯಕ್ಕೆ ಬರಲು ಅವನಿಗೆ ಸಾಧ್ಯವಾಗಲಿಲ್ಲ. ಇಂದೂ ಆ ವಿಚಾರಗಳನ್ನು ಖಚಿತವಾಗಿ ಹೇಳುವುದು ಕಷ್ಟ; ಆದರೂ ಡಾರ್ವಿನ್ನನ ಗ್ರಂಥದ ಮುಖ್ಯಾಭಿಪ್ರಾಯಗಳಾವುವೂ ಹುಸಿಯಾಗುವಂತಿಲ್ಲ. ಜೀವಶಾಸ್ತ್ರವಿನ್ನೂ ಅಷ್ಟಾಗಿ ಬೆಳೆಯದಿರುವಾಗ ತನ್ನ ಮುಂದಿದ್ದ ಸಹಾಯಸಲಕರಣೆಗಳನ್ನು ಉಪಯೋಗಿಸಿಕೊಂಡು, ಮಾನವನ ವಂಶವನ್ನರಿತುಕೊಂಡುದೇ ಅವನ ಮಹಾಪ್ರತಿಭೆಯ ಫಲವಾಗಿ.

ಮಂಗಪೂರ್ವಜನಿಂದ ಅಂದು ತಾನೆ ಮಾರ್ಪಾಡಾಗಿ ವಿಕಾಸವಾಗುತ್ತಿದ್ದ ಆದಿಮಾನವನ ಗುಣಧರ್ಮಗಳಾವುವೆಂಬುದು ಎಲ್ಲರಿಗೂ ಕುತೂ

ಹಲ ಹುಟ್ಟಿಸುವ ವಿಷಯ. ಹಾಗೆಯೇ ಅವನು ಉದಿಸಿದ ಸ್ಥಳ, ಕಾಲ ಮುಂತಾದುವೂ. ಇಂದಿನವರಾದ ನಾವು ಆ ಮಹಾ ಸಮಸ್ಯೆಗಳನ್ನು ಬಿಡಿಸಲು ಯತ್ನಿಸುವುದು ಸಾಹಸದ ಕೆಲಸ. ವಿವಿಧ ಪ್ರಾಚೀನ ಪ್ರಾಣಿಗಳು ಭೂಮಿಯಲ್ಲಿ ತಮ್ಮ ಪಳೆಯುಳಿಕೆಗಳನ್ನು ಬಿಟ್ಟಿರುವಂತೆ ಮಾನವನೂ ಬಿಟ್ಟಿರುವನು. ಇವುಗಳ ಸಹಾಯದಿಂದ ಆದಿಮಾನವನು ಎಲ್ಲಿ, ಎಂದು, ಹೇಗೆ ವಿಕಾಸ ವಾಗಿರಬಹುದೆಂಬುದನ್ನು ಸ್ವಲ್ಪಮಟ್ಟಿಗೆ ಊಹಿಸಬಹುದು.

ಆದಿಮಾನವನ ಗುಣ ಧರ್ಮಗಳು

ಮಾನವನು ಇಂಥ ಕಾಲದಲ್ಲೇ ಹುಟ್ಟಿದನೆಂದು ಹೇಳುವುದು ಸಾಧ್ಯ ವಿಲ್ಲ. ಆದರೆ ಆ ಕಾಲದ ಸುಮಾರನ್ನು ಊಹಿಸಬಹುದು. ಮಾನವ ಪಳೆಯುಳಿಕೆಗಳು ದೊರೆತಿರುವ ಭೂಮಿಯ ಪದರಗಳ ಪರಿಶೀಲನೆಯಿಂದ ಊಹಿಸುವುದಾದರೆ ಸುಮಾರು ಅರುವತ್ತು ಸಹಸ್ರ ವರ್ಷಗಳ ಹಿಂದೆ ಆದಿಮಾನವನು ಮಂಗಪೂರ್ವಜ ನಿಂದ ವಿಕಾಸವಾಗಿರಬೇಕು. ಮಂಗಪೂರ್ವಜನಿಂದ ಉದಯವಾಗುತ್ತಿದ್ದ ಆದಿಮಾನವನು ಮಂಗಗಳಿಗಿಂತ ಅತಿ ಹೆಚ್ಚು ಮಾರ್ಪಾಡಾಗಿರಲಿಲ್ಲವೆಂಬುದರಲ್ಲಿ ಸಂಶಯವಿಲ್ಲ. ಅಂಥ ಅವಸ್ಥೆಯಿಂದ ಕ್ರಮಕ್ರಮವಾಗಿ ವಿಕಾಸಹೊಂದುತ್ತಾ ಒಂದು ನಿಜವಾದ ಮಾನವನಾಗಿರ ಬೇಕು. ಆದಿಮಾನವನು ಎಂದು ಸ್ವತಃ ಆಯುಧಗಳನ್ನು ಮಾಡಿಕೊಂಡು ಉಪಯೋಗಿಸುವುದಕ್ಕಾರಂಭಿಸಿದನೋ ಅಂದಿನಿಂದ ನಿಜವಾದ ಮಾನವನಾದ ನೆನ್ನಬಹುದು.

ಆದಿಮಾನವನ ಕಾಲ

ಆದಿಮಾನವನು ಕಾಡುಮೇಡುಗಳಲ್ಲಿ ತಿರುಗಿ ಗೆಡ್ಡೆಗೆಣಸುಗಳನ್ನು ಹುಡುಕಿ, ತಿಂದು ಜೀವಿಸುತ್ತಿದ್ದನು. ಸಣ್ಣ ಸಣ್ಣ ಪ್ರಾಣಿಗಳನ್ನು ಕೊಂದು ಹಸಿಯ ಮಾಂಸವನ್ನು ತಿನ್ನುತ್ತಿರಬೇಕು. ಆ ಕಾರ್ಯಕ್ಕಾವಶ್ಯಕವಾದ ಆಯುಧಗಳನ್ನು ಮಾಡಿಕೊಳ್ಳುವ ಶಕ್ತಿ ಇನ್ನೂ ಬಂದಿರಲಿಲ್ಲ. ಆದುದರಿಂದ ಚೂಪಾದ ಕಲ್ಲುಗಳನ್ನಾರಿಸಿ ಕೊಂಡು ಆಯುಧಗಳನ್ನಾಗಿ ಉಪಯೋಗಿಸುತ್ತಿದ್ದಂತೆ ಕಾಣುತ್ತದೆ. ಅವನು ಅಂಗರಚನೆಯಲ್ಲೂ ಸ್ವಾಭಾವಿಕ ಗುಣಗಳಲ್ಲೂ ಬಹುವಾಗಿ ತನ್ನ ಮಂಗಪೂರ್ವಜನನ್ನು ಹೋಲುತ್ತಿದ್ದುದರಿಂದ ಆದಿ

ಪ್ರಾಚೀನ ಶಿಲಾಯುಗದ ಮಂಗಮಾನವರು

ಮಾನವನನ್ನು ಮಂಗಮಾನವ(ಅರೆನರ)ನೆಂದು ಕರೆಯುವುದುಂಟು. ಜಾವ, ಪೀಕಿಂಗ್, ರೋಢೇಷಿಯ ಮೊದಲಾದ ಕಡೆಗಳಲ್ಲಿ ಅಂಥ ಮಂಗ ಮಾನವನ ಪಳೆಯುಳಿಕೆಗಳು ದೊರೆತಿವೆ. ಅವು ಸುಮಾರು ೬೦ ಸಹಸ್ರ ವರ್ಷಗಳ ಹಿಂದಿನವೆಂದು ಊಹಿಸಿರುವರು. ಆ ಪಳೆಯುಳಿಕೆಗಳ ಜೊತೆಯಲ್ಲೇ ಚೂಪು ಕಲ್ಲುಗಳೂ ದೊರೆತಿರುವುದರಿಂದ ಅವೇ ಅವನ ಆಯುಧಗಳಿರಬೇಕೆಂದು ಊಹಿಸಬಹುದು. ಆ ಮಂಗಮಾನವನ ಕಾಲವನ್ನು ಪ್ರಾಚೀನಶಿಲಾಯುಗವೆಂದು ಕರೆಯುವರು.

ಮೇಲೆ ವಿವರಿಸಿದ ಪಳೆಯುಳಿಕೆಗಳು ನಿಜವಾದ ಮಾನವರದಲ್ಲ; ಮಂಗಪೂರ್ವಜನಿಗೂ ಮಾನವನಿಗೂ ಮಧ್ಯದ ಅವಸ್ಥೆಯ ಪ್ರಾಣಿಗಳವು. ಮಂಗಮಾನವನು ಕಾಲಕಳೆದಂತೆಲ್ಲ ಶಿಲೆಗಳನ್ನು ಕಡೆದು ಆಯುಧಗಳನ್ನು ಮಾಡಿಕೊಳ್ಳುವ ಶಕ್ತಿಯನ್ನು ಪಡೆದನು. ಅಂದಿನಿಂದ ಅವನು ನಿಜವಾದ ಮಾನವನಾದನು. ಆ ಕಾಲವನ್ನು ನವ ಶಿಲಾಯುಗವೆಂದು ಕರೆಯುವರು. ಅವನು ಕಲ್ಲಿನಿಂದ ಉಳಿ, ಬಾಚಿ, ಮೊದಲಾದುವನ್ನು ಮಾಡಿಕೊಂಡು ಉಪಯೋಗಿಸುತ್ತಿದ್ದನು. ಅವುಗಳಿಗೆ ಹಿಡಿಯಿರಲಿಲ್ಲ. ಅಷ್ಟು ಹೊತ್ತಿಗೆ ಅವನಿಗೆ ಶಿಲ್ಪಕಲೆಯಲ್ಲಿ ಅಭಿರುಚಿ ಬೆಳೆಯುತ್ತಿತ್ತೆಂದು ತೋರುವುದು; ಗುಹೆಗಳಲ್ಲಿ ವಾಸಿಸುತ್ತ ಕುಟುಂಬಗಳನ್ನು ನಿಂಗಡಿಸಿಕೊಂಡು ಸಾಮಾಜಿಕಜೀವನವನ್ನಾರಂಭಿಸಿದ್ದನು. ಕಾಡು ಪ್ರಾಣಿಗಳನ್ನು ಹಿಡಿದು, ಪಳಗಿಸಿ, ಸಾಕಲು ಮೊದಲು ಮಾಡಿದ್ದನು. ಅವನ ಪಳೆಯುಳಿಕೆಗಳು ಜರ್ಮನಿ, ಫ್ರಾನ್ಸ್, ಜಿಬ್ರಾಲ್ಟರ್, ಬೆಲ್ಜಿಯಂ ಮೊದಲಾದ ದೇಶಗಳಲ್ಲಿನ ಗುಹೆಗಳಲ್ಲಿ ದೊರೆತಿವೆ. ಅವುಗಳೊಡನೆ ಕುಡಿಕೆಮಡಕೆಗಳೂ ದೊರೆತಿರುವುದರಿಂದ ಅವುಗಳನ್ನು ಮಾಡಿಕೊಳ್ಳುವ ಶಕ್ತಿಯೂ ಅವನಿಗಿದ್ದಿರಬೇಕು. ಆ ಗುಹೆಗಳ ಗೋಡೆಯಲ್ಲಿ ಚಿತ್ರಗಳು ಕಂಡುಬರುವುದರಿಂದ ಅವನ ಮನಸ್ಸಿನಲ್ಲಾಗಲೇ ಪರಲೋಕ ಕಲ್ಪನೆಯೂ ಅಂಕುರವಾಗಿದ್ದಂತೆ ತೋರುವುದು. ಬೆಂಕಿಯನ್ನು ತಯಾರಿಸಿಕೊಂಡು ಆಹಾರವನ್ನು ಬೇಯಿಸಿಕೊಳ್ಳುವ ಶಕ್ತಿಯೂ ಇದ್ದಂತೆ ಕಾಣಬರುವುದು. ಅವನ ಕಾಲ ಸುಮಾರು ೫೦ ಸಹಸ್ರ ವರ್ಷಗಳ ಹಿಂದಿನದು. ಅವನಿಗಿನ್ನೂ ಮಾತನಾಡುವ ಶಕ್ತಿ ಇರಲಿಲ್ಲವೆಂದು ತೋರುತ್ತದೆ.

ನವಶಿಲಾಯುಗದ ನಿಯಾಂಡ್ರತಲದ ಮಾನವ

ಇಂದಿನ ಎಲ್ಲ ಮಾನವರು

ಲೋಹಯುಗದ ಕ್ರೋಮ್ಯಾಗ್ನನ್ ಮಾನವ

ನವಶಿಲಾಯುಗದ
ನಿಯಾಂಡ್ರತಲದ ಮಾನವ

ಪ್ರಾಚೀನ ಶಿಲಾಯುಗದ ಮಂಗಮಾನವ

ಈ ದಿನದ
ಮಾನವಮಂಗಗಳು

ಪ್ರಾಚೀನ ಮಂಗಪೂರ್ವಜ

---

**ಮೇಲಿನ ನಕ್ಷೆ ಮಾನವನ ವಿಕಾಸಮಾರ್ಗವನ್ನು ಸ್ಥೂಲವಾಗಿ ಸೂಚಿಸುತ್ತದೆ.**

ನವಶಿಲಾಯುಗದ ಮಾನವನನ್ನು ನಿಯಾಂಡ್ರತಲದ ಮಾನವನೆನ್ನುವರು. ಏಕೆಂದರೆ, ಅವನ ಪಳೆಯುಳಿಕೆಗಳು ಮೊಟ್ಟಮೊದಲು ಜರ್ಮನಿಯ ನಿಯಾಂಡ್ರತಲವೆಂಬ ಸ್ಥಳದ ಗುಹೆಯೊಂದರಲ್ಲಿ ದೊರೆತುವು. ಆನಂತರ ಅಂಥ ಪಳೆಯುಳಿಕೆಗಳು ಬೇರೆ ಬೇರೆ ಭೂಭಾಗಗಳಲ್ಲೂ ದೊರೆತುವು. ಮೊದಲು ನಿಯಾಂಡ್ರತಲದ ಮಾನವನು ಭೂಮಿಯ ಬೇರೆ ಬೇರೆ ಭಾಗಗಳಲ್ಲಿ ವಾಸಿಸುತ್ತಿದ್ದರೂ ಬರಬರುತ್ತಾ ಸನ್ನಿವೇಶದ ಬದಲಾವಣೆಗೆ ಹೊಂದಿ

ಲೋಹಯುಗದ
ಕ್ರೊಮ್ಯಾಗ್ನನ್
ಮಾನವ

ಕೊಳ್ಳುವ ಶಕ್ತಿ ಕುಂದುತ್ತಾ ಬಂದು ಅವನ ವಂಶವೇ ನಾಶವಾಯಿತು. ಅಷ್ಟು ಹೊತ್ತಿಗೆ ಮತ್ತೊಂದು ಮಾನವಜಾತಿ ಹೊಸ ಸನ್ನಿವೇಶದೊಡನೆ ಹೊಂದಿಕೊಂಡು ವೃದ್ಧಿಯಾಗುತ್ತಿತ್ತು. ಇವನನ್ನು ಕ್ರೊಮ್ಯಾಗ್ನನ್ ಮಾನವನೆಂದು ಕರೆಯುವರು. ಅವನು ಲೋಹಗಳನ್ನೂ ಅವುಗಳ ಉಪಯೋಗಗಳನ್ನೂ ಅರಿತುಕೊಂಡು ಆಯುಧ ಮೊದಲಾದವನ್ನು ಮಾಡಿಕೊಳ್ಳಲು ಮೊದಲು ಮಾಡಿದ್ದುದರಿಂದ ಅವನ ಕಾಲವನ್ನು ಲೋಹಯುಗವೆಂದು ಕರೆಯುವರು. ಸುಮಾರು ೨೦ ಸಹಸ್ರ ವರ್ಷಗಳಿಂದೀಚೆಗೆ ಅವನ ವಂಶ ಆರಂಭವಾಯಿತೆನ್ನುವರು. ಕ್ರೋಮ್ಯಾಗ್ನನ್ ಮಾನವನೇ ಇಂದಿನ ಎಲ್ಲ ಮಾನವರಿಗೂ ಮೂಲಪುರುಷನಂತೆ.

ಆದಿಮಾನವನ ಉಗಮಸ್ಥಾನ

ಆದಿಮಾನವನು ಉಗಮವಾದ ಸ್ಥಳದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ತನಗೆ ದೊರಕಿದ್ದ ಅಂಕಿಅಂಶಗಳ ಆಧಾರದ ಮೇಲೆ ಡಾರ್ವಿನ್ ಆಫ್ರಿಕದಲ್ಲಿ ಮಾನವನು ಉಗಮವಾಗಿರಬೇಕೆಂದು ಸಲಹೆ ಮಾಡಿರುವನು. ಮೇಲಾಗಿ ಅಲ್ಲಿ ಹಲವು ಜಾತಿಯ ಮಾನವಮಂಗಗಳು ಇಂದಿಗೂ ವಾಸಿಸುತ್ತಿರುವುದರಿಂದ ಆ ಖಂಡದಲ್ಲೇ ಮಾನವನು ವಿಕಾಸವಾಗಿರಬೇಕೆಂದು ಪ್ರತಿಪಾದಿಸಿರುವನು. ಸಾಮಾನ್ಯವಾಗಿ ಹೊಸ ಹೊಸ ಜೀವಜಾತಿಗಳ ಉಗಮೋತ್ಸವಕ್ಕೆ ಆವಶ್ಯಕವಾದ ಸನ್ನಿವೇಶಗಳು ಉಷ್ಣವಲಯದಲ್ಲಿವೆ. ಆ ದೃಷ್ಟಿಯಿಂದ ನೋಡಿ, ಮಾನವನು ದಕ್ಷಿಣ ಆಫ್ರಿಕದಲ್ಲಿ ಉಗಮವಾಗಿರಬೇಕೆನ್ನುವುದರಲ್ಲಿ ಸತ್ಯಾಂಶವಿದೆಯೆಂದು ಅವನು ಅಭಿಪ್ರಾಯಪಟ್ಟನು. ೧೯೨೫ರಲ್ಲಿ ದಕ್ಷಿಣ ಆಫ್ರಿಕದಲ್ಲಿ ದೊರೆತ ಪ್ರಾಚೀನ ಶಿಲಾಯುಗದ ಮಂಗಮಾನವನ ಪಳೆಯುಳಿಕೆಯೊಂದರ ಆಧಾರದ ಮೇಲೆ ಡಾರ್ವಿನ್ನನ ಅಭಿಪ್ರಾಯವನ್ನೇ ಹಲವು ಈಚಿನ ವಿಜ್ಞಾನಿಗಳೂ ಬಲಪಡಿಸಿದ್ದರು. ಆದರೆ ಸಂಶೋಧನೆಗಳು ಮುಂದುವರಿದಂತೆಲ್ಲ ಮಾನವನ ಉಗಮಕ್ಷೇತ್ರದ ವಿಚಾರದಲ್ಲಿ ಹೊಸ ಹೊಸ ಅಂಶಗಳು ಬೆಳಕಿಗೆ ಬರುತ್ತಿವೆ.

ಡಾರ್ವಿನ್ನನ ಕಾಲಕ್ಕೆ ಪಳೆಯುಳಿಕೆಗಳು ಅಷ್ಟಾಗಿ ಇನ್ನೂ ದೊರೆಯದಿದ್ದುದರಿಂದ ತನ್ನ ಗ್ರಂಥದಲ್ಲಿ ಮಾನವನ ಉಗಮಕ್ಷೇತ್ರವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಲಿಲ್ಲ. ಆಫ್ರಿಕದಲ್ಲಿ ದೊರೆತುದಕ್ಕಿಂತಲೂ

ಪ್ರಾಚೀನವಾದ ಪಳೆಯುಳಿಕೆಗಳು ಜಾವ, ಪೀಕಿಂಗ್, ಪಿಲ್ಟ್‌ಡೌನ್ ಮೊದ ಲಾದ ಕಡೆಗಳಲ್ಲಿ ಈಚೆಗೆ ದೊರೆತಿವೆ. ಎಲ್ಲಕ್ಕೂ ಪ್ರಾಚೀನವೆಂದು ನಂಬಲಾಗಿ ರುವ ಮತ್ತೊಂದು ಪಳೆಯುಳಿಕೆ ಹಿಮಾಲಯದ ಸಿವಾಲಿಕ್ ಪರ್ವತದಲ್ಲಿ ದೊರ ಕಿದೆ. ೧೯೩೭ರಲ್ಲಿ ಅಮೆರಿಕದ ಯೇಲ್ ವಿಶ್ವವಿದ್ಯಾನಿಲಯದವರು ಅದನ್ನು ಹುಡುಕಿ ತೆಗೆದು ಪರಿಶೀಲಿಸಿ, ಈ ದಿನ ಬದುಕಿರುವ ಮಾನವ ಮಂಗಗಳೂ ಪ್ರಾಚೀನ ಶಿಲಾಯುಗದ ಮಂಗಮಾನವನೂ ಆ ಪ್ರಾಣಿ ಯಿಂದಲೇ ಉದಯವಾಗಿರಬೇಕೆಂಬ ತೀರ್ಮಾನಕ್ಕೆ ಬಂದಿರುವರು. ಆದುದರಿಂದ ಆದಿಮಾನವನು ಏಷ್ಯದ ಮಧ್ಯಭಾಗದಲ್ಲಿ ಉದಯವಾಗಿರ ಬೇಕು. ಪ್ರಾಚೀನ ಶಿಲಾಯುಗಕ್ಕೆ ಮುಂಚೆ ಹಿಮಾಲಯ ಕ್ಷೇತ್ರವನ್ನು ದೊಡ್ಡ ಸಾಗರ ಆವರಿಸಿತ್ತು. ಆ ಕಾಲದ ಸುಮಾರಿನಲ್ಲಿ ಭೂಗರ್ಭದಲ್ಲಾದ ಉಗ್ರ ಬದಲಾವಣೆಗಳಿಂದ ಹಿಮಾಲಯ, ಹಿಂದೂಕುಷ್ ಆಲ್ಪ್ಸ್ ಪರ್ವತ ಶ್ರೇಣಿಗಳು ಹೊಸದಾಗಿ ಮೇಲಿದ್ದುವೆಂದೂ ಇಡೀ ಉಷ್ಣವಲಯವೇ ಸ್ವಲ್ಪ ದಕ್ಷಿಣಕ್ಕೆ ಸರಿಯಿತೆಂದೂ ಶಾಸ್ತ್ರಜ್ಞರು ವಿವರಿಸಿರುವರು. ಉಷ್ಣಪ್ರದೇಶ ದಕ್ಷಿಣಕ್ಕೆ ಸರಿದುದರಿಂದ ಅಂದು ತಾನೆ ಉದಯವಾಗಿದ್ದ ಮಂಗಮಾನ ವನು ದಕ್ಷಿಣಕ್ಕೆ ವಲಸೆ ಬಂದಿರಬೇಕು. ಹಾಗೆ ಬಂದ ಆದಿಮಾನವನ ಪಳೆಯುಳಿಕೆಯೇ ನಮಗೆ ಜಾವಾದಲ್ಲಿ ಸಿಕ್ಕಿರುವುದು. ಇದು ರಚನಾದಿ ವೈಚಿತ್ರ್ಯಗಳಲ್ಲಿ ಸಿವಾಲಿಕ್ ಪರ್ವತದಲ್ಲಿ ದೊರೆತುದಕ್ಕಿಂತಲೂ ಮುಂದು ವರಿದುದು. ಜಾವದ ಮಂಗಮಾನವನು ಅಂದು ತಾನೆ ಎದ್ದು ನಿಂತು ನಡೆಯಲು ಮೊದಲುಮಾಡಿದ್ದನೆಂದು ಆ ಬುರುಡೆಯ ಲಕ್ಷಣಗಳಿಂದ ತಿಳಿದುಬರುತ್ತದೆ. ಇದಕ್ಕೂ ಈಚಿನದು ಪೀಕಿಂಗಿನಲ್ಲಿ ದೊರೆತಿದೆ. ಹಿಮಾಲಯ ದಿಂದ ಆದಿಮಾನವನು ಆ ಕಡೆಗೂ ವಲಸೆ ಹೋಗಿರಬೇಕು. ಇವೆಲ್ಲ ಪಳೆ ಯುಳಿಕೆಗಳಿಗೂ ಈಚಿನದು, ಇಂಗ್ಲೆಂಡಿನ ಸಸೆಕ್ಸ್ (ಪಿಲ್ಟ್‌ಡೌನ್)ನಲ್ಲಿಯೂ ದೊರೆತಿದೆ. ಹೀಗೆ ಏಷ್ಯದ ಮಧ್ಯಭಾಗದಲ್ಲಿ ಆದಿಮಾನವನು ಉದಯವಾಗಿ ಪೂರ್ವಾರ್ಧಗೋಳದ ಎಲ್ಲ ಭಾಗಗಳಿಗೂ ವಲಸೆ ಹೋಗಿ ನೆಲಸಿರಬೇಕು. ಅವನೇ ಮುಂದೆ, ನವಶಿಲಾಯುಗದ ನಿಯಾಂದ್ರತಲದ ಮಾನವನಾಗಿ ವಿಕಾಸವಾಗುವನು. ಆಫ್ರಿಕ ಆಗ ಇಂಡಿಯದೊಡನೆ ಕೂಡಿದ್ದುದರಿಂದ ಆದಿಮಾನವನು ಆಫ್ರಿಕದ ಕಡೆಗೂ ಹೋಗಿರಬೇಕು. ಆದುದರಿಂದಲೇ

ರೊಢೇಷಿಯ ಮೊದಲಾದ ದಕ್ಷಿಣ ಆಫ್ರಿಕದ ಭಾಗಗಳಲ್ಲಿ ಮಂಗಮಾನವನ ಮತ್ತು ನಿಯಾಂಡ್ರತಲದ ಮಾನವನ ಪಳೆಯುಳಿಕೆಗಳು ದೊರೆತಿರುವುದು. ಪ್ರಾಚೀನ ಶಿಲಾಯುಗದ ಆದಿಮಾನವನಿಂದ ನಿಯಾಂಡ್ರತಲದ ಮಾನವನು ಉದಿಸಿ, ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಪ್ರಸರಿಸಿ, ಹಲವು ಕಾಲ ಪ್ರಬಲನಾಗಿ ಬಾಳಿದನು. ಆದರೆ ಬರಬರುತ್ತ ಸನ್ನಿವೇಶದ ಬದಲಾವಣೆಗ ಳೊಡನೆ ಹೊಂದಿಕೊಳ್ಳುವ ಶಕ್ತಿ ಅವನಿಗೆ ಕಡಮೆಯಾದಂತೆ ತೋರುತ್ತದೆ. ಆದುದರಿಂದಲೇ ಅವನ ವಂಶ ಕ್ರಮಕ್ರಮವಾಗಿ ಅಳಿದು ಹೋದುದು. ಅಷ್ಟು ಹೊತ್ತಿಗೆ ಆದಿ ಮಾನವನಿಂದಲೇ ಉದಯಿಸಿದ ಮತ್ತೊಂದು ಮಾನವ ವಂಶ ಪ್ರಬಲಸ್ಥಿತಿಗೆ ಬರುತ್ತಿತ್ತು. ಆ ವಂಶವನ್ನೇ ಕ್ರೊಮ್ಯಾಗ್ನನ್ ಮಾನವನೆಂದು ಹಿಂದೆ ಕರೆದಿರುವುದು. ನಿಯಾಂಡ್ರತಲದ ಮಾನವನು ಅಳಿದಂತೆ ಈ ಹೊಸ ಮಾನವನು ವಾತಾವರಣದೊಡನೆ ಜಯಪ್ರದವಾಗಿ ಹೊಂದಿಕೊಂಡು ಮುಂದುವರಿಯಲಾರಂಭಿಸಿದನು. ೧೯೩೩ರಲ್ಲಿ ಪ್ರೊ ಕೀತ್ ರವರು ಭೂಶೋಧನೆಯನ್ನು ನಡೆಸುತ್ತಿರುವಾಗ ಕಾರ್ಮೆಲ್ ಪರ್ವತದ ಗುಹೆಯಲ್ಲಿ ಎರಡು ಜಾತಿಯ ಮಾನವ ಪಳೆಯುಳಿಕೆಗಳು ದೊರೆತುವು; ಅವುಗಳಲ್ಲೊಂದು ಅಂದಿಗಾಗಲೇ ಅಳಿಯುತ್ತಿದ್ದ ನಿಯಾಂಡ್ರತಲದ ಮಾನವ ನದು; ಇನ್ನೊಂದು ಸನ್ನಿವೇಶದೊಡನೆ ಜಯಪ್ರದವಾಗಿ ಬಾಳಲು ಮೊದಲು ಮಾಡಿದ್ದ ಹೊಸ ಮಾನವನದು. ಈ ಕ್ರೋಮ್ಯಾಗ್ನನ್ ಮಾನವನೇ ಇಂದಿನ ಎಲ್ಲ ಮಾನವ ವರ್ಗಗಳಿಗೂ ಮೂಲಪುರುಷನೆಂದು ಹಿಂದೆಯೇ ವಿವರಿಸಿರುತ್ತೇವೆ. ಅವನು ಲೋಹವನ್ನು ತಯಾರಿಸಿಕೊಂಡು, ಆಯುಧ ಗಳನ್ನು ಮಾಡಿಕೊಂಡು, ಸಾಮಾಜಿಕ ಜೀವನವನ್ನಾರಂಭಿಸಿ, ಕಲೆ, ಸಂಸ್ಕೃತಿ ಗಳನ್ನು ಕ್ರಮಕ್ರಮವಾಗಿ ಕಟ್ಟಿದನು. ಅವನೇ ಅಮೆರಿಕಕ್ಕೂ ಏಷ್ಯದ ಮೂಲಕ ವಲಸೆ ಹೋಗಿ ನೆಲಸಿರಬೇಕು.

ಡಾರ್ವಿನ್ ತನ್ನ ಗ್ರಂಥದಲ್ಲಿ ಮಾನವನ ಮಾನಸಿಕ ಶಕ್ತಿ ಹೇಗೆ ಕೆಳ ವರ್ಗದ ಪ್ರಾಣಿಗಳಿಂದ ವಿಕಾಸವಾಯಿತೆಂಬುದನ್ನು ವಿವರಿಸಿರುವನು. ಅಂಥ ಕೆಳ ವರ್ಗದ ಪ್ರಾಣಿಗಳಲ್ಲಿ ಮಂಗವರ್ಗದ ಪ್ರಾಣಿಗಳು ಬುದ್ಧಿಶಕ್ತಿಯಲ್ಲಿ ಎಷ್ಟು ಹತ್ತಿರದವೆಂಬುದನ್ನು ಅನೇಕ ಉದಾಹರಣೆಗಳಿಂದ ತೋರಿಸಿಕೊಟ್ಟಿರು ವನು. ಅವುಗಳ ಮಾನಸಿಕ ಶಕ್ತಿಯನ್ನೂ, ಸ್ವಭಾವವನ್ನೂ ಅರಿತುಕೊಳ್ಳಲು,

ಡಾರ್ವಿನ್ ಲಂಡನ್ನಿನ ಬ್ರಿಟಿಷ್ ಮ್ಯೂಸಿಯಮ್ಮಿಗೆ ಹೋಗಿ, ಅಲ್ಲಿದ್ದ ಅನೇಕ ಜಾತಿಯ ಮಂಗಗಳನ್ನು ಪರೀಕ್ಷಿಸಿದ್ದನು. ಪ್ರಾಣಿ ವರ್ಗದ ಉನ್ನತ ಶಿಖರವನ್ನೇರಲು ಮಾನವನಿಗೆ ಅವನ ಬುದ್ಧಿಶಕ್ತಿ ಹೇಗೆ ನೆರವಾಯಿತೆಂಬುದನ್ನು ತನ್ನ ಗ್ರಂಥದಲ್ಲಿ ವಿವರಿಸಿ, ನಾಗರಿಕತೆ ಬೆಳೆದಂತೆ ಮಾನವನ ಆಧ್ಯಾತ್ಮಿಕ ದೃಷ್ಟಿ ಹೇಗೆ ಬೆಳೆಯಿತೆಂಬುದನ್ನು ತೋರಿಸಿಕೊಟ್ಟಿರುವನು.

ಮಾನಸಿಕಶಕ್ತಿಯ ಬೆಳವಣಿಗೆ

ಮಾನವನ ಎಲ್ಲ ಗುಣಗಳೂ ಕೆಳ ವರ್ಗದ ಪ್ರಾಣಿಗಳಿಂದಲೇ ವಿಕಾಸವಾದುವೆಂಬುದನ್ನು ಪ್ರಸ್ತಾಪಿಸುತ್ತ, ಡಾರ್ವಿನ್ ಆ ಗುಣಗಳು ಬೆಳೆದಂತೆ ಸಾಮಾಜಿಕ ಜೀವನ ಆರಂಭವಾದ ಕ್ರಮವನ್ನು ವಿವರಿಸಿರುವನು. ಆ ಗುಣಗಳು ಮಾನವವರ್ಗದಲ್ಲಿ ಸಮಾಜದ ಸುಖಶಾಂತಿಗೆ ನೆರವಾಗಲೆಂಬ ಹಿರಿಯ ಉದ್ದೇಶದಿಂದಲೇ ಬೆಳೆದಿರುವುವೆಂದು ವಿವರಿಸಿ, ಯಾವ ನೀತಿ ಸಮಾಜದ ಸುಖಶಾಂತಿಗಳಿಗಾಗಿ ಮನೋನಿಗ್ರಹವನ್ನು ಬೋಧಿಸುವುದೋ ಅಂಥ ನೈತಿಕ ಸಂಸ್ಕೃತಿ ಅತ್ಯುತ್ತಮವಾದುದು' ಎಂದು ಅಭಿಪ್ರಾಯಪಟ್ಟಿರುವನು. ತನ್ನ ಕಾರ್ಯದಿಂದ ಇನ್ನಿತರ ಸಚೇತನ ಜಗತ್ತಿಗೆ ಹಾನಿಯಾದೀತೆಂಬುದನ್ನು ಅರಿತುಕೊಳ್ಳುವುದೇ ಮಾನಸಿಕ ಬೆಳವಣಿಗೆಯ ಔನ್ನತ್ಯವೆಂದೂ ಹೇಳಿರುವನು.

ನೈತಿಕ ಉನ್ನತಿ

ಇಂದಿನ ಮಾನವಮಂಗಗಳ ಮತ್ತು ಮಾನವನ ಭ್ರೂಣದ ಬೆಳವಣಿಗೆಯಲ್ಲಿ ಕಂಡುಬರುವ ಸಾಮ್ಯ ಅವೆರಡಕ್ಕೂ ಇರುವ ಬಾಂಧವ್ಯವನ್ನು ತೋರಿಸುವುದೆಂದು ಡಾರ್ವಿನ್ ವಾದಿಸಿರುವನು. ಹಾಗೆಯೇ ಅಂಗರಚನೆಯಲ್ಲೂ ಮಾನವನ ಮತ್ತು ಮಂಗಗಳ ಸಂಬಂಧ ಕಂಡುಬರುವುದನ್ನು ವಿವರಿಸಿ ಮಾನವ ದೇಹದಲ್ಲಿರುವ ಕೋರೆಹಲ್ಲು, ಬಾಲದ ಕುರುಹು, ಮೊದಲಾದ ನೂರಾರು ಅವಯವಶೇಷಗಳೂ ಅದೇ ದೃಷ್ಟಿಯನ್ನು ಪೋಷಿಸುವುವೆಂದು ಒತ್ತಿ ಹೇಳಿರುವನು.

ಮಾನವ ಮತ್ತು ಮಂಗಗಳ ಬಾಂಧವ್ಯ

ಆಯುಧಗಳನ್ನು ಮಾಡಲು ಶಕ್ತನಾದ ಮೇಲೆ ಮಾನವನು ದುಷ್ಟ ಮೃಗಗಳಿಂದ ಹೇಗೆ ಅಜೇಯನಾದನೆಂಬುದನ್ನು ಹಿಂದೆ ವಿವರಿಸಿರುತ್ತೇವೆ.

ಸಾಮಾಜಿಕ ಜೀವನ ಮುಂದುವರಿದಂತೆ ನೀತಿಯೂ ಬೆಳೆದು ಬಂದಿತು. ತನ್ನ ಕರ್ಮಗಳನ್ನು ವಿಮರ್ಶಿಸುವ ವಿಚಾರಶಕ್ತಿ ಹೆಚ್ಚಿತು. ಎಲ್ಲರ ಸುಖವೇ ಉಚ್ಚನೀತಿಯ ಧ್ಯೇಯವೆಂಬ ವಿವೇಚನೆ ಅವನಲ್ಲುಂಟಾದ ಮೇಲೆ ಮನಸ್ಸಿನಲ್ಲಿ ದಯೆಯೂ ಅಂಕುರವಾಯಿತು. ಅನಂತರ ದೇವರೆಂಬ ಅತಿಮಾನುಷ ವ್ಯಕ್ತಿಯೊಂದರ ಭಾವನೆ ಜನಮನದಲ್ಲಿ ಹುಟ್ಟಿರಬೇಕು. ಮಾತನಾಡುವ ಶಕ್ತಿ ಪರಿಪಕ್ವವಾದಂತೆ ಭಾಷೆ ಕ್ರಮಕ್ರಮವಾಗಿ ರೂಪುಗೊಂಡು ಬೆಳೆಯಲನುಕೂಲವಾಗಿರಬೇಕು. ಆ ಮೂಲಕ ಕಲೆ, ಸಾಹಿತ್ಯ, ಸಂಸ್ಕೃತಿ ಮೊದಲಾದುವು ಬೆಳೆಯಲಾರಂಭಿಸಿದುವು. ಆಯಾ ಸಂಸ್ಕೃತಿಗೊಪ್ಪುವಂತೆ ಆಧ್ಯಾತ್ಮಿಕದೃಷ್ಟಿಯೂ ರೂಪುಗೊಳ್ಳಲು ಮೊದಲಾಯಿತು. ಇವೆಲ್ಲವನ್ನೂ ಡಾರ್ವಿನ್ ತನ್ನ ಗ್ರಂಥವಲ್ಲಿ ಕರತಲಾಮಲಕವಾಗಿ ವಿವರಿಸಿರುವನು.

ಕಲೆ, ಸಂಸ್ಕೃತಿ ಮೊದಲಾದವುಗಳ ಬೆಳವಣಿಗೆ

ಮಾನವವರ್ಗದಲ್ಲಿರುವ ಅತಿಸಂತಾನ ರೋಗರುಜಿನಾದಿಗಳಿಂದ ಹೇಗೆ ಮಿತಿಗಿಳಿಯುತ್ತಿರುವುದೆಂಬುದನ್ನು ವಿವರಿಸಿ, ಡಾರ್ವಿನ್ ಆ ಮೂಲಕ ನೈಸರ್ಗಿಕ ಚುನಾವಣೆ ಮಾನವವರ್ಗಕ್ಕೂ ತಪ್ಪಿದ್ದಲ್ಲವೆಂಬುದನ್ನು ತೋರಿಸಿ ಕೊಟ್ಟಿರುವನು; ಇಷ್ಟೊಂದು ಮುಂದುವರಿದ ಪ್ರಾಣಿಯಾದರೂ ಮಾನವನೂ ನೈಸರ್ಗಿಕ ಚುನಾವಣೆಗೆ ಕಟ್ಟುಬಿದ್ದಿರುವುದನ್ನು ನೋಡಿದರೆ ಅವನೂ ಎಲ್ಲ ಜೀವಿಗಳಂತೆ ವಿಕಾಸದ ಮೆಟ್ಟಿಲುಗಳನ್ನು ಹತ್ತಿಯೇ ಈ ಸ್ಥಿತಿಗೆ ಬಂದವನೆಂಬ ಸತ್ಯಾಂಶದ ಅರಿವಾಗುವುದೆಂದು ಮತವಾದಿಗಳಿಗೆ ಸವಾಲು ಹಾಕಿ, ಅದೊಂದೇ ಸಾಕ್ಷಿ ಬೈಬಲ್ಲಿನಲ್ಲಿರುವ ಮಾನವನ ವಿಶೇಷಸೃಷ್ಟಿಯನ್ನು ಸುಳ್ಳೆನಿಸಲು ಸಾಕೆಂದು ಘೋಷಿಸಿರುವನು. ಅವನ ಜೀವಜಾತಿಗಳ ಹುಟ್ಟು ಗ್ರಂಥ ಪ್ರಕಟವಾದಾಗ ಎದ್ದ ಸಮಾಜದ ಅಲ್ಲೋಲಕಲ್ಲೋಲ ಸ್ವಲ್ಪಸ್ವಲ್ಪವಾಗಿ ಶಾಂತವಾಗುತ್ತ ಬಂದಿದ್ದರೂ ಮಾನವನ ಅವತರಣ ಪ್ರಕಟವಾದೊಡನೆ ಮತ್ತೆ ಇಮ್ಮಡಿಯಾಗಿ ಘರ್ಷಣೆಗಾರಂಭವಾಯಿತು. ಮಾನವೇತರ ಪ್ರಾಣಿಗಳು ತಮಗಿಂತಲೂ ಕೆಳವರ್ಗದ ಪ್ರಾಣಿಗಳಿಂದ ಹುಟ್ಟಿದುವೆಂದು ಹೇಳಿದಾಗ ಸಮಾಜವೇನೋ ಕೆರಳಿತ್ತು; ಆದರೆ ಡಾರ್ವಿನ್ ಮತ್ತೊಂದಡಿ ಮುಂದಿಟ್ಟು, ಮಾನವನು ಮಂಗನಂಶಜನೆಂದು ಪ್ರಕಟಿಸಿದಾಗ ಮತಾನುಯಾಯಿಗಳ

ಮತವಾದಿಗಳಿಗೆ ಸಮಾಧಾನ

ಸಹನೆ ಮೀರಿ ಮೀರಿತು; ವಿಜ್ಞಾನಕ್ಕೂ ಮತಕ್ಕೂ ಇದ್ದ ಅಂತರ ಹೆಚ್ಚುತ್ತ ಬಂದಿತು. 'ದೈವಪ್ರತಿಭೆಯಿಂದ ನಿರ್ಮಾಣವಾದ ಮಾನವನಿಗೆ ವಿಜ್ಞಾನಿಗಳು ಮಂಗಪೂರ್ವಜತ್ವವನ್ನು ಕೊಟ್ಟರಲ್ಲಾ!' ಎಂದು ಮತಪ್ರೇಮಿಗಳು ಹಾಹಾಕಾರಪಟ್ಟುಕೊಂಡರು. ಹಾಗೆ ನೊಂದುಕೊಳ್ಳುತ್ತಿದ್ದ ಮತವಾದಿಗಳಿಗೆ ಡಾರ್ವಿನ್ ತನ್ನ ಗ್ರಂಥವಲ್ಲಿ ಸಮಂಜಸ ಉತ್ತರವನ್ನಿತ್ತು, ಸಮಾಧಾನ ಹೇಳಿರುವನು. 'ಪ್ರಾಚೀನಕಾಲದ ಯಾವುದೋ ಮಂಗವೊಂದು ನಮ್ಮ ಪೂರ್ವಜನೆಂದು ಯಾರೂ ನಾಚಿಕೊಳ್ಳಬೇಕಾಗಿಲ್ಲ; ಅದರ ಬದಲು, ಈ ದಿನದ ನಮ್ಮ ಹೆಮ್ಮೆಯ ಸರ್ವಸ್ವವೂ ಆ ದೀನ ಮಂಗಗಳಲ್ಲಿ ಸೂಕ್ಷ್ಮವಾಗಿ ಅಡಗಿದ್ದಿತೆಂಬ ದಿವ್ಯ ಸತ್ಯಾಂಶವನ್ನು ಹೆಮ್ಮೆಯಿಂದ ಅರಿತುಕೊಂಡು ಅಂಥ ಪೂರ್ವಜರನ್ನು ಸ್ಮರಿಸಿಕೊಳ್ಳುವುದು ನಮ್ಮ ಕರ್ತವ್ಯ' ಎಂದು ಒತ್ತಿ ಹೇಳಿರುವನು.

ಸಮಾಜದಲ್ಲಿ ಘರ್ಷಣೆಗಳು ಆಗುತ್ತಲೇ ಇದ್ದುವು. ವಿಜ್ಞಾನಿಗಳೂ ಮತವಾದಿಗಳೂ ಒಬ್ಬರನ್ನೊಬ್ಬರು ಪ್ರತಿಭಟಿಸುತ್ತಲೇ ಇದ್ದರು. ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಮತಧರ್ಮದ ಪೀಠಗಳಲ್ಲೂ ಅನೇಕವೇಳೆ ಇಂಥ ಪ್ರಸಂಗಗಳು ನಡೆಯುತ್ತಿದ್ದುವು. ಒಮ್ಮೆ, ಇಂಗ್ಲೆಂಡಿನ ಪ್ರಧಾನ ಅಮಾತ್ಯನಾಗಿದ್ದು ವಿಖ್ಯಾತರಾಜಕಾರಣಪಟುವೆನಿಸಿಕೊಂಡ ಡಿಸ್ರೈಲಿ ಚರ್ಚಿಗೆ ಹೋಗಿದ್ದನಂತೆ. ಪಾದ್ರಿಯೊಬ್ಬನು ಡಾರ್ವಿನ್ನನ ವಾದವನ್ನು ಖಂಡಿಸುತ್ತ 'ಮಾನವನು ಪವಿತ್ರನಾದವನು. ಅವನೆಂದಿಗೂ ಕೀಳುವರ್ಗದ ಮಂಗಗಳಿಂದ ಬಂದವನಲ್ಲ. ಅವನು ದೈವಾಂಶ ಸಂಭೂತ' ಎಂದು ಘೋಷಿಸಿದಾಗ ಡಿಸ್ರೈಲಿ ಎದ್ದು 'ಮಾನವನು ದೇವತೆಗಳಿಂದ ಕೀಳ್ಮಟ್ಟಕ್ಕೆ ಇಳಿದನೆನ್ನುವುದಕ್ಕಿಂತ ಮಂಗಗಳಿಂದ ಮೇಲ್ಮಟ್ಟಕ್ಕೆ ಏರಿದನೆಂಬುದು ಸಮ್ಮತವಾದುದು. ಏಕೆಂದರೆ, ಕೆಳವರ್ಗದಿಂದ ಬಂದ ಮಾನವನು ಕ್ರಮಕ್ರಮವಾಗಿ ಉತ್ತಮಸ್ಥಿತಿಯ ಕಡೆಗೆ ಸಾಗುತ್ತಿರಬೇಕಷ್ಟೆ. ಮೇಲಿನ ದೇವತ್ವದಿಂದ ಬಿದ್ದವನಾಗಿದ್ದರೆ ಅವನಿಗೆ ಅಧೋಗತಿಯೇ ಸಿದ್ಧ' ಎಂದು ಡಾರ್ವಿನ್ನನ ವಾದದ ಶ್ರೇಷ್ಠತೆಯನ್ನು ವಿವರಿಸಿದನಂತೆ.

ಮಾನವನಂಥ ಮಹೋನ್ನತ ಪ್ರಾಣಿಯೊಂದನ್ನು ನಿರ್ಮಿಸಲು ಪ್ರಕೃತಿ ಅನಂತಕಾಲದಿಂದ ಅಹೋರಾತ್ರಿಯೂ ದುಡಿದು, ವಿವಿಧ ಪ್ರಯೋಗಗಳನ್ನು

ನಡೆಸಿ ಹೇಗೆ ವಿಜಯಿಯಾಯಿತೆಂಬುದನ್ನು ಡಾರ್ವಿನ್ ಅರಿತುಕೊಂಡಿದ್ದನು.

ಸೃಷ್ಟಿಯ ಹೆಗ್ಗುರಿ

ಒಂದೊಂದು ಕೆಳವರ್ಗವನ್ನು ನಿರ್ಮಿಸಿದಾಗಲೆಲ್ಲ ಮಾನವನ ಉದಯಾಕಾಂಕ್ಷೆಯೇ ಸೃಷ್ಟಿಯ ದಿವ್ಯ ಗುರಿಯಾಗಿದ್ದಿರಬೇಕು. ತನ್ನ ಸೌಂದರ್ಯವನ್ನೆಲ್ಲ ಕಂಡು ಅನುಭವಿಸಿ ಆನಂದಿಸುವಂಥ ಜೀವಿಯೊಂದು ಉದಯವಾದಾಗ ಪ್ರಕೃತಿ ಎಷ್ಟು ಆನಂದದಿಂದ ಹಿಗ್ಗಿ ನಲಿದಿರಬೇಕು! 'ಕೆಲಸಕ್ಕೆ ಬಾರದ ಕಾಡು ಪ್ರಾಣಿಗಳು ನಮ್ಮ ಪೂರ್ವಜರೇ?' ಎಂದು ಹೇಸಿಕೊಳ್ಳುವವರನ್ನು ಕುರಿತು ಡಾರ್ವಿನ್ 'ನಮ್ಮೀ ಸ್ಥಾನವನ್ನೇರಲು ಅಂಥ ಕೆಳವರ್ಗದ ಪ್ರಾಣಿಗಳು ಒಂದೊಂದು ಮೆಟ್ಟಲಿನಂತೆ ಪರಿಣಮಿಸಿರುವುವೆಂಬುದನ್ನು ಮರೆಯಬಾರದು' ಎಂದು ಎಚ್ಚರಿಸಿರುವನು. 'ಬೈಬಲ್ಲಿನಲ್ಲಿ ಜೀವರಹಿತ ವಸ್ತುವೊಂದರಿಂದ ಮಾನವನ ನಿರ್ಮಾಣವಾಯಿತೆಂದು ಹೇಳಿದೆಯಷ್ಟೆ; ಅಂಥ ವಸ್ತುಗಳಿಗಿಂತ ನಮ್ಮ ಪೂರ್ವಜರು ನೂರ್ಮಡಿ ಉತ್ತಮರಾದವರೆಂಬುದನ್ನು ಮನಗಾಣಬೇಕು. ಎಂಥ ಕನಿಷ್ಠ ಸಚೇತನ ವಸ್ತುವೇ ಆಗಲಿ ಜಡವಸ್ತುವಿಗಿಂತ ಉತ್ತಮವಾದುದು. ಆದುದರಿಂದ ನಮ್ಮ ಪೂರ್ವಜನು ಸಚೇತನ ವಸ್ತುವಾಗಿದ್ದನೆಂಬುದನ್ನು ಈ ವಿಕಾಸತತ್ತ್ವ ತೋರಿಸಿಕೊಟ್ಟಿತಲ್ಲಾ ಎಂದು ಹೆಮ್ಮೆಪಡುವುದು ಉತ್ತಮ' ಎಂಬುದಾಗಿ ಸಮಾಧಾನ ಹೇಳಿರುವನು.

ತನ್ನನ್ನು ಪ್ರತಿಭಟಿಸುವವರಿಗೆ ಡಾರ್ವಿನ್ ಹಲವು ಗಂಭೀರ ಪ್ರಶ್ನೆಗಳನ್ನು ಹಾಕಿರುವನು. ತನ್ನ ಪ್ರಪಂಚ ಪ್ರವಾಸದಲ್ಲಿ ಗಾಲ್ಪೆಗೋ ದ್ವೀಪಗಳಲ್ಲಿ ಕಂಡಿದ್ದ ಕಾಡುಜನರನ್ನು ನೆನಸಿಕೊಂಡು 'ಅಲ್ಲಿನ ಕಾಡುಗಳಲ್ಲಿ

ಗಾಲ್ಪೆಗೋ ದ್ವೀಪಗಳ ಕಾಡುಜನರು

ವಾಸಿಸುತ್ತಿರುವ ಅನಾಗರಿಕ ಮಾನವನು ಅರಣ್ಯದಲ್ಲಿ ಬಾಳುತ್ತಿರುವ ಶೂರ ಮಂಗಗಳಿಗಿಂತ ಯಾವ ವಿಧದಲ್ಲಿ ಉತ್ತಮನೆನ್ನುವಿರಿ?' ಎಂದು ಪ್ರಶ್ನಿಸಿ 'ಅವನು ಈ ದಿನ ಬಟ್ಟೆಬರೆಗಳಿಲ್ಲದೆ ಬೆಟ್ಟಗುಡ್ಡಗಳಲ್ಲಿ ತಿರುಗುತ್ತಿರುವುದು ನಮ್ಮ ಪೂರ್ವಜರನ್ನು ಸ್ಮರಣೆಗೆ ತಂದುಕೊಡುತ್ತದೆ. ಅವರಲ್ಲಿ ಆಡಳಿತ ವ್ಯವಸ್ಥೆಯಾಗಲಿ, ಕಲೆ, ಸಂಸ್ಕೃತಿ ಮೊದಲಾದುವುಗಳ ಕುರುಹಾಗಲಿ ಕಂಡುಬರುವುದಿಲ್ಲ. ಅವರಿಗೆ ದೊರೆತುದೇ ಆಹಾರ; ಮಾಡಿದುದೇ ಕಾರ್ಯ; ವಿಚಾರಶಕ್ತಿಯೂ ನೈತಿಕ ದೃಷ್ಟಿಯೂ ಅಷ್ಟಾಗಿ ಬೆಳೆದಿಲ್ಲ. ಅಂಥ ಮಾನವನೊಬ್ಬನನ್ನು

ನೋಡಿದಾಗ ಅವನು ಮಂಗವಂಶಜನೆಂದರೆ ಆಶ್ಚರ್ಯ ಹುಟ್ಟಿಸಲಾರದು. ಏಕೆಂದರೆ, ಅವನಿಗೂ ಮಂಗಗಳಿಗೂ ಇರುವ ವ್ಯತ್ಯಾಸಗಳು ಅಷ್ಟಾಗಿ ಕಂಡು ಬರುವುದಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ, ವೀರಾವೇಶದಿಂದ ಹೋರಾಡಿ ತಮ್ಮ ಮರಿಗಳನ್ನು ಶತ್ರುಗಳಿಂದ ರಕ್ಷಿಸಿಕೊಂಡು ಬಾಳುತ್ತಿರುವ ಮಂಗಗಳೇ ಉತ್ತಮವೆನಿಸುತ್ತವೆ' ಎಂದು ವಿವರಿಸಿ, 'ಗತ ಶತಮಾನಗಳ ಹಿಂದೆ ಯಾವುವು ತಮ್ಮ ಸಂತತಿಗಳನ್ನು ರಕ್ಷಿಸಿಕೊಂಡು ಶೌರ್ಯದಿಂದ ಬಾಳಿದುವೋ ಅಂಥ ಧೀರ ಮಂಗಗಳು ನನ್ನ ಪೂರ್ವಜರೆಂದು ಹೇಳಿಕೊಳ್ಳಲು ನನಗೆ ಹೆಮ್ಮೆಯಾಗುತ್ತದೆ. ಆದರೆ ಯಾವ ಕಾಡುಜನರು ಅಕಾರಣವಾಗಿ ಇತರರನ್ನು ಹಿಂಸಿಸುವರೋ, ಮೂಢ ನಂಬಿಕೆಗೆ ತುತ್ತಾಗಿ ಶಿಶುಬಲಿ ಕೊಡುವರೋ, ಯಾರು ಕನಿಕರವಿಲ್ಲದೆ ಮಡದಿಮಕ್ಕಳನ್ನು ಹಿಂಡುವರೋ ಅಂಥ ಅಧಮ ಮಾನವರು ನನ್ನ ಪೂರ್ವಜರಾಗದಿರಲಿ' ಎಂದು ಡಾರ್ವಿನ್ ಆವೇಶದಿಂದ ನುಡಿದಿರುವನು.

ಮಾನವನು ಈ ದಿನ ಕಟ್ಟಿರುವ ನಾಗರಿಕತೆಯ ಇತಿಹಾಸವನ್ನು ಪರಿಶೀಲಿಸಿದರೆ, ಅದರ ನಿರ್ಮಾಣಕ್ಕಾಗಿ ಅನಂತಕಾಲದಿಂದ ಅವನೆಂಥ ದುರ್ಗಮ ಯಾತ್ರೆಯಲ್ಲಿ ಹಾದು ಬರಬೇಕಾಗಿತ್ತೆಂಬುದರ ಅರಿವಾಗುವುದು.

ನಮ್ಮ ಪೂರ್ವಜರ ಸ್ಮಾರಕಗಳು

ಇಷ್ಟೊಂದು ನಾವು ಮುಂದುವರಿದು ಕಲೆ, ಸಾಹಿತ್ಯ, ಸಂಸ್ಕೃತಿ ಮೊದಲಾದುವನ್ನು ಕಟ್ಟಿ, ಸೃಷ್ಟಿಯ ಪರಮೋಚ್ಚ ಶಿಖರದಂತೆ ಬಾಳುತ್ತಿದ್ದರೂ ನಮ್ಮ ದೇಹದಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಅನೇಕ ಅವಯವಶೇಷಗಳು ನಮ್ಮ ದೀನ ಪೂರ್ವಜರನ್ನು ಸ್ಮರಣೆಗೆ ತರುತ್ತಿವೆ ಎಂಬ ದಿವ್ಯ ವಾಕ್ಯದಿಂದ ತನ್ನ ಗ್ರಂಥವನ್ನು ಮುಗಿಸಿರುವನು.

## ೮. ಇತರ ಸಂಶೋಧನೆಗಳು

ಡಾರ್ವಿನ್ ಮೌನವಾಗಿ ಡಾನಿನಲ್ಲುಳಿದು ವಿವಿಧ ಸಂಶೋಧನೆಗಳನ್ನು ನಡೆಸಿ ಗ್ರಂಥರೂಪದಲ್ಲಿ ಪ್ರಕಟಿಸುತ್ತ ಬಂದನಷ್ಟೆ. ಅವನು ಆ ಗ್ರಂಥಗಳನ್ನು ತನ್ನ ಜೀವನಪಥದ ಮೈಲಿಕಲ್ಲುಗಳೆಂದು ಕರೆದಿರುವನು. ಅವನ ಜೀವಿತ

**ಮಾನವನ ಮತ್ತು ಪ್ರಾಣಿಗಳ ಭಾವ ಪ್ರದರ್ಶನ**

ಕಾಲದಲ್ಲಿ ಡಾನಿನ ನಿಲಯ ಜೀವವಿಜ್ಞಾನ ಸಂಶೋಧನೆಗಳ ಮಹಾಕೇಂದ್ರವಾಗಿತ್ತು. ಮಾನವನ ಅವತರಣ ಪ್ರಕಟವಾದ ಮೇಲೆ ೧೮೭೨ರಲ್ಲಿ 'ಮನುಷ್ಯನ ಮತ್ತು ಪ್ರಾಣಿಗಳ ಭಾವ ಪ್ರದರ್ಶನ' ಎಂಬ ಮತ್ತೊಂದು ಗ್ರಂಥವೂ ಪ್ರಕಟವಾಯಿತು. ಇದು ಮಾನವನ ಅವತರಣದ ಒಂದು ಭಾಗವಾಗಿದ್ದರೂ ಸ್ಥಳಸಂಕೋಚದಿಂದ ಅದನ್ನು ಪ್ರತ್ಯೇಕವಾಗಿ ಮುದ್ರಿಸಬೇಕಾಯಿತು. ಮಾನವನ ಭಾವಪ್ರದರ್ಶನ ಕ್ರಮ ಕೆಳವರ್ಗದ ಪ್ರಾಣಿಗಳಿಂದಲೇ ವಿಕಾಸವಾದುದೆಂದು ತನ್ನ ಗ್ರಂಥದಲ್ಲಿ ವಿವರಿಸಿ, ಆ ಮೂಲಕವೂ ವಿಕಾಸವಾದಕ್ಕೆ ಬೆಂಬಲವನ್ನೊದಗಿಸಿಕೊಟ್ಟಿರುವನು. ತನ್ನ ೨೦ನೆಯ ವರ್ಷದಿಂದಲೂ ಬೇರೆ ಬೇರೆ ಪ್ರಾಣಿಗಳಲ್ಲಿ ಭಾವಪ್ರದರ್ಶನವನ್ನು ಅಭ್ಯಾಸಿಸಿ, ಆವಶ್ಯಕವಾದ ಎಲ್ಲ ಅಂಕಿಅಂಶಗಳನ್ನೂ ಒದಗಿಸಿಕೊಂಡಿದ್ದನು. ಅನೇಕಸಾರಿ ಸಾಕುಪ್ರಾಣಿಗಳ ಮತ್ತು ಕಾಡುಪ್ರಾಣಿಗಳ ಸ್ವಭಾವಾದಿ ಗುಣಗಳನ್ನು ಅಭ್ಯಾಸಿಸಿದ್ದನು. ಬೇರೆ ಬೇರೆ ದೇಶದ ಜನರು ತಮ್ಮ ಭಾವವನ್ನು ಪ್ರದರ್ಶಿಸುವ ಕ್ರಮಗಳನ್ನು ನೋಡಿಯೂ, ಕೇಳಿಯೂ ತಿಳಿದುಕೊಂಡಿದ್ದನು. ಶಿಶುತ್ವದಲ್ಲಿ ಮಾನವನು ತನ್ನ ಮನದಿಚ್ಛೆಯನ್ನು ಹೇಗೆ ಪ್ರದರ್ಶಿಸುವನೆಂಬುದನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದ್ದನು. ತನ್ನ ಮಕ್ಕಳ ಸ್ವಭಾವಾದಿ ಗುಣಗಳನ್ನು ಅನಂತವಾಗಿ ಪರೀಕ್ಷಿಸಿದ್ದನು. ಹುಚ್ಚರಿಗೆ ಯಾವುದಾದರೂ ಬಯಕೆ ಹುಟ್ಟಿದಾಗ ಅವರು ಹೇಗೆ ವರ್ತಿಸುವರೆಂಬುದನ್ನೂ ಪರಿಶೀಲಿಸಿದ್ದನು. ತನ್ನ ಜೀವನದಲ್ಲಿ ಎಂದೆಂದು ಏನೇನು ಪರಿಶೀಲಿಸಿದ್ದನೋ ಅದನ್ನೆಲ್ಲ ಆ ಕಾವ್ಯಮಯ ಗ್ರಂಥಕ್ಕೆ ವಸ್ತುವಾಗಿಸಿಕೊಂಡಿರುವನೆನ್ನಬಹುದು. ಅದರಲ್ಲಿ ಪ್ರಾಣಿಗಳ ರಸಾವೇಶಭಾವಪ್ರದರ್ಶನದ ವರ್ಣನೆಗಳು ಅವನ ಗ್ರಂಥರಾಶಿಯಲ್ಲೇ ಅತ್ಯುತ್ತಮ ಸಾಹಿತ್ಯಭಾಗವೆಂದು ಹೇಳುವರು.

ತನ್ನ ಗ್ರಂಥದಲ್ಲಿ ಡಾರ್ವಿನ್ ಅನೇಕ ಪ್ರಾಣಿಗಳ ಭಾವಪ್ರದರ್ಶನದ ಕ್ರಮವನ್ನು ವಿವರಿಸಿರುವನು. ಗಾಯಗೊಂಡ ತನ್ನ ಮಗುವನ್ನು ಕಂಡಾಗ ತಾಯ ಮುಖದಲ್ಲಾಗುವ ವ್ಯತ್ಯಾಸಗಳನ್ನು ವರ್ಣಿಸುತ್ತಾ, 'ಅವಳು ಎಷ್ಟೊಂದು ಭೀತಿಯಿಂದ ನೋಡಿದ್ದಳು! ಕಣ್ಣಾಲಿ ಕೆರಳಿ ಮುಖ ಕೆಂಪಡರಿತು; ಎದೆ ಕುಸಿದು ಬಿದ್ದು ಮೂಗಿನ ಹೊಳ್ಳೆಗಳು ಹಿಗ್ಗಲಿಸಿಕೊಂಡುವು, ಹೃದಯ ಡಬಡಬನೆ ಬಡಿಯಲಾರಂಭಿಸಿತು' ಎಂದು ಹೇಳಿರುವನು. ಮೌನದಿಂದ ಮರುಗುವ ನೊಬ್ಬನನ್ನು ನೋಡಿ 'ಆಗಾಗ ಹಿಂದಕ್ಕೂ ಮುಂದಕ್ಕೂ ತಲೆದೂಗುತ್ತ ಚಲಿಸದೆ ಕುಳಿತಿರುವನು; ಹೃದಯದ ಬಡಿತ ನಿಧಾನವಾಗಿ ರಕ್ತಚಲನೆ ಮಂದವಾಗುತ್ತಿದೆ; ಉಸಿರಾಡುವುದನ್ನೇ ಮರೆತು ಒಮ್ಮೊಮ್ಮೆ ಎಚ್ಚೆತ್ತವ ನಂತೆ ನಿಟ್ಟುಸಿರುಬಿಡುವನು' ಎಂದು ವರ್ಣಿಸಿರುವನು. ಇಂಥ ಅನೇಕ ವರ್ಣನೆಗಳನ್ನು ಉದಹರಿಸಬಹುದು ಅವುಗಳನ್ನು ಓದಿದಂತೆ ಡಾರ್ವಿನ್ನನ ಅಪ್ರತಿಮ ಪರಿಶೀಲನೆಯ ಶಕ್ತಿಗೆ ಮಾರು ಹೋಗುತ್ತೇವೆ. ಎಂದೋ ಬಾಲ್ಯದಲ್ಲೊಮ್ಮೆ ನೋಡಿದ್ದನ್ನು ಸುಮಾರು ಕಾಲು ಶತಮಾನದನಂತರ ಚಾಚೂ ತಪ್ಪದಂತೆ ವರ್ಣಿಸುವುದನ್ನು ನೋಡಿದರೆ ಅವನ ಅನ್ಯಾದೃಶ ಜ್ಞಾಪಕಶಕ್ತಿ ನಮ್ಮನ್ನು ಡಂಗುಬಡಿಸಿಬಿಡುತ್ತದೆ ವೃದ್ಧಾಪ್ಯದಲ್ಲಿ ತನ್ನ ಎಳೆ ಮಕ್ಕಳನ್ನೂ ಸಾಕುಪ್ರಾಣಿಗಳನ್ನೂ ಮುಂದೆ ಬಿಟ್ಟುಕೊಂಡು ಅವುಗಳ ಸ್ವಭಾವಾದಿ ಗುಣಗಳನ್ನು ಪರಿಶೀಲಿಸುತ್ತ ಕುಳಿತುಕೊಳ್ಳುತ್ತಿದ್ದನು. ಅವ ಶ್ಯಕವಾದಾಗ ಅವುಗಳ ಮೇಲೆ ಹಲವು ಪ್ರಯೋಗಗಳನ್ನು ನಡೆಸಿ, ಆಗ ಅವು ಹೇಗೆ ವರ್ತಿಸುವುವೆಂಬುದನ್ನು ಅರಿತುಕೊಳ್ಳುತ್ತಿದ್ದನು. ಮಗು ಅಳಲಾರಂಭಿಸಿದ ಎಷ್ಟು ಹೊತ್ತಿನ ಮೇಲೆ ಕಂಬನಿಗಳುದುರುವುವು, ಬಾಯ ಆಕಾರ ಹೇಗೆ ಬದಲಾಯಿಸುವುದು, ಯಾವ ಯಾವ ಮಾಂಸಖಂಡಗಳು ಹೇಗೆ ಹೇಗೆ ಸಂಕುಚಿಸುವುವು—ಮುಂತಾದ ವಿಷಯಗಳನ್ನು ಪರಿಶೀಲಿಸಿ ತಿಳಿದುಕೊಳ್ಳುತ್ತಿದ್ದನು. ನಾಚಿಕೆ, ಹೇಸಿಕೆ, ಭೀತಿ ಇತ್ಯಾದಿ ಭಾವಗಳನ್ನು ಪ್ರದರ್ಶಿಸುವಾಗ ಮಾನವನ ಅಂಗಾಂಗಗಳ ಮೇಲೂ ಆಗುವ ಬದಲಾವಣೆ ಗಳನ್ನು ಅಭ್ಯಸಿಸಿ, ತನ್ನ ಗ್ರಂಥದಲ್ಲಿ ವಿವರಿಸಿರುವನು. ಒಮ್ಮೆ ತನ್ನ ಮಗನೊಬ್ಬನು ಗಟ್ಟಿಯಾಗಿ ಕೂಗಿದನಂತೆ; ಆ ಮಗುವಿನ 'ಕಣ್ಣು ಕುಣಿಯ

ಭಾವಪ್ರದರ್ಶನದ ವರ್ಣನೆಗಳು

ಮಾಂಸಖಂಡಗಳು ಸಂಕುಚಿಸಿದುವು; ಕಣ್ಣುಗಳು ಮುಚ್ಚಿಕೊಳ್ಳುವಂತಾದುವು. ಆದರೂ ಆ ಮಗುವಿಗೆ ಕಣ್ಣುಗಳು ಮುಚ್ಚಿಕೊಳ್ಳುತ್ತಿವೆಯೆಂಬ ಅರಿವೇ ಇರಲಿಲ್ಲ' ಎಂದು ಡಾರ್ವಿನ್ ಆ ದೃಶ್ಯವನ್ನು ವಿವರಿಸಿ, ನಾವು ಕೂಗಿದಾಗ ಕಣ್ಣುಗಳು ಸ್ವಾಭಾವಿಕವಾಗಿ ಮುಚ್ಚಿಕೊಳ್ಳುವಂತಾಗುತ್ತವೆಯೆಂದು ವರ್ಣಿಸಿರುವನು.

ಬೇರೆ ಬೇರೆ ಪ್ರಾಣಿಗಳಲ್ಲಿ ಕೂದಲು, ಗರಿ ಮತ್ತು ಚರ್ಮದ ಇತರ ರಕ್ಷಣಾಂಗಗಳು ಹೇಗೆ ಸಂದರ್ಭಾನುಸಾರ ನಿಮಿರುವುವೆಂಬುದನ್ನು ಅಭ್ಯಾಸಿಸಿ, ಕರತಲಾಮಲಕವಾಗಿ ವರ್ಣಿಸಿರುವನು. ಚಿಂಪಂಜಿ, ಒರಾಂಗುಟಾನ್ ಮೊದಲಾದ ಮೃಗಗಳಿಗೆ ಹಾವನ್ನು ತೋರಿಸಿದಾಗ ರೋಮಾಂಚನವಾಗುವುದು. ಆದರೆ ಹಕ್ಕಿಗಳ ಮುಂದೆ ಹಾವನ್ನು ತಂದರೆ ಯಾವ ವ್ಯತ್ಯಾಸವೂ ಆಗುವುದಿಲ್ಲ. ಪ್ಯಾಂಗೊಲಿನ್ ಎಂಬ ಪ್ರಾಣಿಯನ್ನು ಹಿಡಿದಾಗ ಮಾತ್ರ ಅವುಗಳ ಗರಿಗಳು ನಿಮಿರುವುವು. ಡಾರ್ವಿನ್ ಈ ದೃಶ್ಯಗಳನ್ನೆಲ್ಲ ಲಂಡನ್ನಿನ ಬ್ರಿಟಿಷ್ ಮ್ಯೂಸಿಯಮ್ಮಿಗೆ ಹೋಗಿ ದೀರ್ಘ ಕಾಲದವರೆಗೂ ಅಭ್ಯಾಸಿಸಿದ್ದನು.

ರೋಮಾಂಚನ

'ಎಲ್ಲ ಪ್ರಾಣಿಗಳ ಭಾವ ಪ್ರದರ್ಶನದ ಕ್ರಮದಲ್ಲೂ ಒಂದು ಸಾಮ್ಯವಿರುವುದು. ಆದುದರಿಂದ ಮಾನವನ ಭಾವ ಪ್ರದರ್ಶನ ಕ್ರಮವೂ ಕೆಳವರ್ಗದ ಪ್ರಾಣಿಗಳಿಂದಲೇ ವಿಕಾಸವಾಗಿರಬೇಕು' ಎಂಬ ಅಂಶವನ್ನು ತನ್ನೀ ಗ್ರಂಥದಲ್ಲಿ ಡಾರ್ವಿನ್ ದೃಢಪಡಿಸಿರುವನು. ಆದಿ ಮಾನವನು ಇನ್ನೂ ಮಾತನಾಡುವುದಕ್ಕೆ ಬಾರದಿರುವಾಗ ಅಂಗ ಭಂಗಿಗಳಿಂದ ಹೇಗೆ ತನ್ನ ಅಭಿಲಾಷೆಯನ್ನು ಇತರರಿಗೆ ತಿಳಿಸುತ್ತಿರಬಹುದೆಂಬುದನ್ನೂ ವಿವರಿಸಿರುವನು.

ಮಾನವನ ಭಾವಪ್ರದರ್ಶನ ಕೆಳವರ್ಗದ ಪ್ರಾಣಿಗಳಿಂದ ಬಂದುದು

'ಕೀಟಾಹಾರಿ ಸಸ್ಯಗಳು' ಎಂಬ ಮತ್ತೊಂದು ಗ್ರಂಥ ೧೮೭೫ರಲ್ಲಿ ಡಾರ್ವಿನಿನಿಂದ ಹೊರಬಿದ್ದಿತು. ಹಲವು ವಿಚಿತ್ರ ಸಸ್ಯಗಳಲ್ಲಿ ಕಂಡುಬರುವ ರಚನೆ ಮತ್ತು ಸ್ವಭಾವಗಳನ್ನು ವಿಕಾಸತತ್ವದ ಬೆಳಕಿನಲ್ಲಿ ವಿವರಿಸಿ, ಆ ಮೂಲಕ ತನ್ನ ತತ್ವಕ್ಕೆ ವಿಶ್ವವ್ಯಾಪ್ತಿತ್ವವನ್ನು ದೊರಕಿಸಿಕೊಳ್ಳುವುದೇ

ಈ ಗ್ರಂಥದ ಮೂಲ ಉದ್ದೇಶವೆನ್ನಬಹುದು. ೧೮೬೦ರಲ್ಲಿ ಸಸೆಕ್ಸಿಗೆ ಹೋಗಿದ್ದಾಗ ಅಲ್ಲಿನ ಡ್ರಾಸೆರ ಎಂಬ ವಿಚಿತ್ರ ಸಸ್ಯದ ಸ್ವಭಾವವನ್ನು ಪರಿಶೀಲಿಸಿದ್ದನು. ಚಿಕ್ಕದಾದ ಈ ಗಿಡದ ಕಾಂಡ ತುಂಬ ತುಂಡು. ಎಲೆಗಳು ಕಾಂಡದ ಸುತ್ತಲೂ

**ಕೀಟಾಹಾರಿ ಸಸ್ಯಗಳು**

ನಿಬಿಡವಾಗಿರುವುದರಿಂದ ನೋಡುವುದಕ್ಕೆ ಆ ಗಿಡ ಹೂವೆಂದು ಭಾಸವಾಗು ವುದು. ಎಲೆಗಳ ಮೇಲೆ ಅನೇಕ ಕೂದಲಿವೆ. ಕೂದಲ ಕೊನೆಯಲ್ಲಿ ಒಂದು ಗ್ರಂಥಿ ಇದೆ. ನೊಣಗಳು ಆ ಎಲೆಗಳ ಮೇಲೆ ಬಂದು ಕುಳಿ ತೊಡನೆಯೇ ಕೂದಲುಗಳೆಲ್ಲ ಬಾಗಿ, ನೊಣವನ್ನು ಸುತ್ತುಗಟ್ಟಿ ಹಿಚುಕು ವುವು. ಗ್ರಂಥಿಗಳಿಂದ ಸ್ರವಿಸುವ ಒಂದು ವಿಧವಾದ ಜೀರ್ಣರಸದಿಂದ ನೊಣದ ದೇಹ ಜೀರ್ಣವಾಗಿ ಹೋಗುವುದು. ಸಸೆಕ್ಸಿನಲ್ಲಿ ಅವನು ಆ ಸಸ್ಯದ ಎಲೆಗಳ ಮೇಲೆ ಉಳಿದಿದ್ದ ನೊಣದ ಅವಶೇಷಗಳನ್ನು ಕಂಡು 'ಹೀಗೆ ಕೋಟಿಗಟ್ಟಲೆ ನೊಣಗಳು ಮಡಿಯುತ್ತಿರುವುದರಿಂದ ಅವುಗಳ ಲ್ಲಿರುವ ಅತಿಸಂತಾನ ಮಿತಿಗಿಳಿಯುವುದು!' ಎಂದುಕೊಂಡನಂತೆ. ಅಂದಿ ನಿಂದಲೂ ಇತರ ಕೀಟಾಹಾರಿ ಸಸ್ಯಗಳನ್ನು ಅಭ್ಯಾಸಿಸಿ ಅವುಗಳ ವೈಚಿತ್ರ್ಯ ವನ್ನೂ ತನ್ನ ಗ್ರಂಥದಲ್ಲಿ ವಿವರಿಸಿರುವನು. ವೀನಸ್ ಫ್ಲೈಟ್ರ್ಯಾಪ್ ಎಂಬ ಸಸ್ಯದ ಎಲೆಗಳ ಮೇಲೆ ಭಯಂಕರವಾದ ಮುಳ್ಳುಗಳಿವೆ. ಎಲೆಯ ಮೇಲೆ ನೊಣಗಳು ಕುಳಿತೊಡನೆ ಎಲೆ ಮಧ್ಯಕ್ಕೆ ಮಡಿಸಿಕೊಂಡು ನೊಣಗಳನ್ನು ಸೆರೆಹಿಡಿಯುವುದು. ಅನಂತರ ಮುಳ್ಳುಗಳು ಚುಚ್ಚಿ ನೊಣಗಳನ್ನು ಜಜ್ಜುವುವು. ಜೀರ್ಣಗ್ರಂಥಿಗಳು ರಸವನ್ನು ಸುರಿಸುವುದರಿಂದ ನೊಣಗಳ ಶರೀರ ಜೀರ್ಣವಾಗಿ ಅವಶೇಷ ಮಾತ್ರ ಉಳಿಯುವುದು. ಹಾಗೆಯೇ ಬಟರ್ವರ್ಟ್ ಎಂಬ ಇನ್ನೊಂದು ಸಸ್ಯದ ಎಲೆಯ ಅಂಚು ಕುಳಿತ ನೊಣ ಗಳನ್ನು ಬಂಧಿಸಿ ಜೀರ್ಣಿಸಿಕೊಳ್ಳುವುದು. ಬ್ಲಾಡರ್ವರ್ಟ್ ಎಂಬ ಮತ್ತೊಂದು ಸಸ್ಯದ ಎಲೆಯ ತುದಿಯಲ್ಲಿ ಒಂದು ಕೊಳಗವಿದೆ. ಅದರ ಲ್ಲಿರುವ ರಸದಾಸೆಗೆ ನೊಣಗಳು ಒಳಹೋಗುವುವು ಒಮ್ಮೆ ಹೊಕ್ಕ ನೊಣಗಳು ಅಲ್ಲೇ ಜೀರ್ಣವಾಗಿ ಹೋಗುವುವು. ಏಕೆಂದರೆ, ಹಿಂದಕ್ಕೆ ಬರದಂತೆ ಮಾರ್ಗದಲ್ಲಿರುವ ಕೂದಲುಗಳು ತಡೆಯುವುವು. ಇಂಥ ಕೀಟಾ ಹಾರಿ ಸಸ್ಯಗಳ ವೈಚಿತ್ರ್ಯಗಳನ್ನು ಸಂಶೋಧಿಸಿ ಡಾರ್ವಿನ್ 'ಮೌನವಾಗಿ

ನಿಂತು ನಿದ್ರಿಸುತ್ತಿರುವ ಸಸ್ಯಗಳಲ್ಲಿ ಎಂಥ ಅನುಪಮ ಚಲನಶಕ್ತಿಯಿದೆ' ಎಂಬ ಸತ್ಯಾಂಶವನ್ನು ವಿಜ್ಞಾನ ಪ್ರಪಂಚಕ್ಕೆ ತೋರಿಸಿಕೊಟ್ಟನು. ನರವ್ಯೂಹವಿಲ್ಲದ, ಮೆದುಳಿಲ್ಲದ ಆ ದೀನ ಸಸ್ಯಗಳ ಚಲನೆ ಚಮತ್ಕಾರ ಎಚ್ಚರಿಕೆ ಮುಂತಾದುವುಗಳನ್ನು ವರ್ಣಿಸುತ್ತ ಹಲವು ಕೆಳವರ್ಗದ ಪ್ರಾಣಿಗಳಿಗಿಂತಲೂ ಆ ಸಸ್ಯಗಳೇ ಹೆಚ್ಚು ಚೇತನವನ್ನು ಪ್ರದರ್ಶಿಸುವುವೆಂದು ಅಭಿಪ್ರಾಯಪಟ್ಟಿರುವನು. ಈ ಗ್ರಂಥ ಪ್ರಕಟವಾದನಂತರ ಹೊಸ ಹೊಸ ಶೋಧನೆಗಳು ನಡೆಯುವಂತಾಗಿ ಸಸ್ಯವಿಜ್ಞಾನ ಬಹುವಾಗಿ ಬೆಳೆಯಹತ್ತಿತು. ಪ್ರಾಣಿಗಳಿಗಿರುವಂತೆ ಸಸ್ಯಗಳಿಗೂ ಆಹಾರ ಜೀರ್ಣ, ಚಲನೆ, ಸೂಕ್ಷ್ಮ ಪರಿಶೀಲನೆ, ಸ್ಪರ್ಶನ ಮೊದಲಾದ ಶಕ್ತಿಗಳೆಲ್ಲ ಇರುವುವೆಂಬುದು ನಿರ್ಧರವಾಗಿ, ಪ್ರಾಣಿ ಸಸ್ಯಗಳೆರಡೂ ಒಂದೇ ಸಚೇತನ ಜಗತ್ತೆಂದು ಗೊತ್ತಾಯಿತು. ಇಂಥ ಸಾಮ್ಯವನ್ನು ತೋರಿಸಿಕೊಟ್ಟ ಭಾಗ್ಯ ಡಾರ್ವಿನ್ನನಿಗೇ ಹೋಗುವುದು

ಸ್ವರೇಣು ಸ್ಪರ್ಶ
ಅನ್ಯರೇಣು ಸ್ಪರ್ಶ

೧೮೭೭ರಲ್ಲಿ 'ಸ್ವರೇಣು ಮತ್ತು ಅನ್ಯರೇಣು ಸ್ಪರ್ಶದಿಂದ ಸಸ್ಯವರ್ಗದಲ್ಲಾಗುವ ಬದಲಾವಣೆಗಳು' ಎಂಬ ಮತ್ತೊಂದು ಸಂಶೋಧನಾತ್ಮಕ ಗ್ರಂಥವೂ ಹೊರಬಿದ್ದಿತು. ಪ್ರಾಣಿಗಳಲ್ಲಿ ಗರ್ಭಧಾರಣೆಯಾಗುವಂತೆ ಸಸ್ಯಗಳಲ್ಲಿಯೂ ಆಗುತ್ತದೆಯಷ್ಟೆ. ಒಂದು ಹೂವಿನ ಗಂಡು ವಸ್ತುವಾದ ಪರಾಗರೇಣು ಅದೇ ಹೂವಿನ ಹೆಣ್ಣು ವಸ್ತುವಿನ ಮೇಲೆ ಬಂದು ಬೀಳುವುದಕ್ಕೆ ಸ್ವರೇಣುಸ್ಪರ್ಶವೆಂದೂ, ಒಂದು ಹೂವಿನ ಪರಾಗರೇಣು ಅದೇ ಜಾತಿಯ ಮತ್ತೊಂದು ಹೂವಿನ ಹೆಣ್ಣುಭಾಗದ ಮೇಲೆ ಬಂದು ಬೀಳುವುದಕ್ಕೆ ಅನ್ಯರೇಣುಸ್ಪರ್ಶವೆಂದೂ ಹೇಳುವರು. ಹೀಗೆ ಪೂರಾಗಸ್ಪರ್ಶವಾದನಂತರವೇ ಗರ್ಭಧಾರಣೆಯಾಗಿ ಕಾಯಾಗುವುದು. ಡಾರ್ವಿನ್ ಅನಂತವಾಗಿ ಸಂಶೋಧಿಸಿ, 'ಎಲ್ಲ ಹೂವುಗಳೂ ಅನ್ಯರೇಣುಸ್ಪರ್ಶದ ಮೂಲಕ ಮಿಶ್ರಸಂತಾನವನ್ನೇ ಅಪೇಕ್ಷಿಸುತ್ತವೆ. ಏಕೆಂದರೆ ಮಿಶ್ರಸಂತಾನದಿಂದ ಮುಂದಣ ಸಂತತಿಗಳಲ್ಲಿ ಉತ್ತಮ ಗುಣಗಳು ಮೂಡಿ ಆ ಪೀಳಿಗೆ ಮಾರ್ಪಡುವುದು. ಆ ಮೂಲಕವೂ ಕ್ರಮೇಣ ಹೊಸ ಹೊಸ ಜಾತಿಯ ಸಸ್ಯಗಳು ವಿಕಾಸವಾಗುವುವು' ಎಂದು ಅಭಿಪ್ರಾಯಪಟ್ಟಿರುವನು. ಸಸ್ಯವಿಜ್ಞಾನದಲ್ಲಿ ಅವನು ಪ್ರಕಟಿಸಿದ ಈ

ದೃಷ್ಟಿ ತೀರ ಹೊಸದು; ಈ ಸಲಹೆಯ ಮೇಲೆ ಸಾವಿರಾರು ಸಂಶೋಧಕರು ಹೆಜ್ಜೆಯಿಟ್ಟು, ಸತ್ಯಾಂಶಗಳನ್ನು ಸಂಶೋಧಿಸಲು ಮೊದಲುಮಾಡಿದರು.

೧೮೭೭ರಲ್ಲಿ ಒಂದು ಜಾತಿಯ ಹೂಗಳಲ್ಲಿ ಕಂಡುಬರುವ 'ರೂಪ ವೈವಿಧ್ಯ' ಎಂಬ ಮತ್ತೊಂದು ಗ್ರಂಥವೂ ಡಾರ್ವಿನ್ನನ ಸಂಶೋಧನಾಲಯ ದಿಂದ ಹೊರಬಿದ್ದಿತು. ಒಂದು ಜಾತಿಯ ಸಸ್ಯದಲ್ಲಿನ ಬೇರೆ ಬೇರೆ ಹೂಗಳು ಏಕೆ ರೂಪ ವೈವಿಧ್ಯವನ್ನು ಪ್ರದರ್ಶಿಸುವುವೆಂಬುದನ್ನು ವಿವರಿಸುತ್ತಾ 'ಒಂದು ಹೂವಿನಲ್ಲಿ ಕಂಡುಬರುವ ಒಂದು ಮಾರ್ಪಾಡು ಇನ್ನೊಂದು ಹೂವಿನಲ್ಲಿ ಇನ್ನಷ್ಟು ಪ್ರಧಾನವಾಗಿ ಕಂಡುಬರುವುದು; ಮತ್ತೊಂದು ಹೂವಿನಲ್ಲಿ ಮತ್ತಷ್ಟು ಪ್ರಧಾನವಾಗಿ ಕಂಡುಬರುವುದು—ಎಂದರೆ ಅವೆಲ್ಲ ಕ್ರಮವಾಗಿ ಮಾರ್ಪಾಟು ಗಳನ್ನು ಪಡೆಯುತ್ತಾ, ಹೆಚ್ಚು ಹೆಚ್ಚು ಸಂಕೀರ್ಣತೆಯನ್ನೇರುತ್ತಿವೆ; ಕೆಳ ಗಿನ ರೂಪದಿಂದ ಮೇಲಿನ ರೂಪಕ್ಕೆ ವಿಕಾಸವಾಗುತ್ತಿವೆ. ಹಾಗೆ ವಿಕಾಸ ವಾಗುತ್ತಿರುವ ಮೂಲೋದ್ದೇಶವೇನೆಂದರೆ ಅನ್ಯರೇಣು ಸ್ಪರ್ಶಕ್ಕೆ ಅನು ಕೂಲಿಸಿಕೊಳ್ಳುವಂತೆ ತಮ್ಮ ರಚನೆಯನ್ನು ಸರಿಪಡಿಸಿಕೊಳ್ಳುವುದಕ್ಕಾಗಿಯೇ' ಎಂದು ಹೇಳಿರುವನು. ಹೂಗಳಲ್ಲಿ ಕಂಡುಬರುವ ಈ ವಿವಿಧ ರೂಪಗಳೂ ಹೇಗೆ ವಿಕಾಸತತ್ವವನ್ನು ಸಮರ್ಥಿಸುವುವೆಂದು ಡಾರ್ವಿನ್ ಒತ್ತಿ ಹೇಳಿರು ವನು. ೧೮೮೦ರಲ್ಲಿ 'ಸಸ್ಯಗಳ ಚಲನಶಕ್ತಿ' ಎಂಬ ಮತ್ತೊಂದು ಗ್ರಂಥವೂ ಪ್ರಕಟವಾಯಿತು. ಅದರಲ್ಲಿ ಸಸ್ಯಗಳಲ್ಲಿ ಕಂಡುಬರುವ ವಿವಿಧ ರೀತಿಯ ಚಲನೆಗಳನ್ನು ವಿವರಿಸಿರುವನು.

ಹೂಗಳ ರೂಪವೈವಿಧ್ಯ

ಹೀಗೆ ಡಾರ್ವಿನ್ ಪ್ರಾಣಿಶಾಸ್ತ್ರದಲ್ಲಿ ದುಡಿದು ಸಂಶೋಧಿಸಿದ್ದಂತೆ ಸಸ್ಯ ಶಾಸ್ತ್ರದಲ್ಲೂ ಅನೇಕ ಪ್ರಮುಖ ಶೋಧನೆಗಳನ್ನು ನಡೆಯಿಸಿ ಪ್ರಕಟಿಸಿದನು. ಅವನ ಅಪಾರ ಪ್ರತಿಭೆಯನ್ನು ಪ್ರದರ್ಶಿಸುವ ಆ ಒಂದೊಂದು ಗ್ರಂಥವೂ ಕಿರಿಯ ವಿಜ್ಞಾನಿಗಳಿಗೆ ಸ್ಫೂರ್ತಿದಾಯಕವಾಗಿ ಪರಿಣಮಿಸಿತು.

## ೯. ಸಂಶೋಧನಾಲಯದಲ್ಲಿ

ಡಾರ್ವಿನ್ನನ ಗ್ರಂಥಗಳಿಂದಲೂ ಬೀಗಲ್ ಪ್ರವಾಸದಿಂದಲೂ ಅವನ ಮಾನಸಿಕ ಮತ್ತು ನೈತಿಕ ಸ್ವರೂಪವನ್ನು ಸ್ವಲ್ಪಮಟ್ಟಿಗೆ ಪರಿಚಯ ಮಾಡಿಕೊಂಡಿರುವೆವು. ಅವನ ವ್ಯಕ್ತಿತ್ವದ ಪೂರ್ಣ ಪರಿಚಯವಾಗಬೇಕಾದರೆ ಡಾನಿನ ಸಂಶೋಧನೆಯ ಕ್ಷೇತ್ರದ ಮಧುರ ವಾತಾವರಣದಲ್ಲಿ ಸಂಚರಿಸಬೇಕು. ಮಹಾನುಭಾವಿ ಡಾರ್ವಿನ್ನನ ಜೀವನದಲ್ಲಿ ರೋಮಾಂಚನವುಂಟುಮಾಡುವ ಮಹಾಘಟನೆಗಳಿಲ್ಲವಾದರೂ ಸಹೃದಯಿಗಳ ಮೆಚ್ಚಿಗೆಯನ್ನು ಗಳಿಸತಕ್ಕ, ಜ್ಞಾನಾರ್ಜನೆಗೆ ಹುರುಪನ್ನು ಕೊಡತಕ್ಕ ಹಿರಿಯ ನಡೆನುಡಿಗಳಿಗೇನೂ ಕಡಮೆಯಿಲ್ಲ.

ಡಾನಿನಲ್ಲಿ ನೆಲಸಿದ ಮೇಲೆ ಆಜೀವವೂ ಡಾರ್ವಿನ್ ಜೀರ್ಣಾಂಗಗಳ ತೊಂದರೆಯಿಂದ ನರಳುತ್ತಲೇ ಇದ್ದನು. ಆದರೂ ತಾನು ಹಿಡಿದ ಮಹಾಕಾರ್ಯವನ್ನು ಅಷ್ಟೊಂದು ಯಶಸ್ವಿಯಾಗಿ ನೆರವೇರಿಸಿದ್ದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಕಷ್ಟಪಟ್ಟು ಕೆಲಸ ಮಾಡುವುದೆಂದರೆ ಅವನಿಗೆ ತುಂಬ ಆಸೆ. ರೋಗಕ್ಕೆ ಹಿಮ್ಮೆಟ್ಟದೆ ಆವಶ್ಯಕವಾದ ವಿಶ್ರಾಂತಿಯನ್ನು ಪಡೆದು ಮರಳಿ ಕಾರ್ಯಮುಖನಾಗುತ್ತಿದ್ದನು. ತನ್ನ ದೇಹವನ್ನೇ ಹಿಡಿದು ಹಿಂಡುವಂಥ ಬೇನೆಯಿದ್ದರೂ ಸ್ವಲ್ಪವೂ ಉತ್ಸಾಹಗುಂದದೆ ಸಂಶೋಧನೆಗಳನ್ನೂ ಗ್ರಂಥ ಪ್ರಕಟನೆಯನ್ನೂ ನಡೆಸಿಕೊಂಡು ಹೋಗುತ್ತಲೇ ಇದ್ದನು. ದಕ್ಷಿಣ ಅಮೆರಿಕದಲ್ಲಿ ಪ್ರವಾಸಮಾಡುತ್ತಿರುವಾಗ ಕೆಟ್ಟ ಅವನ ದೇಹಾರೋಗ್ಯ ಮರಳಿ ಸರಿಪಡಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಜೀರ್ಣಾಂಗಗಳ ತೊಂದರೆಯ ಜೊತೆಗೆ ತಲೆಶೂಲೆ, ಓಕರಿಕೆ—ಇತ್ಯಾದಿ ಬೇನೆಗಳೂ ಆಂದಂದು ಕಾಣಿಸಿಕೊಳ್ಳುತ್ತಿದ್ದುವು. ಡಾನಿನಲ್ಲಿದ್ದ ನಲವತ್ತು ವರ್ಷಗಳಲ್ಲಿ ಒಂದು ದಿನವಾದರೂ ಎಲ್ಲರಂತೆ ಆರೋಗ್ಯದಿಂದಿದ್ದು ಸುಖವಾಗಿರಲಿಲ್ಲ. ೧೮೬೩ರಿಂದ ೧೮೬೪ರ ವರೆಗಂತೂ ತನ್ನ ಕೊಠಡಿಯನ್ನು ಬಿಟ್ಟು ಹೊರಗೆ ಬರುವುದೇ ಕಷ್ಟವಾಗಿತ್ತು. ಆಗಲೂ ವಿಜ್ಞಾನ ಸಂಶೋಧನೆಯಲ್ಲಿ ನಿರತನಾಗಿದ್ದನು. ಆ ಕೊಠಡಿಯಲ್ಲಿ ಬೆಳೆಸಿದ್ದ ಸುರುಳಿ ಬಳ್ಳಿಗಳನ್ನೂ ಅವುಗಳ ಚಲನಾಕ್ರಮಗಳನ್ನೂ ಪರಿಶೀಲಿಸುತ್ತಿದ್ದನು.

ಡಾರ್ವಿನ್ನನ ನಡೆನುಡಿಗಳಲ್ಲಿ ಕ್ರಮಾನುಸರಣೆ ಮೂರ್ತಿವೆತ್ತಾಗಿ ಕಂಡುಬರುತ್ತಿತ್ತು. ಸಂಜೆ ಹೊತ್ತಿಗೆ ಮುಂಚೆ ಮಲಗಿಕೊಳ್ಳುವುದು ಅವನ ಅಭ್ಯಾಸ. ಸಾಮಾನ್ಯವಾಗಿ ಮಲಗಿದಮೇಲೆ ಅವನಿಗೆ ಸರಿಯಾಗಿ ನಿದ್ರೆ ಹತ್ತುತ್ತಿರಲಿಲ್ಲ. ವಿವಿಧ ವಿಜ್ಞಾನ ಸಮಸ್ಯೆಗಳು ರಾತ್ರಿ ಮನಸ್ಸಿನಲ್ಲಿ ಸುಳಿದು ಬಹಳ ಹೊತ್ತಿನವರೆಗೂ ಎಚ್ಚರವಾಗಿರುತ್ತಿದ್ದನು. ಮನಸ್ಸಿನ ಈ ಹೋರಾಟದಲ್ಲಿ ರಾತ್ರಿಯೆಲ್ಲ ಕಳೆದುದೂ ಉಂಟು! ಸೂರ್ಯೋದಯಕ್ಕೆ ಮುಂಚೆ ಎದ್ದು ಸ್ನಾನಮಾಡಿ, ಅಲ್ಪಾಹಾರ ಮುಗಿಸಿಕೊಂಡು ತೋಟದಲ್ಲೊ ಹತ್ತಿರದ ಬಯಲುಗಳಲ್ಲೊ ತಿರುಗಾಡಿಕೊಂಡು ಬರುತ್ತಿದ್ದನು. ಸುಮಾರು ಎಂಟು ಗಂಟೆ ಹೊತ್ತಿಗೆ ತನ್ನ ಬರವಣಿಗೆಯ ಕಾರ್ಯವನ್ನು ಆರಂಭಿಸುತ್ತಿದ್ದನು. ಗ್ರಂಥಗಳನ್ನು ಬರೆಯುವಾಗ ಆವಶ್ಯಕವಾದ ಸಾಮಗ್ರಿಗಳನ್ನೂ ಸಹಾಯಕ ಗ್ರಂಥಗಳನ್ನೂ ಹತ್ತಿರ ಅಣಿಯಾಗಿಟ್ಟುಕೊಳ್ಳುತ್ತಿದ್ದನು. ಗ್ರಂಥದ ಒಂದೊಂದು ಅಧ್ಯಾಯಕ್ಕೂ ಒಂದೊಂದು ಸಣ್ಣ ಗೂಡನ್ನು ಮಾಡಿಕೊಂಡು ಅಲ್ಲಿ ಆ ಅಧ್ಯಾಯಕ್ಕೆ ಸಂಬಂಧಿಸಿದ ಎಲ್ಲ ಕಾಗದ ಪತ್ರಗಳನ್ನೂ ಜೋಡಿಸಿಕೊಂಡು ಬೇಕಾದಾಗ ತೆಗೆದು ನೋಡಿಕೊಳ್ಳುತ್ತಿದ್ದನು. ಒರೆದು ಬೇಸರವಾದಾಗ ಮತ್ತೆ ಹೊರಗೆ ಹೋಗಿ ನೀರವವಾದ ಸಣ್ಣ ಕಾಲ್ದಾರಿಗಳಲ್ಲಿ ಸ್ವಲ್ಪ ಹೊತ್ತು ತಿರುಗಾಡಿಕೊಂಡು ಹಿಂದಿರುಗುತ್ತಿದ್ದನು. ಅಲ್ಲಿ ತಿರುಗಾಡುತ್ತಿರುವಾಗ ತಾನು ಬರೆಯುತ್ತಿರುವ ವಿಚಾರದ ಮೇಲೆ ಮೌನವಾಗಿ ಯೋಚಿಸುತ್ತಿದ್ದನು. ಸ್ವಲ್ಪ ಗೆಲವಾದ ನಂತರ ಮರಳಿ ಕಾರ್ಯಮುಖನಾಗುತ್ತಿದ್ದನು. ವಿವಿಧ ಬೇನೆಗಳಿಂದ ನರಳುತ್ತಿದ್ದರೂ ಅವನು ನಡೆಸಿದ ಸಂಶೋಧನೆಗಳನ್ನೂ ಪ್ರಕಟಿಸಿದ ಗ್ರಂಥರಾಶಿಯನ್ನೂ ನೋಡಿದರೆ ಅವನೆಷ್ಟೊಂದು ಪ್ರಯಾಸದಿಂದ ಆ ಕಾರ್ಯಗಳನ್ನು ಸಾಧಿಸಿದನೆಂಬುದು ಗೊತ್ತಾಗುವುದು.

ಡಾರ್ವಿನ್ನನಿಗೆ ದೇಹಾರೋಗ್ಯವಿಲ್ಲದ್ದರಿಂದ ಅನೇಕ ದಿನ ಕೆಲಸ ಮಾಡಲು ಅವಕಾಶವೇ ಆಗುತ್ತಿರಲಿಲ್ಲ. ಇನ್ನು ಕೆಲವು ದಿನ ನಾಲ್ಕೈದು ಗಂಟೆಗಳಿಗಿಂತ ಹೆಚ್ಚು ಕಾಲವನ್ನು ತನ್ನ ಸಂಶೋಧನೆಗಳಿಗೂ ಬರವಣಿಗೆಯ ಕಾರ್ಯಕ್ಕೂ ಉಪಯೋಗಿಸಲಾಗುತ್ತಿರಲಿಲ್ಲ. ಲೇಖಣಿ ಹಿಡಿದು ಬರೆಯಲು ಅಶಕ್ತನಾಗಿರುವಾಗ ತನ್ನ ಮಗಳಿಂದ ಹೇಳಿ ಬರೆಯಿಸುತಿದ್ದನು. ದಣಿದು

ಆಯಾಸವಾದಾಗ 'ಇನ್ನು ಮುಂದುವರಿಸಬಾರದು' ಎಂದು ನಿಲ್ಲಿಸಿ ಬಿಡುತ್ತಿದ್ದನು. ತನ್ನ ಗ್ರಂಥವನ್ನು ಅವನು ಹೇಳಿ ಬರೆಯಿಸುತ್ತಿದ್ದರೂ ವಾಕ್ಯಗಳಲ್ಲಿ ತಪ್ಪಿರದಂತೆ ಎಚ್ಚರದಿಂದ ಹೇಳುತ್ತಿದ್ದನು. ಬರೆದ ಗ್ರಂಥವನ್ನು ಪರಿಶೀಲಿಸುತ್ತಿರುವಾಗ ಸಾಕಾದೊಡನೆ ತಾನು ನಡೆಸುತ್ತಿದ್ದ ಪ್ರಯೋಗಗಳನ್ನು ಪರೀಕ್ಷಿಸುತ್ತಾ ಹರ್ಷಚಿತ್ತನಾಗುತ್ತಿದ್ದನು. ಹೆಚ್ಚು ಒಳಲಿ ಆಯಾಸವಾದಾಗ ಅವನ ಹೆಂಡತಿ, ಮಗಳ ಮನೆಗಾದರೂ ಹೋಗಿ ಒಂದೆರಡು ದಿನ ಸುಧಾರಿಸಿಕೊಂಡು ಬರಬೇಕೆಂದು ಒತ್ತಾಯಪಡಿಸುತ್ತಿದ್ದಳು. ತನ್ನ ಅಣ್ಣನಾದ ಇರಾಸ್ಮಸ್ಸನ ಬಳಿಗೆ ಹೋಗಿ ಸುಧಾರಿಸಿಕೊಂಡು ಬರುವುದೂ ವಾಡಿಕೆಯಾಗಿತ್ತು.

ವಿಜ್ಞಾನ ಶಾಸ್ತ್ರ ಸಂಶೋಧನೆಯ ವಿದ್ಯಾರ್ಥಿಗಳಲ್ಲಿ ಹಲವರು ಡಾನಿನಲ್ಲಿಯೇ ಉಳಿದುಕೊಂಡು ಡಾರ್ವಿನ್ನನ ಸಲಹೆ ಸಹಕಾರಗಳನ್ನು ಪಡೆದು ಜ್ಞಾನಾರ್ಜನೆ ಮಾಡುತ್ತಿದ್ದರು. ಅವರಿಗೆಲ್ಲ ತಿಳಿವಳಿಕೆ ಹೇಳುತ್ತ ಮಾರ್ಗದರ್ಶಿಯಾಗಿದ್ದುಕೊಂಡು ಡಾರ್ವಿನ್ ಪ್ರೇಮದಿಂದ ನೆರವಾಗುತ್ತಿದ್ದನು. ಹೊರಗಿನಿಂದ ದರ್ಶನಾರ್ಥವಾಗಿ ಒಂದವರು, ಡಾರ್ವಿನ್ನನ ಮನೆಯವರು

ಉದಾರ ಜ್ಞಾನದಾನಿ

ಮತ್ತು ಹಳ್ಳಿಯ ಜನರು ಸಂಜೆಯ ವೇಳೆಯಲ್ಲಿ ಅವನ ಸುತ್ತಲೂ ನೆರೆಯುತ್ತಿದ್ದರು. ಡಾರ್ವಿನ್ ವಿನೋದದಿಂದ ಮಾತನಾಡುತ್ತ ಅವರಿಗೆ ಆವಶ್ಯಕವಾದ ತಿಳಿವಳಿಕೆ ಹೇಳುತ್ತಿದ್ದನು. ಅವನ ತುಂಬು ಜ್ಞಾನದ ಸವಿಗಾಗಿ ಎಲ್ಲರೂ ಕಾದಿರುತ್ತಿದ್ದರು.

ಡಾರ್ವಿನ್ನನ ಸಂಶೋಧನೆಯ ನಿಲಯು ಚಿಕ್ಕದಾದರೂ ಚೊಕ್ಕಟವಾಗಿತ್ತು. ವಿಜ್ಞಾನ ಸಂಶೋಧನೆಗೆ ದೊಡ್ಡ ಸೌಧಗಳೇ ಆವಶ್ಯಕವೆಂದು ಅವನು ಎಂದೂ ಭಾವಿಸಿದವನಲ್ಲ. ಆಧುನಿಕ ರೀತಿಯ ಯಂತ್ರೋಪಕರಣಗಳು ಅವನ ಸಂಶೋಧನಾಲಯದಲ್ಲಿ ಹೆಚ್ಚಾಗಿ ಕಂಡುಬರುತ್ತಿರಲಿಲ್ಲ. ತಾನು ನಡೆಸುತ್ತಿದ್ದ ಪ್ರಯೋಗಗಳಿಗಾಗಿ ವಿವಿಧ ಜಾತಿಯ ಸಸ್ಯಗಳನ್ನು ಬೆಳೆಸುತ್ತಿದ್ದನು; ಸಾಕು ಪ್ರಾಣಿಗಳನ್ನು ಪರಿಶೀಲಿಸಿ, ಅವುಗಳ ಸಂತತಿಗಳಲ್ಲಿ ಕಂಡು ಬರುವ ವಿಭೇದಗಳನ್ನು ಅಭ್ಯಾಸಿಸಲು ವಿವಿಧ ಪ್ರಾಣಿಗಳ ಮರಿಗಳನ್ನು ಕಟ್ಟಿಕೊಂಡಿದ್ದನು. ಡಾನಿನ ನಿಲಯಕ್ಕೆ ಜೀವಕಳೆಯನ್ನು ಕೊಡುವಂತೆ

ನಿರಂತರವೂ ಪಾರಿವಾಳಗಳು ಚಿಗಿದು ಚಿಮ್ಮಿ ಹಾರಾಡುತ್ತಿದ್ದುವು. ಮನೆಗೆ ಬಂದ ಅತಿಥಿಗಳನ್ನು ಆ ಸಾಕು ಪ್ರಾಣಿಗಳೂ ಪ್ರೇಮದಿಂದ ನೋಡುತ್ತಿದ್ದು ವಂತೆ! ಅವುಗಳ ಸೌಮ್ಯಗುಣವನ್ನು ಕಂಡವರು ಡಾರ್ವಿನ್ನನ ಸಾತ್ವಿಕ ಸ್ವಭಾವವನ್ನು ವಾತಾವರಣವೂ ಅನುಸರಿಸಿತೇ ಎಂದುಕೊಂಡಿರಬೇಕು.

ಮನೆಗೆ ಬಂದ ಅತಿಥಿಗಳನ್ನು ತೋಟದ ಕಡೆ ಕರೆದುಕೊಂಡು ಹೋಗಿ ಅಲ್ಲಿ ತಾನು ಮಾಡಿಕೊಂಡಿದ್ದ ಪ್ರಯೋಗ ಕ್ಷೇತ್ರಗಳನ್ನೆಲ್ಲ ಸಹನೆ ಯಿಂದ ತೋರಿಸಿ ವಿವರಿಸುತ್ತಿದ್ದನು. ತನ್ನ ವಿದ್ಯಾರ್ಥಿ ದೆಸೆಯಲ್ಲಿ ಮೊದಲು ಮಾಡಿದ್ದ ಎರೆಹುಳುಗಳ ಕಾರ್ಯಪರಿಶೀಲನೆಯನ್ನು ಇನ್ನೂ ಮುಂದು ವರಿಸುತ್ತಿದ್ದನು. ತನ್ನ ತೋಟದಲ್ಲೂ ಸಂಶೋಧನಾಲಯದಲ್ಲೂ ಎರೆ ಹುಳುಗಳನ್ನು ಸಾಕಿ, ಅವು ಮಣ್ಣಿನಲ್ಲಿ ಮಾಡುವ ಕಾರ್ಯವನ್ನು ಪರಿ ಶೀಲಿಸುತ್ತಿದ್ದನು. ಇಂಥ ಪ್ರಯೋಗವನ್ನು ಒಂದೆಡೆ ಮೂವತ್ತು ವರ್ಷ ಗಳಿಂದ ಒಂದೇ ಸಮನೆ ನಡೆಸಿಕೊಂಡು ಬಂದಿದ್ದನಂತೆ! ಅವನಿಗಿದ್ದ ಶಾಂತಿ ಎಷ್ಟು! ತನ್ನ ಕಾರ್ಯಸಾಧನೆಯಲ್ಲಿದ್ದ ನಂಬಿಗೆ ಉತ್ಸಾಹಗಳೆಷ್ಟು! ಜೀವ ನದ ಸಂಧ್ಯಾಕಾಲದಲ್ಲಿದ್ದರೂ ಅವನ ತುಂಬು ಹೃದಯದಲ್ಲಿ ಬೇಸರ ಜಿಗುಪ್ಸೆಗಳಿರಲಿಲ್ಲ.

ವಿಜ್ಞಾನಪ್ರೇಮ ಹೆಚ್ಚಿದಂತೆ ಡಾರ್ವಿನ್ನನಿಗೆ ಕಲೆಯಲ್ಲಿ ಮಮತೆ ತಪ್ಪಿಹೋಯಿತೆಂದು ಹಲವರು ಹೇಳುತ್ತಾರೆ. ಬಾಲ್ಯದಲ್ಲಿ ಅವನು ಚಿತ್ರ ಕಲೆ, ಕಾವ್ಯ, ಕಾದಂಬರಿ ಮೊದಲಾದವನ್ನು ಆಸಕ್ತಿಯಿಂದ ಅಭ್ಯಾಸಿಸು ತ್ತಿದ್ದನು. ವಿದ್ಯಾರ್ಥಿಯಾಗಿದ್ದಾಗ ಸಂಗೀತದಲ್ಲಿ ತುಂಬ ಆಸಕ್ತಿಯಿತ್ತು. ಆದರೆ ತನ್ನ ೩೦ನೆಯ ವಯಸ್ಸಿನಿಂದ ಆ ಆಸಕ್ತಿ ಕ್ರಮಕ್ರಮವಾಗಿ ನಂದಿ ಹೋಯಿತು. ಬಾಲ್ಯದಲ್ಲಿ ಮಿಲ್ಟನ್ ಮೊದಲಾದ ಕಠಿಣ ಸಾಹಿತಿಗಳ ಗ್ರಂಥವನ್ನು ಓದುತ್ತಿದ್ದ ಡಾರ್ವಿನ್ನನಿಗೆ ಷೇಕ್ಸ್‌ಪಿಯರ್‌ನಂಥ ಸುರಸ ಸಾಹಿತಿಗಳ ಗ್ರಂಥಗಳೂ ನೀರಸವಾಗಿಬಿಟ್ಟುವು, ಎಂಬುವೇ ಅವರು ತಮ್ಮ ವಾದಕ್ಕೆ ಕೊಡುವ ಕಾರಣಗಳು. ವಯಸ್ಸಾದಂತೆ ಅವನ ಕಲಾ ಪ್ರೇಮ ಕಡಮೆಯಾದ್ದರಲ್ಲೇನೂ ಅನುಮಾನವಿಲ್ಲ. ಆದರೆ ಅದಕ್ಕೆ ವಿಜ್ಞಾ ನದ ಅಭಿಮಾನವೆಂದಿಗೂ ಕಾರಣವಲ್ಲ. ಅವನ ಕಲೋಪಾಸನೆಯ ನಲವು ಗೆಲವುಗಳನ್ನು ವಿಜ್ಞಾನ ತುಳಿಯಲಿಲ್ಲ. ಕಲೋಪಾಸನೆಯ ಭಾಗ್ಯ ತನಗೆ

ತಪ್ಪಿಹೋಗುತ್ತಿದ್ದುದನ್ನರಿತು ಡಾರ್ವಿನ್ ವ್ಯಸನಪಡುತ್ತಿದ್ದನು. ಹಾಗೆ ಕಲೋಪಾಸನೆಯಲ್ಲಿದ್ದ ಆಸಕ್ತಿ ಅವನಿಗೆ ಕಡಮೆಯಾದುದಕ್ಕೆ ಅವನ ದೇಹದ ಬೇನೆಯೇ ನಿಜವಾದ ಕಾರಣವೆಂಬುದನ್ನು ಮರೆಯಬಾರದು. ತನ್ನ ಪ್ರವಾಸಕಾಲದಲ್ಲಿ ತಲೆದೋರಿದ ಅನಾರೋಗ್ಯ ನಲವತ್ತು ವರ್ಷಗಳ ತನಕ ಏಕಪ್ರಕಾರವಾಗಿ ಅವನನ್ನು ಹಿಡಿದು ಹಿಂಡಿಬಿಟ್ಟಿದ್ದಿತು.

ಕಲಾಪ್ರೇಮ ಅಂಥ ದೀರ್ಘಕಾಲದ ಬೇನೆಯಿಂದ ಬಳಲುತ್ತಿದ್ದ ಅವನಿಗೆ ತನ್ನ ಪ್ರಯೋಗ ಪರಿಶೀಲನೆ ಅಷ್ಟಿಷ್ಟು ಆನಂದವೀಯುತ್ತಿತ್ತು. ಖಾಯಿಲೆಯಿಂದ ಹಾಸಿಗೆ ಹಿಡಿದಿರುವಾಗ ತನ್ನ ಪ್ರಯೋಗದಲ್ಲಿ ಸತ್ಫಲವೊಂದು ಗೋಚರಿಸಿದೊಡನೆ ಉಲ್ಲಾಸದಿಂದ ಮೇಲೇಳು ತ್ತಿದ್ದನು; ಆಸೆ ಉತ್ಸಾಹಗಳು ಅವನ ಬೆಂದ ಹೃದಯಕ್ಕೆ ಮರಳಿ ತಂಪಿತ್ತು ಚೈತನ್ಯವನ್ನುಂಟುಮಾಡುತ್ತಿದ್ದುವು. ಒಮ್ಮೆ ಬೇನೆಯಿಂದೆಚ್ಚೆತ್ತಾಗ 'ನನ್ನ ಮನಸ್ಸಿಗಿರುವ ಜ್ಞಾನಾರ್ಜನೆಯ ಕಾತರತೆ ನಿಂತೊಡನೆಯೇ ನನ್ನೀ ನೊಂದ ಹೃದಯ ನಿಂತೇ ಹೋಗಬಹುದು' ಎಂದುಕೊಂಡನಂತೆ! ಆದುದ ರಿಂದ ಅವನ ಮಿಕ್ಕೆಲ್ಲ ಅಭಿರುಚಿಗಳೂ ಹಿಂಬದಿಯಲ್ಲುಳಿದು ವಿಜ್ಞಾನ ಪ್ರೇಮವೊಂದು ಅಗಾಧವಾಗಿ ಬೆಳೆದು ಆರಿ ಹೋಗುವಂತಿದ್ದ ಅವನ ಜೀವನ ಜ್ಯೋತಿಗೆ ಎಣ್ಣೆಯೆರೆದು ಉರಿಸುವಂತಾಯಿತು. ಆದರೆ ಕೇವಲ ವಿಜ್ಞಾನದ ಬೆಳವಣಿಗೆಯೇ ಅವನ ಕಲೋಪಾಸನೆಗೆ ಕಲ್ಲುಹಾಕಲಿಲ್ಲ. ಡಾರ್ವಿನ್ನನ ವಿಜ್ಞಾನರಂಗದ ಸ್ನೇಹಿತರಲ್ಲನೇಕರು ಕಲಾವಿದರೂ, ಕಲಾಪ್ರಿಯರೂ ಆಗಿ ದ್ದರು. ಆದರೆ ಅವನೆಂದಿಗೂ ಆ ಕಲಾಪ್ರೇಮಿಗಳನ್ನು ಜರೆದವನಲ್ಲ. ಒಟ್ಟಿನಲ್ಲಿ ಡಾರ್ವಿನ್ನನೇ ಹೇಳುವಂತೆ ಅವನ ಜೀವನದ ಆನಂದವೂ ಕರ್ತವ್ಯವೂ ವಿಜ್ಞಾನ ಸಂಶೋಧನೆ. ಆ ಕಾರ್ಯದಲ್ಲಿ ಅವನಿಗುಂಟಾದ ಗೆಲವಿನಿಂದ ತನ್ನ ಜೀವನದ ಮಿಕ್ಕೆಲ್ಲ ಬೇನೆಗಳನ್ನೂ ಸಹಿಸಿಕೊಳ್ಳಲು ಅವಕಾಶವಾಯಿತು. ಕೇವಲ ಅನಿವಾರ್ಯದಿಂದ ತನಗೆ ಕಲೆಯ ಪ್ರಸಾದನವು ದೊರೆಯದಾದು ದನ್ನು ಕಂಡು ಅವನೇ 'ಮತ್ತೊಮ್ಮೆ ನಾನು ಈ ಜಗತ್ತಿನಲ್ಲಿ ಜನ್ಮವೆತ್ತುವು ದಾದರೆ ವಾರಕ್ಕೊಮ್ಮೆಯಾದರೂ ಕಾವ್ಯವಾಚನ ಮತ್ತು ಸಂಗೀತದಲ್ಲಿ ಮನರಂಜಿಸಬೇಕೆಂದು ನಾನು ಬಯಸುತ್ತೇನೆ. ನನ್ನ ಮಾನಸ ಕ್ಷೇತ್ರದಲ್ಲಿ ಶೂನ್ಯವಾಗಿ ಹೋಗಿರುವ ಆ ಭಾಗ್ಯವನ್ನು ಪುನರುಜ್ಜೀವನಗೊಳಿಸಲು

ಅಂದು ನನಗೆ ಸಾಧ್ಯವಾಗಬಹುದು. ಇಂದು ನನ್ನ ಭಾಗಕ್ಕೆ ಸಂದಿಹೋಗಿರುವ ಕಲೋಪಾಸನೆ ನನ್ನ ಜೀವನದ ಆನಂದಕ್ಕೂ ನೀತಿಯ ಮತ್ತು ಪ್ರತಿಭೆಯ ಬೆಳವಣಿಗೆಗೂ ಆತಂಕವಾಗಿ, ನನ್ನ ಭಾವನಾಸ್ಫೂರ್ತಿ ಸಂದಿಹೋಗಿದೆ' ಎಂದು ನೊಂದುಕೊಂಡಿರುವನು.

ಇಡೀ ಜೀವನವನ್ನೇ ನಿಸರ್ಗದ ಕಾರ್ಯವಿಧಾನವನ್ನು ಅರಿತುಕೊಳ್ಳಲು ಮೀಸಲಾಗಿಟ್ಟ ಡಾರ್ವಿನ್ನನ ಬಾಳು ಒಂದು ದೃಷ್ಟಿಯಲ್ಲಿ ಕಲಾವಿಹೀನವಾಗಿತ್ತೆಂದು ಹೇಳುವಂತಿಲ್ಲ . ಗತಶತಮಾನಗಳ ಕಾಲಪಟದ ಮೇಲೆ ಜೀವ ವರ್ಗಗಳು ಸರಳರೂಪದಿಂದ ಸಂಕೀರ್ಣತೆಗೇರಲು ಹೂಡಿದ್ದ ವಿಕಾಸ ಯಾತ್ರೆಯ ಉತ್ಸವವನ್ನು ಇಂದಿನವನಾದ ಡಾರ್ವಿನ್ ದರ್ಶಿಸಿದಾಗ ಅವನ ಮಾನಸಕ್ಷೇತ್ರದಲ್ಲಿ ಎಂಥ ಉಜ್ವಲ ಭಾವನೆಗಳು ಮಿಂಚಿ ಮಿನುಗಿರಬೇಕು? ವಿವಿಧ ರೂಪಿನ, ವಿವಿಧ ಅಂತಸ್ತಿನ ಜೀವಕೋಟಿಯನ್ನೆಲ್ಲ ಒಂದು ಮೂಲ ತತ್ವದ ಮೇಲೆ ನಡೆಸಿಕೊಂಡು ಬರುತ್ತಿರುವ ಸೃಷ್ಟಿಯ ಹೆಗ್ಗುರಿಯನ್ನು ಅರಿತಾಗ ಅವನ ಪ್ರತಿಭೆಯ ಕಾಂತಿ ಎಷ್ಟೊಂದು ಪ್ರಜ್ವಲಿಸಿರಬೇಕು ? ಇಡೀ ಜೀವರಾಶಿಯನ್ನೇ ಒಟ್ಟುಗೂಡಿಸಿ, ಬಾಂಧವ್ಯದ ಬಲೆಯನ್ನು ಹೆಣೆದಿರುವ ಸೃಷ್ಟಿಯ ಕಾರ್ಯಯೋಜನೆಯನ್ನು ಕಂಡಾಗ ಕಲೆಯ ಕಾಂತಿ ಅವನ ಅಂತರಾತ್ಮದಲ್ಲಿ ಮೂಡಿ ಮೊಳಗಲಿಲ್ಲವೆ? ಒಂದೊಂದು ಜೀವಿಯಲ್ಲೂ ಅಹರ್ನಿಶಿಯೂ ಮಿಡಿಯುತ್ತಿರುವ ಪ್ರಗತಿಕಾತರತೆಯ ಧೀರವಾಣಿಯನ್ನು ಕೇಳುವಾಗ ಅವನ ಜೀವನದಲ್ಲಿ ಎಷ್ಟು ಸ್ಫೂರ್ತಿ ಹೊರಹೊಮ್ಮಿರಬೇಕು? ನಿಸರ್ಗದ ಮೂಲತತ್ವಗಳನ್ನೂ ದೃಷ್ಟಿಧ್ಯೇಯಗಳನ್ನೂ ಅರಿತು ಅವುಗಳ ಗಮನಮಾರ್ಗವನ್ನು ವಿಮರ್ಶಿಸಿದಾಗ ಅವನ ದರ್ಶನ ಜ್ಞಾನ ಎಷ್ಟೊಂದು ವೈಶಾಲ್ಯವನ್ನು ಪಡೆದಿರಬೇಕು? ಎಂಬ ಸಮಸ್ಯೆಗಳು ನಮ್ಮ ಮುಂದೆ ಬರುತ್ತವೆ. ನಿಸರ್ಗದ ಅನುಭಾವಿಕ ಸೌಂದರ್ಯವನ್ನು ಸವಿದು ಆನಂದಿಸಿ ಆತ್ಮಪ್ರಗತಿ ಸಾಧಿಸುವುದು ಕಲೋಪಾಸನೆಯ ಒಂದು ಮಾರ್ಗವಾದರೆ ಅಂಥ ಅನುಭಾವಿಕ ಸೌಂದರ್ಯಕ್ಕೇ ಮೂಲಭೂತವಾದ ಮತ್ತು ಅದಕ್ಕೆ ಚಿರಂತನ ತೇಜಸ್ಸನ್ನು ನೀಡುತ್ತಿರುವ ನಿಸರ್ಗದ ಸತ್ಯದರ್ಶನಾನಂದದಿಂದ ಆತ್ಮೋನ್ನತಿಗೇರುವುದು ಇನ್ನೊಂದು ಮಾರ್ಗ. ಕಲೋಪಾಸನೆಗೆ ಬೇಕಾದ ದರ್ಶನ ಶಕ್ತಿ, ಸ್ಫೂರ್ತಿ, ರಸಾವೇಶಭಾವ ಮತ್ತು

ಪ್ರತಿಭೆ ವಿಜ್ಞಾನಸಂಶೋಧನೆಗೂ ಬೇಕಾಗುತ್ತವೆ. ಡಾರ್ವಿನ್ ನಿಸರ್ಗದ ಅಂತರಾಳದ ಸತ್ಯದರ್ಶನಮಾಡಿಕೊಳ್ಳುವಾಗ ಅನುಪಮ ಕಲಾಪ್ರಸಾದನವನ್ನು ಪಡೆದನೆಂದೇ ನಮ್ಮ ಭಾವನೆ.

**ಕ್ರಮವಾದ ಸಂಶೋಧನೆಯ ಆರಂಭ**

ಜೀವವಿಜ್ಞಾನದಲ್ಲಿ ಕ್ರಮವಾದ ಸಂಶೋಧನೆ ಡಾರ್ವಿನ್ನನ ಕಾಲದಿಂದ ಆರಂಭವಾಯಿತೆನ್ನಬಹುದು. ಅವನಿಗಿಂತ ಹಿಂದಿದ್ದ ವಿಜ್ಞಾನ ಸಂಶೋಧಕರಲ್ಲಿ ಒಂದು ನಿರ್ದಿಷ್ಟ ದೃಷ್ಟಿಯಾಗಲಿ ಧ್ಯೇಯವಾಗಲಿ ಇದ್ದಂತೆ ತೋರುವುದಿಲ್ಲ. ಆ ದೃಷ್ಟಿಧ್ಯೇಯಗಳನ್ನು ಡಾರ್ವಿನ್ ವಿಜ್ಞಾನ ಪ್ರಪಂಚಕ್ಕೆ ಆಚರಿಸಿ ತೋರಿಸಿಕೊಟ್ಟನು. ಆದುದರಿಂದಲೇ ಅವನ ತತ್ವನಿಯಮಗಳಂತೆ ಅವನ ಸಂಶೋಧನೆಯ ಕ್ರಮವನ್ನೂ ಅಮೂಲ್ಯವೆಂದು ನಾವು ಗಣಿಸಿರುವುದು.

**ಸಂಶೋಧನೆ ಒಂದು ತಪಸ್ಸಿನಂತೆ**

ವಿಜ್ಞಾನ ಸಂಶೋಧನೆ ಒಂದು ತಪಸ್ಸಿನಂತೆ. ಅದಕ್ಕೂ ಶಾಂತಿ ಸಂಯಮ, ಸಹನೆಗಳು ಆವಶ್ಯಕ. ಪ್ರಕೃತಿಯಲ್ಲಿ ಸತ್ಯ ನೆಲಸಿರುವಂತೆ ತನ್ನ ದೃಷ್ಟಿಯೂ ಸತ್ಯಪಥದಲ್ಲಿ ಗಮಿಸಬೇಕು. ಅಹೋರಾತ್ರಿಯೂ ಶ್ರದ್ಧಾಸಕ್ತಿಗಳಿಂದ ಕಾದು ನಿಂತು 'ಎಂದು, ಹೇಗೆ, ಅಷ್ಟಿಷ್ಟು ಸಲಹೆ ಸಹಕಾರಗಳು ದೊರೆಯುವುವೋ ಆ ಸನ್ನಿವೇಶಗಳನ್ನು ಉಪಯೋಗಿಸಿಕೊಂಡು ಸತ್ಯದರ್ಶನ ಮಾಡಿಕೊಳ್ಳಬೇಕು. ಮೇಲಾಗಿ ವಿಜ್ಞಾನಿಗಳು ತಾವು ಕಂಡ ಸತ್ಯಾಂಶಗಳನ್ನು ನಿರ್ಭೀತಿಯಿಂದ ಸಮಾಜದ ಮುಂದಿಡುವ ನಿಸ್ಸೀಮರಾಗಬೇಕು. ಆಮೂಲಕ ಒದಗಬಹುದಾದ ಕಷ್ಟನಿಷ್ಠುರಗಳಿಗೆ ಹಿಂದೆಗೆಯಬಾರದು. ಮೇಲೆ ಹೇಳಿದ ಸತ್ಯ, ಶ್ರದ್ಧೆ, ಶಾಂತಿ, ಸಂಯಮ, ಧೈರ್ಯ ಮೊದಲಾದ ಗುಣಗಳು ಉಚ್ಚಮಾರ್ಗದಲ್ಲಿ ಬಾಳತಕ್ಕ ಎಲ್ಲ ಮಾನವರಿಗೂ ಆವಶ್ಯಕ. ಹಾಗೆಯೇ ವಿಜ್ಞಾನಿಗಳಿಗೂ, ಜೀವನದ ಮಿಕ್ಕೆಲ್ಲ ಸಾಧನೆಗಳಂತೆ ವಿಜ್ಞಾನ ಸಂಶೋಧನೆಯೂ ಒಂದು ಧ್ಯೇಯ, ಸಾಧನೆ, ತಪಸ್ಸು. ಡಾರ್ವಿನ್ನನಲ್ಲಿ ಮೇಲಿನ ಎಲ್ಲ ಗುಣಗಳೂ ಮೂರ್ತಿಮತ್ತಾಗಿ ನೆಲಸಿದ್ದುವು.

ವಿಜ್ಞಾನಿಗಳು ತಾವು ಸಂಶೋಧಿಸಿ ಅರಿತುಕೊಂಡ ಸತ್ಯಾಂಶವನ್ನು ಪ್ರಕಟಿಸುವಾಗ ಹಲವು ತೊಂದರೆಗಳು ಬರಬಹುದು. ತಮಗಿಂತ ಹಿರಿಯರು

ಅಂದಿಗಾಗಲೇ ಆ ವಿಚಾರದ ಮೇಲೆ ವ್ಯತಿರಿಕ್ತಾಂಶಗಳನ್ನು ಪ್ರಕಟಿಸಿರಬಹುದು. ಅಂಥ ಸಂದರ್ಭದಲ್ಲಿ ವ್ಯಕ್ತಿಗೌರವದೃಷ್ಟಿಯಿಲ್ಲದೆ ತಾವು ಅರಿತುಕೊಂಡ ಸತ್ಯಾಂಶವನ್ನು ಜ್ಞಾನಪ್ರಪಂಚದ ಅವಗಾಹನೆಗೆ ತರಬೇಕು. ಡಾರ್ವಿನ್ನನ ಸಾಧನೆಯಲ್ಲಿ ಈ ವಿಶೇಷ ಗುಣ ಎದ್ದು ಕಾಣುತ್ತದೆ; ಮತವಾದಿಗಳ ಆಗ್ರಹಕ್ಕೆ ಹೆದರಿ, ತನ್ನ ವಿಕಾಸತತ್ತ್ವವನ್ನು ಪ್ರಕಟಿಸಲು ಸ್ವಲ್ಪವೂ ಹಿಂಜರಿದವನಲ್ಲ. ಅವನಿಗೆ ಬೇಕಾಗಿದ್ದುದು ಸಮಾಜದ ನಿಷ್ಠುರದಿಂದ ಪಾರಾಗುವುದಲ್ಲ—ಸತ್ಯಾಂಶಗಳನ್ನು ಪ್ರಚುರಪಡಿಸುವುದು.

ನಿರ್ದಾಕ್ಷಿಣ್ಯ ನೀತಿ

ಸಮಗರಿವಿಲ್ಲದ ಯಾವ ವಿಚಾರವನ್ನೇ ಆಗಲಿ ನಮ್ಮ ಪೂರ್ವಪಿತಾಮಹರು ನಂಬಿದ್ದರೆಂಬಮಾತ್ರಕ್ಕೆ ನಾವೂ ಮೌಢ್ಯದಿಂದ ಒಪ್ಪಬಾರದು. ಹಾಗೆ ಮಾಡುವುದರಿಂದ ವಿಜ್ಞಾನದ ಬೆಳವಣಿಗೆಗೆ ಧಕ್ಕೆ ತಗುಲುವುದೆಂದು ಡಾರ್ವಿನ್ನನಿಗೆ ಗೊತ್ತಿತ್ತು. ವಂಶಪರಂಪರೆಯಾಗಿ ಬಂದ ಮೂಢನಂಬಿಕೆಗಳನ್ನು ಬೆದಕಿ ವಿಚಾರದೃಷ್ಟಿಯಿಂದ ವಿಮರ್ಶಿಸಲು ಯತ್ನಿಸುವುದೇ ನಿಜವಾದ ವಿಜ್ಞಾನ ಸಂಶೋಧನೆಯ ಅಂತರಾತ್ಮ. ಬೈಬಲ್ಲಿನಲ್ಲಿ ಹೇಳಿರುವ ಸೃಷ್ಟಿಕ್ರಮವನ್ನು ಡಾರ್ವಿನ್ ಒಪ್ಪಿ ಕುಳಿತಿದ್ದರೆ ವಿಕಾಸತತ್ತ್ವದಂಥ ದಿವ್ಯಜ್ಞಾನ ಜಗತ್ತಿಗಾಗುತ್ತಿರಲಿಲ್ಲ.

ಮೌಢ್ಯದಿಂದ ನಂಬುತ್ತಿರಲಿಲ್ಲ

ಡಾರ್ವಿನ್ ದುಡುಕಿ ಯಾವ ತತ್ತ್ವಗಳನ್ನಾಗಲಿ ನಿಯಮಗಳನ್ನಾಗಲಿ ನಿರೂಪಿಸುತ್ತಿರಲಿಲ್ಲ; ಆದಷ್ಟು ನಿದಾನವಾಗಿ ಸತ್ಯಾಂಶಗಳನ್ನು ಕಣ್ಮನಗಳೊಪ್ಪುವಂತೆ ಮೊದಲು ಪರಿಶೀಲಿಸುತ್ತಿದ್ದನು. ಅವನು ಸಂಶೋಧಿಸುತ್ತಿರುವಾಗ ಹಲವು ನಿಯಮಗಳನ್ನು ನಿರೂಪಿಸುವಂತಾಗುತ್ತಿದ್ದರೂ ಅವಶ್ಯಕವಾದ ಅಂಕಿ ಅಂಶಗಳ ಬೆಂಬಲ ದೊರೆತ ಹೊರತು ಹಾಗೆ ಮಾಡುತ್ತಿರಲಿಲ್ಲ. ತನ್ನ ವಿಕಾಸತತ್ತ್ವವನ್ನು ೧೮೩೭ರಲ್ಲಿಯೇ ಸೂಕ್ಷ್ಮವಾಗಿ ಅರಿತುಕೊಂಡಿದ್ದರೂ ಅದನ್ನು ಪ್ರೌಢತತ್ತ್ವದ ರೂಪದಲ್ಲಿ ಪ್ರಕಟಿಸಿದ್ದು ೧೮೫೮ರಲ್ಲಿ ಮಾತ್ರ. ಅಂದಿನವರೆಗೂ ಆ ತತ್ತ್ವಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಆಮೂಲಾಗ್ರವಾಗಿ ಪರಿಶೀಲಿಸುತ್ತಿದ್ದನು. ಜೊತೆಗೆ ಡಾರ್ವಿನ್ ಒಳ್ಳೆಯ ವಿಮರ್ಶಕ. ತನ್ನ ಪ್ರಕ

ತತ್ತ್ವನಿರೂಪಣೆಗೆ ದುಡುಕುತ್ತಿರಲಿಲ್ಲ

ಟನೆಯ ಮೇಲೆ ಬರಬಹುದಾದ ಟೀಕೆಗಳ ಕಡೆಗೆ ಮೊದಲೇ ಗಮನಕೊಡುತ್ತಿದ್ದನು. ಎಲ್ಲ ಸಂದರ್ಭಗಳಿಗೂ ತನ್ನ ತತ್ವ ಅನ್ವಯಿಸುವುದೇ ಎಂದು ತಾಳೆ ಹಾಕಿ ನೋಡುತ್ತಿದ್ದನು. ತಾನು ಸಂಶೋಧಿಸಿದ ಸತ್ಯಾಂಶಗಳನ್ನೂ ನಿರೂಪಿಸಿದ ತತ್ವಸಿದ್ಧಾಂತಗಳನ್ನೂ ತನ್ನವೆಂಬ ಮಮತೆಯಿಲ್ಲದೆ ನಿರ್ದಾಕ್ಷಿಣ್ಯವಾಗಿ ಪರಿಷ್ಕರಿಸಿ ನೋಡುತ್ತಿದ್ದುದರಿಂದ ಅವನ ಪ್ರಕಟನೆಗಳಲ್ಲಿ ದೋಷಗಳು ತೀರ ಕಡಮೆ.

ನಿರ್ದಿಷ್ಟದೃಷ್ಟಿಯಿಲ್ಲದೆ ಡಾರ್ವಿನ್ ಯಾವ ಸಂಶೋಧನೆಗಳನ್ನೂ ಮುಂದುವರಿಸುತ್ತಿರಲಿಲ್ಲ. ಮಬ್ಬುಜ್ಞಾನದ ತಳಹದಿಯ ಮೇಲೆ ಕಟ್ಟಿದ ಸಂಶೋಧನೆಗಳೆಲ್ಲ ಒಂದಲ್ಲ ಒಂದು ದಿನ ಕುಸಿದು ಬೀಳಲೇಬೇಕೆಂಬ ಅರಿವು ಅವನಿಗಿತ್ತು. ನೈಸರ್ಗಿಕ ಚುನಾವಣೆಯ ಆಧಾರದ ಮೇಲೆ ವಿಕಾಸತತ್ವದ ರೂಪುರೇಖೆಗಳನ್ನು ನಿರ್ಮಿಸಿಕೊಳ್ಳುವುದಕ್ಕೆ ಮುಂಚೆ ನೈಸರ್ಗಿಕ ಚುನಾವಣೆಯ ವಿಶ್ವವ್ಯಾಪ್ತಿತ್ವವನ್ನು ನಿರ್ದಿಷ್ಟವಾಗಿ ಪರಿಚಯ ಮಾಡಿಕೊಂಡಿದ್ದನು. ತನ್ನ ವಾದವನ್ನು ಬಲಪಡಿಸುವ ಭರದಲ್ಲಿ ಅಡ್ಡಬರುವ ಸಮಸ್ಯೆಗಳನ್ನ ಹೇಗಾದರೂ ಬಿಡಿಸಿದಾಯಿತೆಂದು ಮುಂದೆನುಗ್ಗಲು ಅವನೆಂದೂ ಪ್ರಯತ್ನಿಸಲಿಲ್ಲ. ತನಗೆ ಅರಿವಾಗದ ಭಾಗಗಳಿದ್ದರೆ ಮುಚ್ಚುಮರೆಯಿಲ್ಲದೆ ಒಪ್ಪಿಕೊಳ್ಳುತ್ತಿದ್ದನು. ತನಗರಿವಿಲ್ಲವೆಂಬುದನ್ನು ಅರಿತುಕೊಳ್ಳುವುದೂ ಒಂದು ದೊಡ್ಡ ಗುಣ

ಮಬ್ಬು ಜ್ಞಾನವನ್ನು ನಂಬುತ್ತಿರಲಿಲ್ಲ

ಪ್ರಕೃತಿ ಅನಂತಕಾಲದ ಅನಂತರೂಪು. ಅದರಲ್ಲಡಗಿರುವ ತತ್ವ ದರ್ಶನವನ್ನು ವಿಜ್ಞಾನದೃಷ್ಟಿಯಿಂದಾಗಲಿ, ಕಲಾದೃಷ್ಟಿಯಿಂದಾಗಲಿ ಪಡೆಯಬಹುದು. ಕಲಾವಿದನು ಆ ತತ್ವದರ್ಶನವನ್ನು ಸೌಂದರ್ಯೋಪಾಸನೆಯಿಂದ ಮಾಡಿಕೊಂಡರೆ ವಿಜ್ಞಾನಿ ಅದೇ ಕಾರ್ಯವನ್ನು ಸಂಶೋಧನೆಗಳಿಂದ ಸಾಧಿಸುವನು. ಕಲಾವಿದನಿಗೆ ನಿಸರ್ಗದ ದಿಗ್ದರ್ಶನವಾಗಬೇಕಾದರೆ ಕಲೆಯ ಕಾಂತಿ ಅವನ ಅಂತರಾತ್ಮದಲ್ಲಿ ಮೂಡಿ ಮೊಳಗಬೇಕು. ವಿಜ್ಞಾನಿಗೆ ಆ ಭಾಗ್ಯ ಲಭಿಸಬೇಕಾದರೆ ಏನು, ಹೇಗೆ, ಏಕೆ ಇತ್ಯಾದಿ ವಿಚಾರಜ್ಞಾನದ ಪ್ರಶ್ನಿಸುವ ಭಾವ ಆವಶ್ಯಕ. ಇವರಿಬ್ಬರ ಕಾರ್ಯದಲ್ಲಿಯೂ ಭಾವನಾಶಕ್ತಿ ಬಹುವಾಗಿ

ನಿಸರ್ಗದ ತತ್ತ್ವ ದರ್ಶನ

ನೆರವಾಗುವುದು. ಡಾರ್ವಿನ್ ಬಾಲ್ಯದಿಂದಲೂ ವಿಚಾರಪರನಾಗಿದ್ದನು. ಯಾವುದನ್ನು ಕಂಡರೂ ಅದರ ಪೂರ್ಣ ಪರಿಚಯವಾದ ಹೊರತು ತೃಪ್ತನಾಗುತ್ತಿರಲಿಲ್ಲ. ಯಾವುದಾದರೊಂದು ಜೀವಿಯನ್ನು ಕಂಡೊಡನೆ 'ಆ ಜೀವಿ ಎಂಥದು? ಅದರ ಜೀವಕ್ರಿಯೆಗಳು ನಡೆಯುವುದು ಹೇಗೆ?' ಮುಂತಾಗಿ ಪ್ರಶ್ನಿಸಿಕೊಂಡು ನಿರರ್ಗಳವಾಗಿ ಯೋಚಿಸಿ, ಸತ್ಯಸಾಧನೆಯಲ್ಲಿ ಮನಃತೃಪ್ತಿಪಡುತ್ತಿದ್ದನು.

ಸತ್ಯಶೋಧನೆ ಜೀವನದ ಎಲ್ಲ ಮಾರ್ಗಗಳಲ್ಲೂ

ಸತ್ಯಾನ್ವೇಷಣೆಯಲ್ಲಿದ್ದ ಡಾರ್ವಿನ್ನನ ಪ್ರೇಮ ಕೇವಲ ವಿಜ್ಞಾನರಂಗಕ್ಕೆ ಮಾತ್ರ ಅನ್ವಯಿಸಿರಲಿಲ್ಲ; ಅವನ ನಿತ್ಯಜೀವನದಲ್ಲೂ ಪ್ರಧಾನವಾಗಿ ಕಂಡು ಬರುತ್ತಿತ್ತು. ಸತ್ಯವೆಂದು ತನಗೆ ತೋರಿದ ಯಾವ ವಿಷಯವನ್ನೇ ಆಗಲಿ ಪ್ರಕಟಿಸಿದ ಹೊರತು ಅವನಿಗೆ ಮನಃತೃಪ್ತಿಯಾಗುತ್ತಿರಲಿಲ್ಲ. ಒಮ್ಮೆ ಡಾನಿನ ಚರ್ಚೆನಲ್ಲಿ ಯಾವುದೋ ವಿಚಾರದ ಮೇಲೆ ಚರ್ಚೆ ನಡೆಯುತ್ತಿತ್ತು. ಆಗ ಡಾರ್ವಿನ್ ಇದ್ದಕ್ಕಿದ್ದ ಹಾಗೆಯೇ ಚರ್ಚೆನ ಒಳಹೊಕ್ಕು ತನ್ನ ಮನಸ್ಸಿಗೆ ಸತ್ಯವೆಂದು ತೋರಿದಂಶವನ್ನು ನುಡಿದನು. ಆ ವಿಚಾರವನ್ನು ಸರ್ವರ ಮುಂದಿಟ್ಟ ಹೊರತು ಅವನಿಗೆ ನಿದ್ರೆಯೇ ಹತ್ತುವಂತಿರಲಿಲ್ಲವೆಂದು ವಿವರಿಸಿರುವನು. ಎಂದಾದರೂ ತನ್ನ ತತ್ವಗಳಿಗೆ ವಿರುದ್ಧವಾದ ಸತ್ಯಾಂಶಗಳು ಮನಸ್ಸಿಗೆ ಹೊಳೆದರೆ ಕೂಡಲೇ ಅವನ್ನು ಗುರುತಿಸಿಕೊಂಡು ಪ್ರಕಟನೆಗೆ ಸಿದ್ಧಪಡಿಸಿಕೊಳ್ಳುತ್ತಿದ್ದನು. ವ್ಯತಿರಿಕ್ತಾಂಶಗಳೆಂದು ಮುಚ್ಚಿ ತಳ್ಳಿ ಹಾಕುವ ಸ್ವಭಾವ ಅವನಿಗಿರಲಿಲ್ಲ.

ಸೇವಾಸ್ಮರಣೆ

ಡಾರ್ವಿನ್ ವಿಜ್ಞಾನ ಪ್ರಪಂಚಕ್ಕೆ ಅಪಾರ ಸೇವೆ ಸಲ್ಲಿಸಿದನಷ್ಟೆ. ತನ್ನ ಆ ಕಾರ್ಯಸಾಧನೆಗೆ ಅಂದಿನವರೆಗೂ ದುಡಿದು, ಸಂಶೋಧನೆಗಳನ್ನೆಸಗಿದ್ದ ಅನೇಕ ವಿಜ್ಞಾನಿಗಳ ಸೇವೆ ಎಷ್ಟೊಂದು ನೆರವಾಯಿತೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅಂಥ ವಿಜ್ಞಾನಿಗಳೆಲ್ಲರನ್ನೂ ಡಾರ್ವಿನ್ ವಿವಿಧ ರೂಪದಲ್ಲಿ ಸ್ಮರಿಸಿಕೊಂಡು ಗೌರವ ತೋರಿಸಿರುವನು. ೧೮೭೭ರಲ್ಲಿ ಹಾಲೆಂಡಿನ ಮತ್ತು ಜರ್ಮನಿಯ ನಿಸರ್ಗವಿಜ್ಞಾನಿಗಳಲ್ಲಿ ಹಲವರು

ಡಾರ್ವಿನ್ನನ ಸೇವೆಯನ್ನು ಸ್ಮರಿಸಿಕೊಂಡು ಬಿನ್ನವತ್ತಳೆಯೊಂದನ್ನು ಅರ್ಪಿಸಿ, ಪ್ರಶಂಸಿಸಿದರು. ಅದಕ್ಕೆ ಅವನು ಉತ್ತರಕೊಡುತ್ತಾ 'ಹಿಂದೆ ಅನೇಕ ವಿಜ್ಞಾನಿಗಳು ಸಂಶೋಧನೆಗಳನ್ನು ನಡೆಸಿರದಿದ್ದರೆ ನನ್ನೀ ಗ್ರಂಥರಾಶಿ ಬೆಳಕಿಗೆ ಬರುತ್ತಿರಲಿಲ್ಲ; ಸಾರ್ವಜನಿಕಕ್ಷೇತ್ರದಲ್ಲಿ ನಾನು ಹೊಸ ಅಭಿಪ್ರಾಯವನ್ನು ಬಿತ್ತಲೂ ಸಾಧ್ಯವಾಗುತ್ತಿರಲಿಲ್ಲ. ನನ್ನ ಕಾರ್ಯಸಾಧನೆಯ ಗೌರವ ಪ್ರಥಮತಃ ಅವರಿಗೆ ಹೋಗತಕ್ಕದ್ದು. ವಿಜ್ಞಾನ ಸಂಶೋಧಕನು ತನ್ನ ಸಂಶೋಧನೆಗಳಿಂದ ಏನಾದರೂ ಸೇವೆ ಸಂದಂತಾಗುವುದೇ ಎಂದು ವ್ಯಾಕುಲನಾಗಬೇಕಾಗಿಲ್ಲ; ತನ್ನ ದುಡಿಮೆಗೆ ತಕ್ಕ ಫಲ ದೊರಕೀತೇ ಎಂದು ಚಿಂತಿಸಲೂ ಆವಶ್ಯಕತೆಯಿಲ್ಲ. ಹಿಂದಿನ ಸಂಶೋಧಕರೆಲ್ಲ ಸತ್ಯಾನ್ವೇಷಣೆಯ ಕಾರ್ಯವನ್ನು ಅಷ್ಟಿಷ್ಟಾದರೂ ಮುಂದುವರಿಸಿಯೇ ಇರುತ್ತಾರೆ. ನನ್ನ ಇನ್ನುಳಿದ ಜೀವಿತಕಾಲದಲ್ಲಿ ವಿಜ್ಞಾನರಂಗದಲ್ಲಿ ದುಡಿದವರನ್ನೂ ದುಡಿಯುತ್ತಿರುವವರನ್ನೂ ಸ್ಮರಿಸಿಕೊಳ್ಳುತ್ತೇನೆ' ಎಂದು ಹೇಳಿದನು. ಎಂಥ ಕೆಳದರ್ಜೆಯ ವಿಜ್ಞಾನ ಸಂಶೋಧಕನನ್ನಾದರೂ ಡಾರ್ವಿನ್ ಗೌರವದಿಂದ ಕಂಡು, ಉತ್ತೇಜನಕೊಡುತ್ತಿದ್ದನು.

ಸೋದರ ವಿಜ್ಞಾನಿಗಳಲ್ಲಿ ಪ್ರೇಮ

ಸೋದರ ವಿಜ್ಞಾನಿಗಳನ್ನು ಕಂಡರೆ ಡಾರ್ವಿನ್ನನಿಗೆ ತುಂಬ ಪ್ರೇಮ. ಅವರ ಕಷ್ಟಸುಖಗಳನ್ನು ತನ್ನವೆಂದು ಭಾವಿಸಿ ಕೈಲಾದ ಎಲ್ಲ ಸಹಾಯಗಳನ್ನೂ ನೀಡುತ್ತಿದ್ದನು. ಜಾನ್ ಸ್ಕಾಟ್ ಎಂಬ ವಿಜ್ಞಾನಿಯೊಬ್ಬನು ಎಡಿನ್ಬರೋವಿನ ಸಸ್ಯಾಲಯದಲ್ಲಿ ಸಾಮಾನ್ಯ ಕೂಲಿಯಾಗಿ ಕೆಲಸಮಾಡುತ್ತಿದ್ದನು. ಡಾರ್ವಿನ್ ಅವನ ಪರಿಚಯಮಾಡಿಕೊಂಡು ಇಂಡಿಯದಲ್ಲಿ ಅವನಿಗೆ ದೊಡ್ಡ ಹುದ್ದೆಯೊಂದನ್ನು ಕೊಡಿಸಿ, ಅವನ ಸಂಶೋಧನೆಯ ಕಾರ್ಯಕ್ಕೆ ಕಾರ್ಯತಃ ನೆರವಾದನು. ತನ್ನಂತೆ ವಿಜ್ಞಾನರಂಗದಲ್ಲಿ ದುಡಿದು ಜೀವಶಾಸ್ತ್ರದ ಬೆಳವಣಿಗೆಗೆ ಅಪಾರ ಸಹಾಯಮಾಡಿದ್ದ ವ್ಯಾಲೇಸನನ್ನು ಕಂಡರೆ ಅವನಿಗೆ ತುಂಬ ಗೌರವವಿತ್ತು. ಅವನ ವಿಚಾರದಲ್ಲಿ ಆಸಕ್ತಿ ವಹಿಸಿ, ತಾನೇ ಮುಂದೆ ಬಂದು, ಅಂದು ನಾಡಿನ ಪ್ರಧಾನಮಂತ್ರಿಯಾಗಿದ್ದ ಗ್ಲಾಡ್ಸ್ಟನ್ನನನ್ನು ಕಂಡು ವ್ಯಾಲೇಸನಿಗೆ ರಾಜಸನ್ನದನ್ನೂ ಗೌರವ ವೇತನವನ್ನೂ ಕೊಡಿಸಿಕೊಟ್ಟನು. ಅಂದಿನ ಪ್ರಸಿದ್ಧ ವಿಜ್ಞಾನಿಯಾಗಿದ್ದ

ಹಕ್ಸ್ಲಿಯೂ ಹಾಗೆಯೇ ವಿಜ್ಞಾನರಂಗದಲ್ಲಿ ಬಿಡುವಿಲ್ಲದೆ ದುಡಿದು ಅಪಾರ ಸೇವೆ ಸಲ್ಲಿಸಿದ್ದನು. ವೃದ್ಧಾಪ್ಯದಲ್ಲಿ ಅವನು ನರಳುತ್ತಿರುವಾಗ ಕಿರಿಯ ವಿಜ್ಞಾನಿಗಳನೇಕರು ಧನ ಸಂಗ್ರಹಿಸಿ ಡಾರ್ವಿನ್ನನ ಮೂಲಕ ಹಕ್ಸ್ಲಿಗೆ ಕಳುಹಿಸಿದಾಗ ಕೆಳಗಿನಂತೆ ಕಾಗದ ಬರೆದು, ವಿಜ್ಞಾನ ಸಂಶೋಧಕರ ಕಷ್ಟ ಸುಖಗಳಲ್ಲಿ ತಾನೆಷ್ಟು ಭಾಗವಹಿಸುತ್ತಿದ್ದನೆಂಬುದನ್ನು ತೋರಿಸಿಕೊಂಡಿರುವನು.

ಡಾನ್, ಬೆಕೆನ್‌ಹ್ಯಾಮ್, ಕೆಂಟ್.
ಏಪ್ರಿಲ್ ೨೩, ೧೮೭೩.

ನನ್ನ ಪ್ರೀತಿಯ ಹಕ್ಸ್ಲಿ,

ನಿನ್ನ ಸ್ನೇಹಿತರಲ್ಲಿ ಹದಿನೆಂಟು ಜನರು ೨೧೦೦ ಪೌಂಡುಗಳನ್ನು ಕೂಡಿಸಿ ನಿನಗೆ ತಲಪಿಸುವಂತೆ ನನ್ನನ್ನು ಕೇಳಿಕೊಂಡಿರುವರು. ವೃದ್ಧಾಪ್ಯದಲ್ಲಿ ನಿನಗಿರುವ ಆರ್ಥಿಕ ತೊಂದರೆ ನೀಗಿ, ಮನಶ್ಶಾಂತಿಯುಂಟಾಗಲೆಂದು ಸಾರ್ವಜನಿಕದೃಷ್ಟಿಯಿಂದಲೂ ನಮ್ಮ ಹಿತದೃಷ್ಟಿಯಿಂದಲೂ ಈ ಕಾರ್ಯವನ್ನು ನಾವು ಕೈಗೊಂಡಿರುತ್ತೇವೆ. ನಾವಾರೂ ನಿನಗೆ ಅಪರಿಚಿತರಲ್ಲ. ನಿನ್ನ ಹಿತಾಕಾಂಕ್ಷಿಗಳೂ ಸ್ನೇಹಿತರೂ ನಾವು. ನಮ್ಮ ಮನವನ್ನು ನೀನು ಅರಿಯುವುದಾದರೆ ನಾವು ನಿನ್ನನ್ನು ಗೌರವದಿಂದಲೂ ಸೋದರಭಾವದಿಂದಲೂ ಪ್ರೀತಿಸುತ್ತೇವೆಂಬುದು ತಿಳಿಯುವುದು. ನಮ್ಮ ವಿಚಾರದಲ್ಲಿ ನೀನೂ ಹಾಗೆಯೇ ಇರುವೆಯೆಂದು ನಮಗೆ ನಂಬಿಕೆಯಿದೆ. ನಮ್ಮ ಕಾಣಿಕೆಯನ್ನು ನೀನು ಸ್ವೀಕರಿಸುವುದಾದರೆ ನಾವು ಧನ್ಯರು; ನಿನಗೆ ನೆರವಾಗುವ ಭಾಗ್ಯ ನಮಗೆ ದೊರಕಿತಲ್ಲಾ ಎಂದು ಹೆಮ್ಮೆಯಿಂದ ಆಜೀವವೂ ಸಂತೋಷಪಡುತ್ತೇವೆ. ನಾವು ಮಾಡಿರುವ ಈ ಕಾರ್ಯ ಯಾರೊಬ್ಬರಿಂದಲೂ ಪ್ರೇರಿತವಾದುದಲ್ಲ; ನಮ್ಮೆಲ್ಲರಿಗೂ ಏಕಕಾಲದಲ್ಲೇ ಆ ಬುದ್ಧಿ ಅಂಕುರವಾಯಿತು.

ನಿನ್ನ ಪ್ರಿಯ ಮಿತ್ರ,
ಚಾರ್ಲ್ಸ್ ಡಾರ್ವಿನ್

ಡಾರ್ವಿನ್ನನಿಗಿದ್ದ ಅಪಾರ ನೈತಿಕ ಮತ್ತು ಮಾನಸಿಕ ಶಕ್ತಿಯ ಜೊತೆಗೆ ಸ್ನೇಹವನ್ನು ಮಾಡಿ ಬೆಳಸಿ ಉಳಿಸಿಕೊಳ್ಳುವ ಭಾಗ್ಯವೂ ಇತ್ತು.

ಆ ಮೂಲಕ ಗೆಳೆಯರನೇಕರ ಸಲಹೆ ಸಹಕಾರಗಳು ಅವನ ಕಾರ್ಯಕ್ಕೆ

ಡಾರ್ವಿನ್ನನ ವಿಜ್ಞಾನಕ್ಷೇತ್ರದ ಗೆಳೆಯರು

ನೆರವಾದುವೆಂದು ಹೇಳಬೇಕಾಗಿಲ್ಲ. ವಿಜ್ಞಾನ ಪ್ರಪಂಚದಲ್ಲಿ ಡಾರ್ವಿನ್ನನಿಗೆ ಅನೇಕ ಗೆಳೆಯರಿದ್ದರು. ಅವರಲ್ಲಿ ಲಯಲ್ಲರು ಪ್ರಧಾನರಾದವರು. ಅವರಿಂದ ಡಾರ್ವಿನ್ ತನ್ನ ಪ್ರಯೋಗಶಾಲೆಗೆ ಆವಶ್ಯಕವಾದ ಶಿಸ್ತನ್ನೂ ಸಲಹೆ ಸಹಕಾರಗಳನ್ನೂ ದೊರಕಿಸಿಕೊಂಡನು. ಹೂಕರನೂ ಡಾರ್ವಿನ್ನನೊಡನೆ ತುಂಬ ಸ್ನೇಹದಿಂದಿದ್ದನು. ಡಾರ್ವಿನ್ನನಿಗಿಂತ ಅವನು ಎಂಟು ವರ್ಷ ಕಿರಿಯವನು. ಸಸ್ಯಶಾಸ್ತ್ರವಿಶಾರದನಾಗಿ ವಿಖ್ಯಾತ ವಿಜ್ಞಾನಿಯಾಗಿದ್ದನು. ಡಾರ್ವಿನ್ನನಂತೆ ಅವನೂ ೧೮೩೯ರಲ್ಲಿ ನಾಲ್ಕು ವರ್ಷಗಳ ತನಕ ವಿಜ್ಞಾನಯಾತ್ರೆಗೆ ಹೋಗಿದ್ದನು. ಹೊರಡುವ ಮುನ್ನ ಯಾತ್ರೆಯ ಕಾರ್ಯಕ್ಕೆ ಆವಶ್ಯಕವಾದ ಸಲಹೆಸಹಕಾರಗಳಿಗಾಗಿ ಡಾರ್ವಿನ್ನನ ಬಳಿಗೆ ಬಂದು ಪರಿಚಯ ಮಾಡಿಕೊಂಡನು. ಅಂದಿನಿಂದ ಅವರಿಬ್ಬರ ಗೆಳೆತನ ಆರಂಭವಾಯಿತು. ಪ್ರವಾಸಕಾಲದಲ್ಲಿ ಹೂಕರನು ಡಾರ್ವಿನ್ನನೊಡನೆ ಪತ್ರವ್ಯವಹಾರವನ್ನಿಟ್ಟುಕೊಂಡು ಸ್ನೇಹವನ್ನು ಬೆಳೆಯಿಸಿಕೊಂಡನು. ತಾಯ್ನಾಡಿಗೆ ಹಿಂದಿರುಗಿದ ನಂತರ ದಕ್ಷಿಣ ಶೀತವಲಯದಲ್ಲಿ ತಾನು ಪರಿಶೀಲಿಸಿದ್ದ ಸಸ್ಯವರ್ಗದ ವಿಚಾರದಲ್ಲಿ ಡಾರ್ವಿನ್ನನೊಡನೆ ಸಮಾಲೋಚನೆ ನಡೆಯಿಸಿದನು. ಡಾರ್ವಿನ್ ತಾನು ಯಾತ್ರೆಗೆ ಹೋಗಿದ್ದಾಗ ಆ ಭಾಗದಿಂದ ತಂದಿದ್ದ ಅನೇಕ ಸಸ್ಯಗಳನ್ನು ಪರಿಶೀಲನೆಗಾಗಿ ಹೂಕರನಿಗೆ ಕೊಟ್ಟಿದ್ದನು. ಇವರ ಸ್ನೇಹ ದಿನದಿನಕ್ಕೂ ಬೆಳೆದು ಸುಮಾರು ಐವತ್ತು ವರ್ಷಗಳ ಕಾಲ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿತು.

ಡಾರ್ವಿನ್ ಜೀವಜಾತಿಗಳನ್ನು ವಿಂಗಡಿಸಿಕೊಂಡು ಅಭ್ಯಾಸಿಸುತ್ತಿರುವಾಗ ಹೂಕರನು ಅಪಾರವಾಗಿ ನೆರವಾದನು. ಹದಿನೈದು ವರ್ಷಗಳ ಕಾಲ ಡಾರ್ವಿನ್ ಕೋರಿದಾಗಲೆಲ್ಲ ಸಂತೋಷದಿಂದ ಸಸ್ಯಶಾಸ್ತ್ರದ ಜ್ಞಾನವನ್ನು ನೀಡಿ ವಿವಿಧ ಸಮಸ್ಯೆಗಳನ್ನು ಬಿಡಿಸಿಕೊಡುತ್ತಿದ್ದನು. ಡಾರ್ವಿನ್ ಹೂಕರನ ಸಂಶೋಧನೆಯ ದೃಷ್ಟಿಧ್ಯೇಯಗಳನ್ನು ಅರಿತುಕೊಂಡು ಆವಶ್ಯಕವಾದ ತಿಳಿವಳಿಕೆಯಿತ್ತು ಅವನಿಗೆ ಮಾರ್ಗದರ್ಶಕನಾಗಿದ್ದನು. ಸಸ್ಯವರ್ಗದಲ್ಲಿ ನಡೆದಿರುವ ವಿಕಸನಕ್ರಮವನ್ನು ಆಮೂಲಾಗ್ರವಾಗಿ ಅಭ್ಯಾಸಿಸಿ

ಪ್ರಕಟಿಸುವಂತೆ ಅವನು ಹೂಕರನನ್ನು ಪ್ರಚೋದಿಸುತ್ತಿದ್ದನು. ಇಬ್ಬರೂ ಉದಾರಿಗಳಾದುದರಿಂದ ಸ್ನೇಹಿತನಿಗೆ ತಾನು ನೀಡಿದ ಸಹಾಯಕ್ಕಿಂತ ಅವನಿಂದ ತನಗೆ ದೊರೆತುದೇ ಹೆಚ್ಚೆಂದು ಭಾವಿಸುತ್ತಿದ್ದರು.

ಪತ್ರವ್ಯವಹಾರದ ಮೂಲಕ ಬೇಕಾದಾಗ ಹೂಕರನಿಂದ ಸಹಾಯ ತೆಗೆದುಕೊಳ್ಳುತ್ತಿದ್ದುದರ ಜೊತೆಗೆ ಡಾರ್ವಿನ್ ಅನೇಕ ವೇಳೆ ಅವನನ್ನೇ ಡಾನಿಗೆ ಕರೆಸಿಕೊಳ್ಳುತ್ತಿದ್ದನು. ಅಂಥ ಸಂದರ್ಭಗಳಲ್ಲಿ ಅಂಕಿಅಂಶಗಳೊಡನೆ ಹೂಕರನು ಸಿದ್ಧನಾಗಿ ಬರುತ್ತಿದ್ದನು. ಪ್ರತಿದಿನ ಬೆಳಗಿನ ಹೊತ್ತು ಅರ್ಧಗಂಟೆಕಾಲ ಇಬ್ಬರೂ ವಿಚಾರವಿನಿಮಯಮಾಡಿಕೊಳ್ಳುತ್ತಿದ್ದರು. ಆರೋಗ್ಯಭಾಗ್ಯವಿಲ್ಲದ್ದರಿಂದ ಡಾರ್ವಿನ್ನನಿಗೆ ಹೆಚ್ಚು ಹೊತ್ತು ಮಾತನಾಡಲಾಗುತ್ತಿರಲಿಲ್ಲ. ಅದಕ್ಕಾಗಿ ತಾನು ಕೇಳಿ ತಿಳಿದುಕೊಳ್ಳಬೇಕೆಂದಿದ್ದ ವಿಷಯಗಳನ್ನೆಲ್ಲ ಒಂದು ಕಾಗದದ ಮೇಲೆ ಗುರುತಿಸಿಕೊಂಡು ಸಿದ್ಧವಾಗಿರುತ್ತಿದ್ದನು. ಮಾತುಕತೆಗಳಾದನಂತರ ಹೂಕರನು 'ಡಾರ್ವಿನ್ನನಿಂದ ನನಗೆ ಅನೇಕ ವಿಷಯಗಳು ತಿಳಿದುವು' ಎಂದುಕೊಳ್ಳುತ್ತಿದ್ದನಂತೆ. 'ನೂರು ಸಲ ಓದುವುದಕ್ಕಿಂತ ಚೆನ್ನಾಗಿ ಹೂಕರನಿಂದ ತಿಳಿದುಕೊಂಡೆನು' ಎಂದು ಡಾರ್ವಿನ್ ತೃಪ್ತಿಪಡುತ್ತಿದ್ದನು!

ಡಾರ್ವಿನ್ನನ ಮತ್ತು ಹೂಕರನ ಸ್ನೇಹ ಕೇವಲ ವಿಚಾರವಿನಿಮಯದ್ದು ಮಾತ್ರವಲ್ಲ. ಡಾರ್ವಿನ್ನನ ಕಾರ್ಯಕ್ಕೆ ಬೇಕಾದ ಸಸ್ಯಶಾಸ್ತ್ರದ ಹಲವು ಪ್ರಯೋಗಗಳನ್ನು ಹೂಕರನು ತನ್ನ ಪ್ರಯೋಗಮಂದಿರದಲ್ಲಿ ನಡೆಯಿಸಿ ಅವಶ್ಯಕವಾದ ಅಂಕಿಅಂಶಗಳನ್ನು ಒದಗಿಸಿಕೊಡುತ್ತಿದ್ದನು. ಸಾಗರದ ನೀರಿನಲ್ಲಿ ಕೆಲವು ಬೀಜಗಳು ಬಹುದಿನದವರೆಗೂ ಕೆಡದೆ ಇರುವುದನ್ನು ತಿಳಿದುಕೊಳ್ಳಲು ಡಾರ್ವಿನ್ ಡಾನಿನಲ್ಲಿ ಹಲವು ಪ್ರಯೋಗಗಳನ್ನು ನಡೆಸುತ್ತಿದ್ದನು. ಅಮೇರಿಕದಿಂದ ನಾರ್ವೆಗೆ ತೇಲಿಕೊಂಡು ಬಂದಿದ್ದ ಕೆಲವು ಬೀಜಗಳನ್ನಾರಿಸಿ ತಂದು ಹೂಕರನು ತನ್ನ ಊರಿನಲ್ಲಿ ಬಿತ್ತಿ ಅವು ಚೆನ್ನಾಗಿ ಮೊಳೆಯುವ ಶಕ್ತಿಯುಳಿಸಿಕೊಂಡಿದ್ದ ಅಂಶವನ್ನು ಡಾರ್ವಿನ್ನನಿಗೆ ತಿಳಿಸಿದನು. ಡಾರ್ವಿನ್ ಆ ಸಹಾಯಕ್ಕಾಗಿ ಹೂಕರನನ್ನು ವಂದಿಸಿ ಅವನ ಕಾರ್ಯವನ್ನು ಪ್ರಶಂಸಿಸಿದನು.

ಡಾರ್ವಿನ್ ಪೂರ್ಣವಿಕಾಸವಾದಿ. ಹೂಕರನು ಮೊದಮೊದಲು ಆ ವಾದವನ್ನು ಪರಿಪೂರ್ಣವಾಗಿ ಒಪ್ಪುತ್ತಿರಲಿಲ್ಲ. ಏಕೆಂದರೆ ಅವನಿಗೆ ಆವಶ್ಯಕವಾದ ಸಾಕ್ಷ್ಯಗಳು ಸಸ್ಯಶಾಸ್ತ್ರದಲ್ಲಿ ಇನ್ನೂ ದೊರೆತಿರಲಿಲ್ಲ. ಭಿನ್ನದೃಷ್ಟಿಯು ಈ ಗೆಳೆಯರಿಬ್ಬರಿಗೂ ಆ ವಿಚಾರದ ಮೇಲೆ ಆಗಾಗ ಚರ್ಚೆ ನಡೆಯುತ್ತಿತ್ತು. ಆ ಕಾಲದಲ್ಲಿ ಡಾರ್ವಿನ್ ಸ್ವಲ್ಪವಾದರೂ ಕೋಪ ತಾಪವಿಲ್ಲದೆ ವಿಚಾರವಿನಿಮಯಮಾಡುತ್ತಿದ್ದನು. ಅವನ ದೃಷ್ಟಿಪಥವನ್ನು ಹೂಕರನು ಅನೇಕ ಸಲ ಟೀಕಿಸಿ, ಪ್ರತಿಭಟಿಸುತ್ತಿದ್ದನು. ಅದಕ್ಕೆ ಡಾರ್ವಿನ್ 'ನಿನ್ನ ಟೀಕೆಗಳೆಲ್ಲ ಒಂದಲ್ಲ ಒಂದು ವಿಧದಲ್ಲಿ ನನಗೆ ಅನುಕೂಲ ವಾಗುತ್ತವೆ; ನಿನ್ನೊಡನೆ ಚರ್ಚಿಸುವುದರಿಂದ ನನ್ನ ಮನಸ್ಸಿನ ಹಲವು ಸಮಸ್ಯೆಗಳೂ ತೊಡಕುಗಳೂ ಪರಿಹಾರವಾಗುತ್ತಿವೆ; ಯಾವ ವಿಚಾರ ತೆಗೆದುಕೊಂಡರೂ ಮೊದಲು ಭಿನ್ನದೃಷ್ಟಿಯಲ್ಲಿ ವಾದಿಸತೊಡಗುವ ನಾವು ಕೊನೆಗೆ ಒಂದೇ ನಿರ್ಣಯಕ್ಕೆ ಬರುವುದು ಎಷ್ಟು ಹಿತಕರವಾಗಿದೆ!' ಎಂದು ನುಡಿಯುತ್ತಿದ್ದನು. ತನ್ನ 'ಜೀವಜಾತಿಗಳ ಹುಟ್ಟು' ಗ್ರಂಥ ಪ್ರಕಟವಾದ ನಂತರ ಮತವಾದಿಗಳ ಮತ್ತು ಇತರರ ಟೀಕೆಗಳಲ್ಲಿ ಮುಳುಗಿದ್ದ ಡಾರ್ವಿನ್ ತನ್ನ ಗೆಳೆಯನನ್ನು ಕುರಿತು, 'ಜಗತ್ತಿನಲ್ಲಿ ನೀನೊಬ್ಬನು ನನ್ನ ಮೇಲೆ ಚಿರಂತನವೂ ಕರುಣೆಯಿಟ್ಟಿರುತ್ತೀಯೆ' ಎಂದುಕೊಂಡನಂತೆ.

ಡಾರ್ವಿನ್ನನ ಮಹಾಕಾರ್ಯದಲ್ಲಿ ಹೂಕರನು ಎಷ್ಟೊಂದು ನೆರವಾಗಿದ್ದ ನೆಂಬುದನ್ನು ೧೮೬೩ರಲ್ಲಿ ಲಯಲ್ಲರು ಪ್ರಕಟಿಸಿ, ಅದಕ್ಕಾಗಿ ಅವನನ್ನು ಗೌರವಿಸಿ ಪ್ರಶಂಸಿಸಿದಾಗ ಹೂಕರನು ತನ್ನಿಂದ ಡಾರ್ವಿನ್ನನಿಗಾದ ಸಹಾಯ ಅತ್ಯಲ್ಪವೆಂದೂ ಗಣಿಸಲಿಯುವಲ್ಲವೆಂದೂ ದೈನ್ಯದಿಂದ ತಿಳಿಸಿಬಿಟ್ಟನು. ಆಗ ಡಾರ್ವಿನ್ನನೇ ಮುಂದೆ ಒಂದು ಹೂಕರನಿಗೊಂದು ಕಾಗದ ಬರೆದು 'ನಿನ್ನದೆಂಥ ಸಿಷ್ಟಾವು ತೇಜಸ್ಸು! ನೀನೆಂಥ ಸತ್ಯಸಂಧ! ಆದರೆ ಅಷ್ಟೊಂದು ಹೆಚ್ಚಾಗಿರಬಾರದು. ನಿನ್ನ ಕೃತಿಯ ವಿಚಾರವಾಗಿ ಎಷ್ಟೊಂದು ದೈನ್ಯ ದಿಂದ ನುಡಿದಿರುವೆ! ಪ್ರಪಂಚದಲ್ಲಿ ಹತ್ತು ಸಹಸ್ರ ಮಂದಿಗಳಲ್ಲಿ ಒಬ್ಬನೂ ನಿನ್ನಂಥವನಿರಲಾರ! ಲಯಲ್ಲರು ನಿನಗೆ ತೋರಿಸಿದ ಗೌರವಪ್ರಶಂಸೆಗಳಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ನನ್ನ ಕಾರ್ಯಸಾಧನೆಯಲ್ಲಿ ನಿನಗೆ ಗೌರವ

ವನ್ನು ಕೊಟ್ಟ ಹೊರತು ನನಗೆ ತೃಪ್ತಿಯಿಲ್ಲ' ಎಂದು ತನ್ನ ಕೃತಜ್ಞತೆಯನ್ನು ಒಪ್ಪಿಕೊಂಡನು.

ಹಕ್ಸ್ಲಿಯೂ ಡಾರ್ವಿನ್ನನ ಮಿತ್ರರಲ್ಲೊಬ್ಬನು. ಆತನು ವಿಕಾಸವಾದವನ್ನು ಜನಸಾಮಾನ್ಯದಲ್ಲಿ ಪ್ರಚಾರಮಾಡಿ ಬಳಕೆಗೆ ತಂದನಲ್ಲದೆ ಜೀವವರ್ಗದ ವಿಕಾಸಮಾರ್ಗವನ್ನು ವಿವರಿಸುವ ವಿವಿಧ ಲೇಖನಗಳನ್ನು ಬರೆದು ಪ್ರಕಟಿಸಿದನು. ಲಯಲ್ಲರೂ ಡಾರ್ವಿನ್ನನೊಡನೆ ಸ್ನೇಹದಿಂದಿದ್ದುಕೊಂಡಿದ್ದುದಲ್ಲದೆ ವಿವಿಧ ರೂಪದಲ್ಲಿ ಅವನ ತತ್ವಸಾಧನೆಗೆ ನೆರವಾದರು. ಅವರ ಭೂಮಿಶಾಸ್ತ್ರದ ಗ್ರಂಥವನ್ನೋದಿ ಡಾರ್ವಿನ್ ಅಪಾರ ಅನುಭವವನ್ನು ಪಡೆದಿದ್ದನು. ಲಯಲ್ಲರ ಮರಣಾನಂತರ ಅವರನ್ನು ಸ್ಮರಿಸಿಕೊಂಡು, ಡಾರ್ವಿನ್ 'ನಿಮ್ಮ ಗ್ರಂಥ ಪರಿಚಯ ನಾನು ವಿಜ್ಞಾನರಂಗದಲ್ಲಿ ಸಾಧಿಸಿರುವ ಎಲ್ಲ ಕಾರ್ಯಗಳಿಗೂ ಬಹುವಾಗಿ ನೆರವಾಯಿತು' ಎಂದು ಗೌರವವನ್ನು ತೋರಿಸಿದನು.

ತನ್ನ ವಿಚಾರದಲ್ಲಿ ದೀನ ಸ್ವಭಾವ

ತನ್ನ ವಿಚಾರವಾಗಿ ಡಾರ್ವಿನ್ ಬಹು ನಮ್ರಸ್ವಭಾವದಿಂದಿರುತ್ತಿದ್ದನು. ತನ್ನ ಸಂಶೋಧನೆಗಳನ್ನು ಕುರಿತು 'ನಾನು ವಿಜ್ಞಾನರಂಗದಲ್ಲಿ ಅಷ್ಟಿಷ್ಟು ಜಯ ಪಡೆದಿದ್ದರೆ ಅದು ನನ್ನ ಮನಸ್ಸಿನಲ್ಲಿ ನಡೆಯುತ್ತಿದ್ದ ಹೋರಾಟದ ಫಲ. ನನಗಿದ್ದ ವಿಜ್ಞಾನಪ್ರೇಮವೂ ಅನಂತವಾಗಿ ಯೋಚಿಸಲು ಆವಶ್ಯಕವಾದ ಸಹನೆಯೂ ಅಂಕಿಅಂಶಗಳನ್ನು ಒದಗಿಸಿಕೊಳ್ಳುವ ಉದ್ಯೋಗಶೀಲತೆಯೂ ಅಲ್ಪಸ್ವಲ್ಪ ಪ್ರತಿಭೆಯೂ ಸಾಮಾನ್ಯ ಜ್ಞಾನವೂ ಆ ಕಾರ್ಯದಲ್ಲಿ ನೆರವಾದುವು. ಇಂಥ ಸರ್ವ ಸಾಮಾನ್ಯ ಶಕ್ತಿಯುಳ್ಳ ನನ್ನಂಥವನು ವಿಜ್ಞಾನಿಗಳ ದೃಷ್ಟಿಯನ್ನು ಹಲವು ಮುಖ್ಯಾಂಶಗಳಲ್ಲಿ ಮಾರ್ಪಡಿಸಿರುವುದು ಆಶ್ಚರ್ಯವಾಗಿ ತೋರುತ್ತದೆ' ಎಂದು ಹೇಳಿಕೊಂಡಿರುವನು.

ವಿಜ್ಞಾನ ಶಕ ಪುರುಷ

ವಿವಿಧ ನೈಸರ್ಗಿಕ ಸಮಸ್ಯೆಗಳನ್ನು ಬಿಡಿಸಿ ವಿಕಾಸತತ್ವದ ತಳಹದಿಯನ್ನು ಹಾಕಿಕೊಳ್ಳುವಾಗ ಸೃಷ್ಟಿ ಮೊದಲಾದಂದಿನಿಂದ ವಿವಿಧ ಜೀವಜಾತಿಗಳು ಸಣ್ಣ ರೂಪದಿಂದ ದೊಡ್ಡ ರೂಪದ ಕಡೆಗೂ ದೀನವರ್ಗದಿಂದ ಉತ್ತಮ ವರ್ಗದ ಕಡೆಗೂ ಹೊಡಿದ್ದ ವಿಕಸನೋತ್ಸವದ ದೃಶ್ಯವನ್ನು ಡಾರ್ವಿನ್

ದರ್ಶಿಸಿರಬೇಕು. ಇಂಥ ಮಹಾಸಾಧನೆಗಾಗಿ ಅರ್ಧ ಶತಮಾನ ಕ್ಕಿಂತಲೂ ಹೆಚ್ಚು ಕಾಲ ದುಡಿದು ನಿಸರ್ಗಕ್ಕೆ ಸಂಬಂಧಿಸಿದ ವಿಶಾಲ ತತ್ತ್ವ ದರ್ಶನವನ್ನು ಮಾಡಿಕೊಂಡ ಮಹಾನುಭಾವಿ ಡಾರ್ವಿನ್ ವಿಜ್ಞಾನ ಶಕಪುರುಷನಾದನು.

## ೧೦. ಕೊನೆಯ ದಿನಗಳು, ಮರಣ ಮತ್ತು ಅಂತ್ಯಸಂಸ್ಕಾರ

ವಯಸ್ಸು ಹೆಚ್ಚಿದಂತೆಲ್ಲ ಡಾರ್ವಿನ್ನನ ಕೀರ್ತಿ ಸರ್ವತೋಮುಖ ವಾಗಿ ಬೆಳೆಯಲಾರಂಭಿಸಿತು. ೧೮೭೧ರಲ್ಲಿ ಅವನ ದಿವ್ಯ ಪ್ರತಿಭೆಗೊಪ್ಪು ವಂಥ 'ಪ್ರಷ್ಯ ಆರ್ಡರ್ ಆಫ್ ನೈಟ್‌ಹುಡ್' ಎಂಬ ಅಂತರ ರಾಷ್ಟ್ರೀಯ ಪ್ರಶಸ್ತಿ ದೊರೆಯಿತು. ೧೮೭೭ರಲ್ಲಿ ಕೇಂಬ್ರಿಡ್ಜ ವಿಶ್ವವಿದ್ಯಾನಿಲಯದವರು ಅವನು ಸಲ್ಲಿಸಿದ್ದ ಸೇವೆಗಾಗಿ ಎಲ್ ಎಲ್. ಡಿ. ಗೌರವ ಪದವಿಯನ್ನು ನೀಡಿದರು. ಫ್ರಾನ್ಸಿನ ಪ್ರಸಿದ್ಧ ವಿಜ್ಞಾನಸಂಸ್ಥೆಯವರು ಡಾರ್ವಿನ್ನನನ್ನು ಪ್ರಾಣಿಶಾಸ್ತ್ರಭಾಗದ ಸದಸ್ಯನನ್ನಾಗಿ ಆರಿಸಿಕೊಂಡು ಗೌರವಿಸಿದರು. ೧೮೭೯ರಲ್ಲಿ ಲಂಡನ್ನಿನ ಫಿಸಿಷಿಯರ್ಸ ಕಾಲೇಜಿನವರು ಡಾರ್ವಿನ್ನನ ಸೇವೆ ಯನ್ನು ಸ್ಮರಿಸಿಕೊಂಡು ಸ್ವರ್ಣಪದಕವಿತ್ತು ಸತ್ಕರಿಸಿದರು. ಹೀಗೆ ಬಿಡುವಿಲ್ಲದೆ ಬಿರುದು ಪ್ರಶಸ್ತಿಗಳು ಬರುತ್ತಿದ್ದರೂ ಅವನ ನಡೆನುಡಿಗಳಲ್ಲಿ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ. ಅನೇಕರು ಆದರದಿಂದ ತನ್ನನ್ನು ಸತ್ಕರಿಸುತ್ತಿದ್ದುದಕ್ಕಾಗಿ ಅವನ ಅಂತರಾತ್ಮ ಆನಂದದಿಂದ ವಿಕಸಿಸು ವಂತಾದರೂ, ಆ ಗೌರವ ಪ್ರಶಸ್ತಿಗಳು ತನ್ನ ಪಾಂಡಿತ್ಯಕ್ಕೆ ದೊರೆತ ವೆಂದು ಡಾರ್ವಿನ್ ಎಂದೂ ಗಣಿಸಿದವನಲ್ಲ. ಇಡೀ ಮಾನವಕೋಟಿಯೇ ಅವನ ಸೇವೆಯನ್ನು ಅರಿತುಕೊಂಡು ಮುಕ್ತಕಂಠದಿಂದ ಹೊಗಳುತ್ತಿದ್ದರೂ ಅವನು ಮಾತ್ರ 'ಕೇವಲ ವಿಜ್ಞಾನಕ್ಕಾಗಿ ದುಡಿದೆನು' ಎಂದು ದೈನ್ಯ ಸ್ವಭಾವದಿಂದಿರುತ್ತಿದ್ದನು. ಮೊದಮೊದಲು, ತಾನು ಪ್ರಕಟಿಸಿದ ತತ್ವದ ವಿಚಾರವಾಗಿ ಸಮಾಜ ತೋರಿದ ಪ್ರತಿಭಟನೆಗೂ ಆಕ್ರೋಶಕ್ಕೂ ಡಾರ್ವಿನ್ ಕುಗ್ಗಲಿಲ್ಲ; ತನ್ನ ವೃದ್ಧಾಪ್ಯದಲ್ಲಿ ಅದೇ ಜನಾಂಗ ನೀಡಿದ ಗೌರವ ಪ್ರಶಸ್ತಿಗಳಿಂದ ಹಿಗ್ಗಿ ಹೋಗಲಿಲ್ಲ; ಮೌನವಾಗಿ ಡಾನಿನ ಪ್ರಶಾಂತ ವಾತಾ ವರಣದಲ್ಲುಳಿದು ವಿಜ್ಞಾನ ಕ್ಷೇತ್ರದಲ್ಲಿ ಎಂದಿನಂತೆ ದುಡಿಯುತ್ತಿದ್ದನು.

ಗೌರವ ಪ್ರಶಸ್ತಿಗಳು

ಕೇಂಬ್ರಿಡ್ಜ ವಿಶ್ವವಿದ್ಯಾನಿಲಯದಲ್ಲಿ ಡಾರ್ವಿನ್ ಬಹುಕಾಲದವರೆಗೂ ವಿದ್ಯಾರ್ಥಿಯಾಗಿದ್ದನಷ್ಟೆ. ತಮ್ಮ ವಿದ್ಯಾಮಂದಿರದಲ್ಲಿ ಶಿಕ್ಷಣಪಡೆದ

ವಿದ್ಯಾರ್ಥಿಯೊಬ್ಬನು ಅಂತರರಾಷ್ಟ್ರೀಯ ಮಹಾವ್ಯಕ್ತಿಯಾದುದನ್ನು ಸ್ಮರಿಸಿಕೊಂಡು ಅವನಿಗೆ ಎಲ್ ಎಲ್. ಡಿ. ಗೌರವಪ್ರಶಸ್ತಿಯನ್ನು ನೀಡಿದುವನ್ನು ಮೇಲೆ ವಿವರಿಸಿರುವೆವು ಅಷ್ಟರಿಂದಲೇ ತಣಿಯದೆ ವಿಶ್ವವಿದ್ಯಾನಿಲಯದವರು ಅವನ ಸೇವೆಯನ್ನು ಚಿರಸ್ಮರಣೀಯವಾಗಿಸುವಂಥ ಸ್ಮಾರಕವೊಂದನ್ನು ರಚಿಸಲು ನಿಶ್ಚಯಿಸಿ, ಹಣವನ್ನು ಕೂಡಿಸಿದರು. ಆಗ ಪ್ರಸಿದ್ಧ ಕಲಾವಿದರಾಗಿದ್ದ ರಿಚ್ಮಂಡರು ಡಾರ್ವಿನ್ನನ ತೈಲಚಿತ್ರವೊಂದನ್ನು ಬರೆದುಕೊಟ್ಟರು. ಅದನ್ನು ಕೇಂಬ್ರಿಡ್ಜ್ ಮ್ಯೂಸಿಯಮ್ಮಿನ ದರ್ಶನಶಾಸ್ತ್ರದ ಗ್ರಂಥಭಂಡಾರದಲ್ಲಿ ಸ್ಥಾಪಿಸಿದರು. ಆ ಸ್ಮಾರಕ ಇಂದಿಗೂ ಅಲ್ಲಿನ ದರ್ಶನ ಶಾಸ್ತ್ರ ವಿದ್ಯಾರ್ಥಿಗಳಿಗೆ ಆವೇಶವನ್ನು ತುಂಬುವಂತೆ ರಾರಾಜಿಸುತ್ತಿದೆ ಅನಂತರ ಮತ್ತೊಂದು ತೈಲಚಿತ್ರವೂ ತಯಾರಾಯಿತು. ಆ ಚಿತ್ರದಲ್ಲಿ ಪೂಜ್ಯ ವಿಜ್ಞಾನಿಯ ಮೂರ್ತಿತ್ವ ಪೂರ್ಣವಾಗಿಯೂ ಸಮರ್ಪಕವಾಗಿಯೂ ಪ್ರದರ್ಶಿತವಾಗಿದೆಯೆಂದು ಹೇಳುವರು. ಡಾರ್ವಿನ್ನನೇ ಅದು ತನ್ನ ಭಾವಚಿತ್ರಗಳಲ್ಲೆಲ್ಲ ಉತ್ತಮವಾದುದೆಂದು ಒಮ್ಮೆ ಹೇಳಿದನಂತೆ. ತನ್ನ ಜಗದ್ವಿಖ್ಯಾತ ತತ್ವವನ್ನು ಮೊದಲು ಓದಿ ಪ್ರಕಟಿಸಿದ್ದುದರ ಸ್ಮಾರಕವಾಗಿ ಆ ಚಿತ್ರವನ್ನು ಲಿನಿಯನ್ ಸಂಘದಲ್ಲಿ ಅನಾವರಣ ಮಾಡಲಾಯಿತು.

ವೃದ್ಧಾಪ್ಯ ಸನ್ನಿಹಿತವಾದಂತೆ ಡಾರ್ವಿನ್ನನ ದರ್ಶನಾರ್ಥವಾಗಿ ವಿವಿಧ ದೇಶಗಳಿಂದ ಯಾತ್ರಿಕರು ಹೆಚ್ಚು ಹೆಚ್ಚಾಗಿ ಬರುತ್ತಿದ್ದರು. ಹಾಗೆ ಬರುತ್ತಿದ್ದವರಲ್ಲಿ ಕೆಲವರು ಡಾನಿನಲ್ಲಿ ತಾವು ಕಂಡು ಕೇಳಿದ ಅನುಭವಗಳನ್ನು ಅಲ್ಲಲ್ಲಿ ಪ್ರಕಟಿಸಿರುವರು ಅಂಥ ಲೇಖನಗಳಿಂದ ಆರಿಸಿದ ಹಲವು ಅಂಶಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಡಾನಿಗೆ ಬರುವ ತನ್ನ ಸ್ನೇಹಿತರನ್ನು ಕರೆದು ತರಲು ಡಾರ್ವಿನ್ ತನ್ನ ಗಾಡಿಯನ್ನೇ ರೈಲು ನಿಲ್ದಾಣಕ್ಕೆ ಕಳುಹಿಸಿಕೊಡುತ್ತಿದ್ದನು. ಗಾಡಿಯಲ್ಲಿ ಕುಳಿತು ಬರುವಾಗ ದಾರಿಯ ಎರಡು ಕಡೆಯೂ ಎತ್ತರವಾಗಿ ಬೆಳೆದು ನಿಂತಿದ್ದ ಸಾಲುಮರಗಳು ಕಾಣುತ್ತಿದ್ದುವು. ಗಿಡಮರಗಳಿಂದ ಆವೃತವಾಗಿದ್ದ ಆ ಗ್ರಾಮ ಬಹುದೂರದವರೆಗೂ ಹಸುರಸೊಂಪನ್ನು ಚಿಮ್ಮುತ್ತಿತ್ತು. ಗ್ರಾಮವನ್ನು ಹೊಕ್ಕೊಡನೆ ಡಾರ್ವಿನ್ನನ ಮನೆಯ ಮುಂದೆ ತೂಗಿ ತೊನೆಯುತ್ತಿದ್ದ ವಿವಿಧ ಜಾತಿಯ ಲತೆಗಳು ಕಣ್ಣಿಗೆ ಬೀಳುತ್ತಿದ್ದುವು. ಸುತ್ತಲೂ ಶಾಂತ

ವಾತಾವರಣ. ಮನೆಯ ಒಳಗೆ ಗಾಡಿ ಬರುವುದರೊಳಗೆ ಡಾರ್ವಿನ್ ಬಾಗಿಲಲ್ಲಿ ಕಾದಿರುತ್ತಿದ್ದನು. ಆರಡಿ ಎತ್ತರದ ಗಂಭೀರವಾದ ವ್ಯಕ್ತಿ; ಪ್ರಫುಲ್ಲವಾದ ಮುಖ, ವಿಸ್ತಾರವಾದ ಹಣೆ; ಪ್ರಧಾನವಾದ ಮೂಗು; ಸ್ವಲ್ಪ ಆಳವಾಗಿದ್ದರೂ, ಅಚ್ಚಳಿಯದ ಸೂಕ್ಷ್ಮ ಪರಿಶೀಲನಶಕ್ತಿಯನ್ನು ಪ್ರದರ್ಶಿಸುತ್ತಾ ಮಿನುಗುವ ಕಣ್ಣುಗಳು; ನಿಡಿದಾಗಿ ಬೆಳೆದ, ಬಾಳ ಕಹಿ ಸಿಹಿ ಅನುಭವಗಳನ್ನು ಸೂಚಿಸುವಂತಿರುವ ಬಿಳಿಯ ಗಡ್ಡದ ನಡುವೆ ಅತಿಥಿಯನ್ನು ಪ್ರೇಮದಿಂದ ಆಹ್ವಾನಿಸುವ ಮಂದಹಾಸ. ಇಂಥ ಮಹಾಶಿರವನ್ನು ಹೊತ್ತುನಿಂತ ಅವನ ಎತ್ತರವಾದ ಕಾಯ ಯಾತ್ರಿಕರ ಮುಂದೆ ಬಂದು ನಿಂತಾಗ ಗ್ರೀಕರ ಪುರಾಣ ಪ್ರಸಿದ್ಧನಾದ ಅಟ್ಲಾಸನನ್ನು ನೆನಪಿಗೆ ತರುತ್ತಿತ್ತಂತೆ! ವೃದ್ಧಾಪ್ಯದ ದಯಾಪೂರಿತ ಕಣ್ಣುಗಳು ಮಿನುಮಿನುಗುತ್ತಿರುವಾಗ ಎಳೆಯ ಮಗುವಿನ ಮನಸ್ಸಿನಿಂದ ಅತಿಥಿಯನ್ನು ಒಳಗೆ ಬರಮಾಡಿಕೊಳ್ಳುತ್ತಿದ್ದನು. ಅವನ ಮುಖದಲ್ಲಿ ಉಕ್ಕುತ್ತಿದ್ದ ಪ್ರೇಮಾಸಕ್ತಿಗಳ ಕುರುಹನ್ನು ಕಂಡೊಡನೆ ಬಂದವರು ಕೃತಕೃತ್ಯರಾದೆವೆಂದು ಭಾವಿಸುತ್ತಿದ್ದರು. ವೃದ್ಧಾಪ್ಯದಲ್ಲೂ ಅವನ ಮುಖದ ಮೇಲೆ ಚಿರಯೌವನದ ಒಂದು ತೇಜಸ್ಸು ತುಳುಕಾಡುತ್ತಿತ್ತೆಂದು ನೋಡಿದವರು ಹೇಳಿರುವರು. ಸರಳಸ್ವಭಾವದ ಮೃದುಮಧುರ ವಚನಗಳಿಂದ ಡಾರ್ವಿನ್ ಅತಿಥಿಗಳನ್ನು ಉಪಚರಿಸಲು ಮೊದಲು ಮಾಡಿದೊಡನೆಯೇ ಅವರ ಮನಸ್ಸಿನಲ್ಲಿ ಅವನೊಬ್ಬ ಅತಿಮಾನುಷವ್ಯಕ್ತಿಯಿರಬೇಕೆಂದು ಭಾಸವಾಗುತ್ತಿತ್ತು.

ತಾನು ಹಿರಿಯ ವಿಜ್ಞಾನಿಯೆಂಬ ಆಡಂಬರವಿಲ್ಲದೆ ಡಾರ್ವಿನ್ ಬಂದ ಎಲ್ಲರೊಡನೆಯೂ ಸರಳವಾಗಿ ಮಾತನಾಡುತ್ತಿದ್ದನು. ಅವನ ಗ್ರಂಥಗಳು ಎಷ್ಟು ಬೋಧಪ್ರದವಾಗಿದ್ದುವೋ ಅವನೊಡನೆ ಮಾತನಾಡುವುದೂ ಅಷ್ಟೇ ಬೋಧಪ್ರದವಾಗಿತ್ತು. ಯಾವುದಾದರೂ ವಿಚಾರವೊಂದರ ಮೇಲೆ ಮಾತನಾಡಲು ಮೊದಲುಮಾಡಿದಾಗ ಕೇಳುವವರ ಮನಸ್ಸಿನಲ್ಲಿ ವಿವಿಧ ವಿಚಾರ ತರಂಗಗಳು ಮೂಡಿ ಹೊಸಹೊಸ ಭಾವನೆಗಳ ಕಡೆಗೆ ಹೆಜ್ಜೆಯಿಡುವಂತಾಗುತ್ತಿತ್ತು. ಬಂದ ಅತಿಥಿಗಳೊಡನೆ ಮನೆಯೊಡತಿಯೂ ಮಕ್ಕಳೂ ಹರ್ಷದಿಂದ ಮಿಳಿತು ಸಂಭಾಷಿಸುತ್ತಿದ್ದರು. ಡಾರ್ವಿನ್ ಎಪ್ಪತ್ತು ವರ್ಷಗಳು ಕಳೆದ ಮೇಲೂ ಮಾತನಾಡುವಾಗ ಎಳೆಯವರ ನಲವುಗೆಲವುಗಳಿಂದಿರುತ್ತಿ

ದ್ದನಂತೆ! ಮಾತನಾಡುವಾಗ ಯಾವ ವ್ಯಕ್ತಿಯನ್ನೇ ಆಗಲಿ, ಯಾವ ದೃಷ್ಟಿಯನ್ನೇ ಆಗಲಿ ಪರಿಹಾಸ್ಯ ಮಾಡುತ್ತಿರಲಿಲ್ಲ. ಇದೇ ಉದಾತ್ತ ಭಾವನೆಯೂ ಗಂಭೀರ ಸರಣಿಯೂ ಅವನ ಇಡೀ ಗ್ರಂಥರಾಶಿಯಲ್ಲೂ ಎದ್ದು ಕಾಣುತ್ತವೆ. ಅವನ ಒಂದೊಂದು ಮಾತಿನಲ್ಲೂ ಖಚಿತವಾದ ಅಭಿಪ್ರಾಯ ವ್ಯಕ್ತವಾಗುತ್ತಿತ್ತು. ಅನಂತವಾಗಿ ಯೋಚಿಸಿ ಅರಿತುಕೊಂಡಿದ್ದ ಅನುಭವಗಳ ಆಧಾರದ ಮೇಲೆ ಮಾತನಾಡುತ್ತಿದ್ದುದರಿಂದ ಅವನು ಹೇಳಿದುದನ್ನು ತಿರುಗಿಸಿ ಮೊಟಗಿಸಿ ಹೇಳುವಂತಿರಲಿಲ್ಲ.

ಡಾರ್ವಿನ್ನನ ಮನಸ್ಸು ಎಷ್ಟು ಸರಳವಾಗಿತ್ತೋ ಅಷ್ಟು ಮಧುರವಾಗಿತ್ತು. ಅಂಥ ಸಾತ್ವಿಕತೇಜದ ಜೀವನ ಸಾರ್ಥಕ್ಯವನ್ನು ಕಂಡು ಮಹೋನ್ನತ ಸ್ಥಾನವನ್ನು ಗಳಿಸಿದುದು ಆಶ್ಚರ್ಯವಲ್ಲ. ಅವನ ಸ್ವಭಾವ ಆದರ್ಶಸಾಧನೆಗೆ ಒಪ್ಪುತಕ್ಕ ಹಿನ್ನೆಲೆಯೆನ್ನಬಹುದು. ಉಚ್ಚಪದವಿಗೇರಿದ ಅನೇಕರಲ್ಲಿ ಕಂಡುಬರುವ ಹೆಮ್ಮೆ, ದುರಾಸೆ, ತಿರಸ್ಕಾರ ಮೊದಲಾದ ದುರ್ಗುಣಗಳಾವುವೂ ಅವನ ಹೃದಯದ ಪವಿತ್ರತೆಯನ್ನು ಕದಡಿರಲಿಲ್ಲ. ಅವನ ನಡೆನುಡಿಗಳಲ್ಲಿ ಗಾಂಭೀರ್ಯ ಮೂರ್ತಿವೆತ್ತಿದ್ದರೂ ತನ್ನ ಪ್ರತಿಭೆಗೊಪ್ಪುವಂಥ ಹಾಸ್ಯವೂ ಇತ್ತು. ಆದರೆ ಅವರಲ್ಲಿ ಕುತ್ಸಿತ ಸ್ವಭಾವವಾಗಲಿ, ಇತರರ ಮನನೋಯಿಸುವಂಥ ಕಠೋರತೆಯಾಗಲಿ ಇರಲಿಲ್ಲ; ಶುದ್ಧ ಮಧುರವೂ ಮುಗ್ಧವೂ ಆದ ಹಾಸ್ಯ. ಅವನು ನಗುವಾಗ ಪ್ರಸಿದ್ಧ ಕವಿ ಹೋಮರನ ನೆನಪಾಗುತ್ತಿತ್ತಂತೆ. 'ರಜತ ವರ್ಣದ ರೋಮಕುಂಜದ ನಡುವೆ ತುಟಿಗಳು ಗಂಭೀರವಾಗಿ ವಿಕಸಿಸಿ ಅಲುಗುವುದನ್ನು ಎಂದಿಗೂ ಮರೆಯಲಾರೆವು' ಎಂದು ಅವನ ನಗೆಯನ್ನು ನೋಡಿದವರೊಬ್ಬರು ವರ್ಣಿಸಿರುವರು.

ಡಾರ್ವಿನ್ನನದು ತೆರೆದ ಮನ. ದ್ವೇಷಾಸೂಯೆಗಳಿಲ್ಲದೆ ಸಹಾಯ ಕೋರಿದ ಎಲ್ಲರಿಗೂ ಸಹಕಾರಹಸ್ತವನ್ನು ನೀಡುತ್ತಿದ್ದನು. ಯಾರು ಯಾವ ವಿಚಾರದ ಮೇಲೆ ಪ್ರಶ್ನಿಸಿದರೂ ತನ್ನ ಕೈಲಾದ ಮಟ್ಟಿಗೆ ಸಮಂಜಸ ಉತ್ತರವನ್ನು ಕೊಡುತ್ತಿದ್ದನು. ಎಲ್ಲ ತನ್ನ ಸಹಾಯವನ್ನು ಕೋರುವರೆಂಬ ಸ್ವಾಭಿಮಾನವೂ ಅವನಿಗಿರಲಿಲ್ಲ. ಒಮ್ಮೆ ಗೆಳೆಯನೊಬ್ಬನು ಡಾರ್ವಿನ್ನನ ಸೇವೆಯನ್ನು ಪ್ರಶಂಸಿಸಿ ಕಾಗದ ಬರೆದಾಗ 'ನೀವು ನನ್ನನ್ನು

ಅತಿಯಾಗಿ ಹೊಗಳಿರುತ್ತೀರಿ; ಅದರಿಂದ ನನಗೆ ತಲೆ ತಗ್ಗಿಸುವಂತಾಗುತ್ತದೆ’ ಎಂದು ಉತ್ತರವಿತ್ತುದನ್ನು ನೋಡಿದರೆ ಅವನ ಮನಸ್ಸಿನಲ್ಲಿ ಗೌರವದ ಆಕಾಂಕ್ಷೆಯೇ ಇರಲಿಲ್ಲವೆಂಬುದು ವ್ಯಕ್ತವಾಗುತ್ತದೆ ಮತ್ತೊಬ್ಬ ಗೆಳೆಯ ಹಾಗೆಯೇ ಹೊಗಳಿ ಬರೆದಿದ್ದಾಗ ‘ನಾನು ಮಾಡಿರುವ ಸೇವೆಗೆ ನೀವು ನೀಡಿರುವ ಗೌರವ ಅತಿಯಾದುದು ಯಾವ ಕಾರ್ಯವನ್ನೂ ನಾನು ಗೌರವ ಪ್ರಶಸ್ತಿಗಳ ಆಸೆಯಿಂದ ಮಾಡಿದವನಲ್ಲ; ವಿಜ್ಞಾನದ ಬೆಳವಣಿಗೆಗಾಗಿ ಮಾಡಿರುವೆನಷ್ಟೆ’ ಎಂದು ದೈನ್ಯದಿಂದ ಉತ್ತರಕೊಟ್ಟನು. ಮತ್ತೊಂದು ಸಂದರ್ಭದಲ್ಲಿ ‘ಕಾರ್ಯಮುಖನಾಗಿರುವುದು ನನಗೆ ಬಲು ಆನಂದ; ಸಂಶೋಧನೆಯೆಂದರೆ ಅತ್ಯಾಸಕ್ತಿ. ಬರೆಯುವುದೆಂದರೆ ಸ್ವಲ್ಪ ಕಷ್ಟವೆ’ ಎಂದು ಮುಚ್ಚುಮರೆಯಿಲ್ಲದೆ ತನ್ನ ಸ್ವಭಾವವನ್ನು ತಿಳಿಸಿಬಿಟ್ಟನು.

ಕುಟುಂಬ ಜೀವನ

ಡಾರ್ವಿನ್ನನ ಕುಟುಂಬ ಸುಖಸಂತೋಷಗಳಿಂದ ತುಂಬಿತ್ತು. ಮಕ್ಕಳೂ ಮನೆಯೊಡತಿಯೂ ಭಕ್ತಿಯಿಂದಲೂ ಪ್ರೇಮದಿಂದಲೂ ಅವನ ಸೇವೆಯಲ್ಲಿ ನಿರತರಾಗಿರುತ್ತಿದ್ದರು. ಅನಾರೋಗ್ಯದಿಂದ ನರಳುತ್ತಿದ್ದ ಡಾರ್ವಿನ್ ೧೮೪೨ರಲ್ಲಿ ಲಂಡನ್ನನ್ನುಳಿದು ಡಾನಿಗೆ ಒಂದು ನೆಲಸಿದನಷ್ಟೆ. ಆಮೇಲೆ ಅವನು ತನ್ನ ಬೇನೆಯಿಂದ ಎಚ್ಚೆತ್ತು ತಾನು ಹಿಡಿದಿದ್ದ ಮಹಾಕಾರ್ಯವನ್ನು ಮುಗಿಸುವೆನೇ ಎಂಬುದು ಅನುಮಾನವಾಗಿತ್ತು. ಅಂಥ ಉತ್ಕಟಕಾಲದಲ್ಲಿ ಅವನ ಹೆಂಡತಿ ಮನೆಗೆಲಸಗಳನ್ನು ದಕ್ಷತೆಯಿಂದ ನಡೆಸಿಕೊಂಡು ಹೋಗುವುದರ ಜೊತೆಗೆ ಅವನಿಗೆ ಎಲ್ಲ ವಿಧವಾದ ಉತ್ತೇಜನವನ್ನೂ ನೀಡಿ ಉತ್ಸಾಹ ತುಂಬುತ್ತಿದ್ದಳು. ತನ್ನ ಪತಿ ಚೇತರಿಸಿಕೊಂಡು ವಿಜ್ಞಾನರಂಗದಲ್ಲಿ ದುಡಿದು ಫಲಕಾರಿಯಾದ ಸಂಶೋಧನೆಗಳನ್ನು ನಡೆಸಿಕೊಂಡು ಹೋಗುವುದಕ್ಕೆ ಅವಳೆಷ್ಟೊಂದು ನೆರವಾಗುತ್ತಿದ್ದಳೆಂಬುದನ್ನು ಹೇಳಬೇಕಾಗಿಲ್ಲ. ಅವನಿಗೆ ಈ ಮಹೋಪಕಾರದ ಅರಿವು ಚೆನ್ನಾಗಿತ್ತು. ವೃದ್ಧಾಪ್ಯ ಸಮೀಪಿಸಿದಂತೆ ಗಂಡ ಹೆಂಡತಿಯರ ಮಧುರಬಾಂಧವ್ಯ ಹೆಚ್ಚುತ್ತ ಬಂತು. ಅವರೊಡನೆ ಅವರ ಮಕ್ಕಳೂ ಇತರ ಬಂಧುಮಿತ್ರರೂ ಪ್ರೇಮಾಸಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಡಾರ್ವಿನ್ನನ ಮುರಿದಿದ್ದ ಬಾಳು ಅವನ ಹೆಂಡತಿಯ

ಸಹಾಯದಿಂದ ಸರಿಯಾಗಿ, ಸುಖಪ್ರದವಾಗಿ ಮುಂದೆ ಸಾಗಲು ಅವಕಾಶ ವಾಯಿತು.

ಆರೋಗ್ಯಭಾಗ್ಯ ಕೆಟ್ಟಿದ್ದರಿಂದ ಡಾರ್ವಿನ್ ಹೆಚ್ಚುಕಾಲ ಮನೆಯಲ್ಲೇ ಉಳಿಯಬೇಕಾಯಿತು. ಆದದರಿಂದ ತನ್ನ ಮಕ್ಕಳುಮರಿಗಳೊಡನೆ ನಿರಂತರವೂ ವ್ಯವಹರಿಸುವ ಅವಕಾಶ ದೊರೆಯಿತು. ತಾನು ಎಂಥ ಮಹತ್ತರ ಕಾರ್ಯಗಳಲ್ಲಿ ತೊಡಗಿದ್ದರೂ ಮಕ್ಕಳೊಡನೆ ಸರಳತನದಿಂದ ಆಡುವುದನ್ನು ಮಾತ್ರ ತೊರೆದವನಲ್ಲ. ಅವನೊಡನೆ ಆಡುವುದೆಂದರೆ ಮಕ್ಕಳಿಗೂ ತುಂಬ ಆಸೆ. ಅವನು ಅವರಿಗೆ ಸಣ್ಣ ಸಣ್ಣ ಸ್ವಾರಸ್ಯವುಳ್ಳ ಕತೆಗಳನ್ನು ಹೇಳುತ್ತಿದ್ದುದಲ್ಲದೆ ಅವರಿಷ್ಟದಂತೆ ಅವರೊಡನೆ ತಾನೂ ಎಳೆಮಕ್ಕಳಂತೆ ಆಡಲು ಒಪ್ಪುತ್ತಿದ್ದನು ಅವನ ಸರಳಸ್ವಭಾವವನ್ನು ಕಂಡು ಧೈರ್ಯಗೊಂಡು ಮಕ್ಕಳು ಅವನ ಸಂಶೋಧನಶಾಲೆಯಕ್ಕೆ ನುಗ್ಗಿ, ಧಾಳಿಮಾಡುತ್ತಿದ್ದುದೂ ಉಂಟು. ಎಂಥ ಸೂಕ್ಷ್ಮ ಸಂಶೋಧನೆಗಳಲ್ಲಿ ತಾನು ತೊಡಗಿದ್ದರೂ ಅನುಪಮ ಸಹನೆಯಿಂದ ಅವರನ್ನು ಮಾತನಾಡಿಸುತ್ತಿದ್ದನು. ಅವನೊಡನೆ ಆಟವಾಡಲು ಮಕ್ಕಳಿಗಿದ್ದ ಆಸಕ್ತಿಯನ್ನು ತೋರಿಸುವ ಒಂದು ಸಂದರ್ಭವನ್ನಿಲ್ಲಿ ಉದಹರಿಸಬಹುದು : ಒಮ್ಮೆ ಅವನ ನಾಲ್ಕು ವರ್ಷದ ಮಗು ಡಾರ್ವಿನ್ನನನ್ನು ಆಟಕ್ಕೆ ಒರಲು ಕರೆಯಿತಂತೆ. ಆಗ ಅವನು ಯಾವುದೋ ಕಾರ್ಯದಲ್ಲಿ ತೊಡಗಿದ್ದುದರಿಂದ ಹೋಗಲಾಗಲಿಲ್ಲ. ಆಗ ಮಗು ಅವನಿಗೆ ಆರು ಪೆನ್ನಿಗಳನ್ನು ಲಂಚಕೊಟ್ಟು ಆಟಕ್ಕೆ ಬರಲು ಪೀಡಿಸಿತಂತೆ! ಮತ್ತೊಮ್ಮೆ ಮಕ್ಕಳಲ್ಲೊಬ್ಬನು ಅವನ ಸೋಫಾದ ಮೇಲೆ ಹತ್ತಿ ಕುಣಿಯುತ್ತಿದ್ದನಂತೆ. ಅದರಲ್ಲಳವಡಿಸಿದ್ದ ಸ್ಪ್ರಿಂಗುಗಳು ಮುರಿದು ಹೋಗುವುವೆಂಬ ಭೀತಿಯಿಂದ ಯಾರೂ ಹಾಗೆ ಮಾಡುವಂತಿರಲಿಲ್ಲ. ಡಾರ್ವಿನ್ ಕೊಠಡಿಯೊಳಕ್ಕೆ ಬಂದು ಅದನ್ನು ನೋಡಿ 'ಮಗು, ನೀನು ಹಾಗೆ ಮಾಡಬಾರದು' ಎಂದು ಹೇಳಿದನಂತೆ. ಆಗ ಮಗು 'ಹಾಗಾದರೆ ನೀನು ಹೊರಗೆ ಹೊರಟುಹೋಗು' ಎಂದು ಗದರಿಸಿತಂತೆ! ಡಾರ್ವಿನ್ ನಸುನಕ್ಕು ತೆಪ್ಪಗಾದನು! ಇಡೀ ಜೀವನದಲ್ಲೇ ತನ್ನ ಮಕ್ಕಳನ್ನು ಬೈದವನಲ್ಲ. ಆದರೂ ಅವರಾರೂ ಬೇಕಾಗಿ, ತಂದೆಗೆ ಅವಿಧೇಯರಾಗಿ ವರ್ತಿಸುತ್ತಿರಲಿಲ್ಲ.

ಹಿಂದೆ ವಿವರಿಸಿರುವಂತೆ ಡಾರ್ವಿನ್ ಗ್ರಂಥವೊಂದನ್ನು ಬರೆಯಲು ತನ್ನ ಎಳೆಯ ಮಕ್ಕಳ ಸ್ವಭಾವಾದಿ ಗುಣಗಳನ್ನು ಅಭ್ಯಾಸಿಸುತ್ತಿದ್ದನಷ್ಟೆ. ಆ ಸನ್ನಿವೇಶಗಳನ್ನು ನೆನಸಿಕೊಂಡು 'ನಿಮ್ಮೊಡನೆ ನಾನು ಆಟವಾಡುತ್ತಿದ್ದಾಗ ಎಷ್ಟೊಂದು ಆನಂದವಾಗಿತ್ತು! ಇನ್ನೆಂದಿಗೆ ಅಂದಿನಂಥ ದಿನಗಳು ಬಂದಾವು' ಎಂದು ಆಗಾಗ ನಿಟ್ಟುಸಿರುಬಿಡುತ್ತಿದ್ದನು. ತನ್ನ ಮಕ್ಕಳ ಆಟದ ಪದಾರ್ಥಗಳಲ್ಲೂ ಅವನಿಗೆ ತುಂಬ ಆಸಕ್ತಿ. ಮಗನೊಬ್ಬನು ಒಮ್ಮೆ ಖಾಯಿಲೆಯಾದನು. ಆ ಮಗ ಸ್ಟಾಂಪುಗಳನ್ನು ಶೇಖರಿಸುವುದರಲ್ಲಿ ಆಸಕ್ತಿವಹಿಸುತ್ತಿದ್ದನಂತೆ. ಡಾರ್ವಿನ್ ತನ್ನ ಗೆಳೆಯರ ಹತ್ತಿರಿದ್ದ ವಿಶೇಷರೀತಿಯ ಸ್ಟಾಂಪುಗಳನ್ನು ತಂದು ಅವನಿಗೆ ಕೊಟ್ಟು ಗೆಲವಾಗಿರಿಸುತ್ತಿದ್ದನಂತೆ. ಹಾಗೆಯೇ ತನ್ನ ಮಕ್ಕಳು ಸಾಕುತ್ತಿದ್ದ ಮರಿಗಳನ್ನೂ ಆಸಕ್ತಿಯಿಂದ ನೋಡಿಕೊಳ್ಳುತ್ತಿದ್ದನು. ಅವನಿಗೆ ಬೆಕ್ಕುಗಳನ್ನು ಕಂಡರೆ ನಾಯಿಗಳಲ್ಲಿದ್ದಷ್ಟು ಆಸಕ್ತಿಯಿರಲಿಲ್ಲ. ಆದರೂ ತನ್ನ ಮಕ್ಕಳ ಪ್ರೇಮದ ಮರಿಗಳಾದುದರಿಂದ ಅವುಗಳನ್ನೂ ಎಚ್ಚರಿಕೆಯಿಂದ ಸಾಕುತ್ತಿದ್ದನು ಅವರು ಏನಾದರೂ ಕುತೂಹಲವಾದ ಪ್ರಶ್ನೆಯನ್ನು ಕೇಳಿದಾಗ ಸಹನೆಯಿಂದ ಅವರಿಗೆ ಉತ್ತರ ಹೇಳುತ್ತಿದ್ದನು. ಅವನು ಹೇಳುವ ರೀತಿಯನ್ನೂ ಗಂಭೀರಭಾವವನ್ನೂ ಕಂಡು ಅವರು ಅವನು ಹೇಳುವುದೆಲ್ಲ ವೇದವಾಕ್ಯವೆಂದೇ ಭಾವಿಸುತ್ತಿದ್ದರು. ಡಾರ್ವಿನ್ನನ ಮಗಳು ತನ್ನ ತಂದೆಯ ವಿಚಾರವಾಗಿ ಮಾತನಾಡುತ್ತಾ 'ನಮ್ಮನ್ನು ಅವನು ಸಲಹೆಗಾರರೆಂದು ಹೇಳುತ್ತಿದ್ದನು. ನಮ್ಮ ಶಕ್ತಿಯ ವಿಚಾರದಲ್ಲಿ ನಮ್ಮ ಮನಸ್ಸಿನಲ್ಲಿ ಹಿರಿಯಭಾವನೆ ತುಂಬುತ್ತಿದ್ದನು. ಆದುದರಿಂದ ನಮ್ಮ ಅಂತರಾಳದಲ್ಲಿದ್ದ ಸತ್ಯಾಂಶಗಳೆಲ್ಲ ಹೊರಬೀಳಲವಕಾಶವಾಗುತ್ತಿತ್ತು' ಎಂದು ನುಡಿದಿರುವಳು. ಮಕ್ಕಳಲ್ಲಿ ಹುದುಗಿದ್ದ ಮಹತ್ವವನ್ನು ಡಾರ್ವಿನ್ ಒಪ್ಪಿಕೊಂಡು ಅವರನ್ನು ಅಪ್ಪಿ ಮುದ್ದಾಡುತ್ತಿದ್ದನು. ಅಷ್ಟು ಮುದ್ದಿಸಿದರೂ ಮಕ್ಕಳು ಕೆಡಲಿಲ್ಲ. ಏಕೆಂದರೆ ಅವನ ನಡೆನುಡಿಗಳಲ್ಲಿ ಅವರಿಗೆ ಲವಲೇಶವೂ ಸಂಶಯವಿರಲಿಲ್ಲ. ಮೇಲಾಗಿ ಡಾರ್ವಿನ್ನನ ನಿರ್ವಂಚನೆಯ ಸ್ವಭಾವವನ್ನು ಅವರು ಚೆನ್ನಾಗಿ ತಿಳಿದಿದ್ದರು.

ಮಕ್ಕಳಲ್ಲಿ ಆಸಕ್ತಿ

ಡಾರ್ವಿನ್ನನಿಗೆ ಒಂಬತ್ತು ಜನ ಮಕ್ಕಳು. ಅವರಲ್ಲಿಬ್ಬರು ಬಾಲ್ಯಾವಸ್ಥೆಯನ್ನು ದಾಟಲೇ ಇಲ್ಲ. ಉಳಿದವರಲ್ಲಿ ಐವರು ಗಂಡು ಮಕ್ಕಳು. ಅವರೆಲ್ಲರೂ ಅವನ ಕಣ್ಣೆದುರಿನಲ್ಲೇ ಖ್ಯಾತಿಪಡೆದು ಸಾರ್ವಜನಿಕ ಕ್ಷೇತ್ರದ ದೊಡ್ಡ ದೊಡ್ಡ ಪದವಿಗಳನ್ನಲಂಕರಿಸಿದ್ದರು. ಹಿರಿಯ ಮಗನಾದ ವಿಲಿಯಂ ಇರಾಸ್ಮಸ್ ಸೌತ್ಹ್ಯಾಂಟನ್ನಿನಲ್ಲಿ ವಾಣಿಜ್ಯವ್ಯವಹಾರಗಳನ್ನು ನಡೆಸುತ್ತಾ ಧನಿಕನಾಗಿ ಬಾಳುತ್ತಿದ್ದನು. ಎರಡನೆಯವನಾದ ಜಾರ್ಜನು ಸೌರವ್ಯೂಹದ ವಿಕಸನದ ಮೇಲೆ ಪ್ರೌಢತತ್ವವನ್ನು ನಿರೂಪಿಸಿ ನಕ್ಷತ್ರಶಾಸ್ತ್ರವಿಶಾರದನಾದನು. ಮೂರನೆಯವನಾದ ಫ್ರಾನ್ಸಿಸ್ಸನು ಸಸ್ಯಶಾಸ್ತ್ರಪಂಡಿತನಾಗಿ ರಾಯಲ್ ಸೊಸೈಟಿಯ ಪ್ರಮುಖ ವ್ಯಕ್ತಿಗಳಲ್ಲೊಬ್ಬನಾದನು. ನಾಲ್ಕನೆಯವನಾದ ಲಿಯೊನಾರ್ಡನು ರಾಯಲ್ ಇಂಜನಿಯರಿಂಗ್ ಶಾಖೆಯಲ್ಲಿ ದೊಡ್ಡ ಹುದ್ದೆಯಲ್ಲಿದ್ದುದಲ್ಲದೆ, ನಕ್ಷತ್ರಶಾಸ್ತ್ರ ಸಂಶೋಧನೆಗಳನ್ನೂ ನಡೆಸಿದನು. ಐದನೆಯವನಾದ ಹೊರೇಸನು ಯಂತ್ರವಿಜ್ಞಾನ ಚತುರನಾಗಿ ಬಾಳಿ, ಕೇಂಬ್ರಿಡ್ಜಿನ ವಿಜ್ಞಾನೋಪಕರಣಗಳನ್ನು ನಿರ್ಮಿಸುವ ಕಾರ್ಖಾನೆಯನ್ನು ವೃದ್ಧಿಪಡಿಸಿದನು.

ಕಾಲಕಳೆದಂತೆ ಡಾರ್ವಿನ್ನನ ಕುಟುಂಬ ದೊಡ್ಡದಾಯಿತು. ಹಾಗೆಯೇ ಅವನ ಸಂಶೋಧನೆಯ ಕ್ಷೇತ್ರವೂ ವಿಸ್ತರಿಸುತ್ತಿತ್ತು. ಗ್ರಂಥವನ್ನು ಪುನಃ ಮುದ್ರಣಕ್ಕೆ ಸಿದ್ಧಗೊಳಿಸುವ ಭಾರವೂ ಆಗಾಗ ಅವನ ಮೇಲೆಯೇ ಬೀಳುತ್ತಿತ್ತು; ನಡುನಡುವೆ ಹೊಸ ಹೊಸ ಗ್ರಂಥಗಳನ್ನೂ ರೂಪುಗೊಳಿಸುತ್ತಿದ್ದನು. ಹಾಗಿದ್ದರೂ ತಾನಿದ್ದ ಹಳ್ಳಿಯ ಅಭಿವೃದ್ಧಿಗಾಗಿ ಮನಸ್ಸು ಕೊಡದಿರುತ್ತಿರಲಿಲ್ಲ.

**ಗ್ರಾಮಜೀವನದಲ್ಲಿ ಆಸಕ್ತಿ**

ಅಲ್ಲಿನ ಸಾರ್ವಜನಿಕ ಕಾರ್ಯಗಳಲ್ಲಿ ಅತ್ಯಾಸಕ್ತಿಯಿಂದ ಭಾಗವಹಿಸುತ್ತಿದ್ದನು. ಹಳ್ಳಿಯ ತನ್ನ ಸೋದರರ ಕಷ್ಟಸುಖಗಳನ್ನು ವಿಚಾರಿಸಿಕೊಂಡು ಕೈಲಾದ ಸಹಾಯವನ್ನು ಮಾಡುತ್ತಿದ್ದನು. ಅವರೆಲ್ಲ ಡಾರ್ವಿನ್ನನನ್ನು ಭಕ್ತಿಗೌರವಗಳಿಂದ ನೋಡುತ್ತಿದ್ದುದಲ್ಲದೆ ಆವಶ್ಯಕವಾದಾಗ ಅವನ ಸಲಹೆಸಹಕಾರಗಳನ್ನು ಪಡೆದು ಅದರಂತೆ ನಡೆದುಕೊಳ್ಳುತ್ತಿದ್ದರು. ಅವನ ಮಾತುಗಳಲ್ಲಿ ಅವರಿಗೆ ನಂಬಿಕೆಯೂ ಒಪ್ಪಿಗೆಯೂ ಏಕಕಾಲದಲ್ಲಿ ಅಂಕುರಿಸುತ್ತಿದ್ದುವು. ಅಲ್ಲಿ ಡಾರ್ವಿನ್ ಸುಮಾರು ನಲವತ್ತು ವರ್ಷಕಾಲವಿದ್ದರೂ ಅವನೊಡನೆ ಯಾರೂ

ಒಂದು ಬಿರುಸಿನ ನುಡಿಯನ್ನೂ ಆಡಲಿಲ್ಲವೆಂದು ತಿಳಿದವರು ಹೇಳುತ್ತಿದ್ದರು. ಊರಿನ ಮಕ್ಕಳಿಗಂತೂ ಅವನನ್ನು ಕಂಡರೆ ಏನೋ ಒಂದು ಆನಂದ. ಪೂಜ್ಯ ವಿಜ್ಞಾನಿ ಮನೆಯಿಂದ ಹೊರಟನೆಂದರೆ ಊರಿನ ಮಕ್ಕಳು ಸುತ್ತಲೂ ಸುತ್ತಿ ಬಿಡುತ್ತಿದ್ದರಂತೆ.

**ದಯಾಮಯ ಜೀವನ**

ಡಾರ್ವಿನ್ನನದು ದಯಾಮಯ ಜೀವನ. ಮನೆಯ ಆಳುಗಳನ್ನು ಕೂಡ ನೋಯಿಸಿದವನಲ್ಲ. ಅವರೂ ನಮ್ಮವರೆಂಬ ಭಾವನೆಯಿಂದ ಪ್ರೀತಿಯಿಂದ ಕಾಣುತಿದ್ದನು. ಆದುದರಿಂದ ಅವನ ಮನೆಯಲ್ಲೊಮ್ಮೆ ಕೆಲಸಕ್ಕೆ ಸೇರಿದವರು ಬಿಟ್ಟು ಹೋಗುವ ಯೋಚನೆಯನ್ನೇ ಮಾಡುತ್ತಿರಲಿಲ್ಲ ವಂತೆ. ಮಾರ್ಗರೆಟ್ ಈವಾನ್ಸ್ ಎಂಬ ಸೇವಕಿ ಅವನ ಮನೆಯಲ್ಲಿ ಸುಮಾರು ನಲವತ್ತು ವರ್ಷಗಳ ತನಕ ಕೆಲಸ ಮಾಡಿಕೊಂಡಿದ್ದಳು. ಮಾನವರನ್ನು ಹೇಗೆ ದಯೆಯಿಂದ ನೋಡಿಕೊಳ್ಳುತ್ತಿದ್ದನೋ ಹಾಗೆಯೇ ಸಾಕು ಪ್ರಾಣಿಗಳನ್ನೂ ಆಸಕ್ತಿಯಿಂದ ಕಾಣುತ್ತಿದ್ದನು. ಡಾರ್ವಿನ್ನನನ್ನು ಕಂಡೊಡನೆ ಅವು ನಲಿಯಲು ಪ್ರಾರಂಭಿಸುತ್ತಿದ್ದುವಂತೆ. ಅವನ ಮೆಚ್ಚಿನ ಕಪ್ಪುಕುದುರೆಯೊಂದು ಬಹುಕಾಲದವರೆಗೂ ಬದುಕಿತ್ತು. ಆ ದೀನಜೀವಿ ಅವನ ಕಣ್ಣೆದುರಿನಲ್ಲೇ ಸತ್ತುಹೋದಾಗ ಅವನು ಬಹುವಾಗಿ ಮರುಗಿದನು. ಅದು ತನ್ನ ಜೀವನದಲ್ಲಿ ಸಲ್ಲಿಸಿದ್ದ ಸೇವೆಯನ್ನು ಸ್ಮರಿಸುವ ಉದ್ದೇಶದಿಂದ ಮರಳಿ ತನ್ನ ಜೀವಿತಕಾಲದಲ್ಲಿ ಇನ್ನಾವ ಕುದುರೆಯನ್ನೂ ಹತ್ತಲಿಲ್ಲ.

**ಡಾರ್ವಿನ್ನನೂ ಪ್ರಾಣಿಗಳೂ**

ಸಾಕು ಪ್ರಾಣಿಗಳು ಡಾರ್ವಿನ್ನನೊಡನೆ ಅನುಪಮ ಸ್ನೇಹವನ್ನು ತೋರಿಸುತ್ತಿದ್ದುವು. ನಾಯಿಗಳನ್ನು ಸಾಕುವುದರಲ್ಲಿ ಅವನಿಗೆ ತುಂಬ ಆಸೆ. ಅವು ಅವನಲ್ಲಿ ಭಕ್ತಿಯಿಂದಿದ್ದು ಒಗ್ಗಿಕೊಳ್ಳುತ್ತಿದ್ದುವು. ಹೀಗೆಯೇ ಇತರ ಪ್ರಾಣಿಗಳೂ ಅವನಲ್ಲಿ ಸರಳತನದಿಂದ ಪಳಗಿಕೊಂಡಿದ್ದುವು. ಒಮ್ಮೆ ಅಳಿಲು ಹಿಂಡೊಂದು ಆಟವಾಡುತ್ತಿರುವುದನ್ನು ಡಾರ್ವಿನ್ ನೋಡುತ್ತ ಕುಳಿತಿದ್ದನಂತೆ. ಆಗ ಮರಿ ಅಳಿಲೊಂದು ಅವನ ಕಾಲ ಮೇಲೆ ಹತ್ತಿ ಬೆನ್ನ ಮೇಲೆ ನೆಗೆದು ಕುಣಿಯಲಾರಂಭಿಸಿತು. ಅದನ್ನು ಕಂಡು ಹಿಂಡಿನಲ್ಲಿದ್ದ ತಾಯಿ ಭೀತಿಯಿಂದ ಚೀರಲಾರಂಭಿಸಿತು! ಪಕ್ಷಿಗಳನ್ನು ಕಂಡರೂ ಡಾರ್ವಿನ್ನನಿಗೆ ತುಂಬ ಆಸಕ್ತಿ. ವಿವಿಧ

ಜಾತಿಯ ಪಕ್ಷಿಗಳನ್ನು ಗುರುತಿಸುವುದರಲ್ಲಿ ಅವನಿಗೆ ಹೆಚ್ಚು ಅನುಭವವಿತ್ತು. ನೋಡಿದೊಡನೆ ಅದು ಯಾವ ಹಕ್ಕಿಯೆಂದು ಹೇಳಿಬಿಡುತ್ತಿದ್ದನು. ಬಾಲ್ಯದಲ್ಲಿ ಕಲ್ಲು ಹೊಡೆದು ಅನೇಕ ಹಕ್ಕಿಗಳನ್ನು ಕೊಂದುಬಿಡುತ್ತಿದ್ದನಂತೆ. ಅವನು ದೊಡ್ಡವನಾದ ಮೇಲೆ ಅದನ್ನ ನೆನೆದುಕೊಂಡು ಪಶ್ಚಾತ್ತಾಪಪಡುತ್ತಿದ್ದನು.

ಹಣಕಾಸಿನ ವಿಚಾರದಲ್ಲಿ ಡಾರ್ವಿನ್ ಎಚ್ಚರದಿಂದಿರುತ್ತಿದ್ದರೂ ಉದಾರಿಯಾಗಿ ಖರ್ಚು ಮಾಡುತ್ತಿದ್ದನು. ಅನೇಕ ಸಂಘಗಳಿಗೆ ಉದಾರವಾಗಿ ದಾನ ಮಾಡುತ್ತಿದ್ದನು. ತಾನು ರಾಯಲ್ ಅಕ್ಯಾಡೆಮಿಯವರಿಂದ ಪ್ರೈಸ್ ಸ್ವರ್ಣಪದಕವನ್ನು ಪಡೆದ ಮೇಲೆ ನೇಪಲ್ಸಿನಲ್ಲಿ ಒಂದು ಪ್ರಾಣಿ ಸಂಗ್ರಹಾಲಯವನ್ನೇರ್ಪಡಿಸಲು ನೂರು ಪೌಂಡುಗಳನ್ನ ದಾನ ಮಾಡಿದನು. ಪರಭಾಷೆಯಲ್ಲಿದ್ದ ವಿಜ್ಞಾನ ಗ್ರಂಥಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿ ಪ್ರಕಟಿಸಲೋಸುಗ ಬೇಕಾದಷ್ಟು ಹಣ ಸಹಾಯ ಮಾಡಿದನು. ಪ್ರಸಿದ್ಧ ವಿಜ್ಞಾನಿಯಾದ ಫಿಟ್ಸ್ ಮುಲ್ಲರ್ ಎಂಬುವನು ಬ್ರೆಸಿಲ್ಲಿನಲ್ಲೊಮ್ಮೆ ಪ್ರವಾಹದ ಹಾವಳಿಯಿಂದ ತನ್ನ ಅನೇಕ ಸಾಮಗ್ರಿಗಳನ್ನು ಕಳೆದುಕೊಂಡಿದ್ದನು. ಆಗ ಡಾರ್ವಿನ್ ಅವನಿಗೆ ನಷ್ಟವಾಗಿರುವ ಗ್ರಂಥಗಳನ್ನೂ ಸಂಶೋಧನೆಗೆ ಆವಶ್ಯಕವಾದ ಉಪಕರಣಗಳನ್ನೂ ಕೊಂಡುಕೊಡುವುದಾಗಿ ತಿಳಿಸಿದನು. ತನ್ನ ಗ್ರಂಥರಾಶಿಯಿಂದ ದೊರೆತ ಹಣವನ್ನು ವರ್ಷದ ಕೊನೆಯಲ್ಲಿ ತನ್ನ ಮಕ್ಕಳಿಗೆ ಸಂತೋಷದಿಂದ ಹಂಚಿಬಿಡುತ್ತಿದ್ದನು. ಹಣವನ್ನು ಕೂಡಿಟ್ಟು ಧನಿಕನಾಗಬೇಕೆಂಬ ಆಸೆ ಅವನಿಗಿರಲಿಲ್ಲ. ಒಮ್ಮೆ ಡಾರ್ವಿನ್ನನ ಗೆಳೆಯನೊಬ್ಬನು ಅವನ ಹೆಸರಿನಲ್ಲಿ ಅಪಾರ ಹಣವನ್ನು ಬಿಟ್ಟಿದ್ದನು. ಡಾರ್ವಿನ್ ತನ್ನ ಇಷ್ಟಬಂದಂತೆ ಅದನ್ನು ಉಪಯೋಗಿಸಬಹುದಾಗಿತ್ತು; ಆದರೆ ಅವನು ತನ್ನ ಗೆಳೆಯನನ್ನು ಕುರಿತು 'ಮತ್ತೊಬ್ಬ ಬಡ ವಿಜ್ಞಾನ ಸಂಶೋಧಕನಿಗೆ ಅದನ್ನು ಕೊಡುವುದುತ್ತಮ' ಎಂದು ತಿಳಿಸಿದನಂತೆ.

ಔದಾರ್ಯ

ಯಾರನ್ನಾಗಲಿ ಕಠಿಣವಾಗಿ ನುಡಿದು ನೋಯಿಸುವುದು ಡಾರ್ವಿನ್ನನ ಸ್ವಭಾವದಲ್ಲೇ ಇರಲಿಲ್ಲ. ಯಾರಾದರೂ ಪ್ರಾಣಿಗಳನ್ನೇ ಆಗಲಿ ಹಾಗೆ ನೋಯಿಸುತ್ತಿದ್ದರೂ ಅವನು ಸಹಿಸುತ್ತಿರಲಿಲ್ಲ. ತಾನೇನಾದರೂ ತಪ್ಪಿ ಯಾರಿಗಾದರೂ ಕಠಿಣ ನುಡಿಗಳನ್ನು ಉಪಯೋಗಿಸಿದ್ದ ಪಕ್ಷದಲ್ಲಿ ಮರುಕ್ಷಣವೇ ಹಾಗೆ ಮಾಡಿದ್ದಕ್ಕೆ ಪಶ್ಚಾತ್ತಾಪಪಟ್ಟುಕೊಂಡ ಹೊರತು ಶಾಂತನಾಗುತ್ತಿರಲಿಲ್ಲ.

ಇದಕ್ಕೆ ಸಂಬಂಧಿಸಿದ ಕತೆಯೊಂದನ್ನು ಅವನ ಮಗ ಈಚೆಗೆ ಬೆಳಕಿಗೆ ತಂದಿರುವನು; ಜಮೈಕಾ ದ್ವೀಪದಲ್ಲಿ ಗೌರ್ನರಾಗಿದ್ದ ವ್ಯಾಪು ಹೃದಯಿ ಐರನು ಅಲ್ಲಿದ್ದಿದ್ದ ನೀಗ್ರೋ ದಂಗೆಯನ್ನು ಅಡಗಿಸಲು ಇಲ್ಲದ ಸಲ್ಲದ ಕಿರುಕುಳಗಳನ್ನು ಅಲ್ಲಿನವರಿಗೆ ಕೊಟ್ಟಿದ್ದ ನಂತೆ. ಅವನು ಅಲ್ಲಿ ತೋರಿದ್ದ ಕ್ರೌರ್ಯಕ್ಕಾಗಿ ಲಂಡನ್ನಿನಲ್ಲಿ ಅವನಿಗೆ ಮರಣ ದಂಡನೆಯನ್ನು ವಿಧಿಸಿದ್ದರು. ನಾಡಿನ ಹಲವರು ಈ ಶಿಕ್ಷೆಯನ್ನು ಅನುಮೋದಿ ಸಿದ್ದರು. ಮಿಕ್ಕವರು ವಿರೋಧಿಸಿದ್ದರು. ಒಮ್ಮೆ ಡಾರ್ವಿನ್ ಅವನ ಅಣ್ಣ ನೊಡನೆ ಆ ವಿಚಾರವನ್ನು ಮಾತನಾಡುತ್ತಿರುವಾಗ ಅವನ ಮಗ ಬಂದು ಐರನಿಗಿತ್ತ ಶಿಕ್ಷೆ ಅತಿ ಕಠಿಣವೆಂದು ಹೇಳಿದನು. ಡಾರ್ವಿನ್ ನೀಗ್ರೋಗಳಿ ಗೊದಗಿದ ದೌರ್ಜನ್ಯಕ್ಕಾಗಿ ಮರುಗಿದ್ದುದರಿಂದ ಮಗನ ಮೇಲೆ ಅತಿ ಯಾಗಿ ರೇಗಿದನಂತೆ. ರಾತ್ರಿ ಮಲಗಿದನಂತರ ಅವನ ಮನಸ್ಸಿನಲ್ಲಿ ತನ್ನ ವರ್ತನೆ ಸುಳಿದು ನಿದ್ರೆಹತ್ತಲಿಲ್ಲ; ಆಗ ಎದ್ದು ತನ್ನ ಮಗನಿದ್ದ ಕೊಠಡಿಗೆ ಹೋಗಿ ತನ್ನ ಮನೋವ್ಯಾಕುಲತೆಯನ್ನು ತಿಳಿಸಿ ಕೆಲವು ಮೃದುನುಡಿಗಳಿಂದ ಅವನನ್ನು ಸಂತೈಸಿ ಹಿಂದಿರುಗಿದನಂತೆ

೧೮೮೧ರಲ್ಲಿ ಡಾರ್ವಿನ್ 'ಎರೆಹುಳುಗಳು ಮಣ್ಣನ್ನು ಸಜ್ಜುಗೊಳಿಸುವ ಕಾರ್ಯ' ಎಂಬ ಗ್ರಂಥವನ್ನು ಪ್ರಕಟಿಸಿದನು. ಇದೇ ಅವನು ಪ್ರಕಟಿಸಿದ ಕೊನೆಯ ಗ್ರಂಥ. ಎರೆಹುಳುಗಳು ಭೂಮಿಯಲ್ಲಿ ಅಗಣಿತವಾಗಿವೆ. ಅಹೋ ರಾತ್ರಿಯೂ ಮಣ್ಣನ್ನು ಕೊರೆದು ನುಂಗಿಕೊಂಡು ಅದರಲ್ಲಿರುವ ಸಣ್ಣಸಣ್ಣ ಕ್ರಿಮಿಗಳನ್ನು ಜೀರ್ಣಿಸಿಕೊಳ್ಳುವುವು. ಜೀರ್ಣರಸದೊಡನೆ ಬೆರೆತ ಆ ಮಣ್ಣನ್ನು ಹುಳುಗಳು ಮಲದ್ವಾರದ ಮೂಲಕ ಹೊರಗೆ ಹಾಕುವುವು. ಹಾಗೆ ಹೊರಬೀಳುವ ಮಣ್ಣು ಉತ್ತಮವಾದ ಗೊಬ್ಬರ. ಎರೆ ಹುಳುಗಳ ಗುಂಪು ನಿರಂತರವೂ ಆ ಕಾರ್ಯವನ್ನು ಮಾಡುತ್ತಿರುವುದರಿಂದ ಕೆಳಮಣ್ಣು ಮೇಲ್ಮಣ್ಣಾಗುವುದು; ಭೂಮಿ ಹೆಚ್ಚು ಫಲವತ್ತಾಗುವುದು; ಭೂಮಿಯಲ್ಲಿ ರಂಧ್ರಗಳಾಗಿ ಗಾಳಿ ನೀರುಗಳ ಸಂಚಾರಕ್ಕೆ ಅವಕಾಶವಾಗುವುದು; ಸಸ್ಯಗಳ ಬೇರುಗಳು ಸರಾಗವಾಗಿ ಇಳಿಯಲು ಅನುಕೂಲವಾಗುವುದು. ಒಂದು ಎಕರೆ ಭೂಮಿಯಲ್ಲಿರುವ ಎರೆಹುಳುಗಳು ಪ್ರತಿವರ್ಷವೂ ಸುಮಾರು ಹತ್ತು ಟನ್ ಗಳಷ್ಟು ಮಣ್ಣನ್ನು ಮೇಲಕ್ಕೆ ತಂದು ಹಾಕುವುವೆಂದು ಡಾರ್ವಿನ್ ನಿರ್ಧರಿಸಿ,

ಮೊಟ್ಟಮೊದಲು ಎರೆಹುಳುಗಳ ಕಾರ್ಯಮಹೋನ್ನತಿಯನ್ನು ವಿಜ್ಞಾನ ರಂಗಕ್ಕೆ ತೋರಿಸಿ ಕೊಟ್ಟನು. ಭೂಮಿಯ ಮೇಲಿರುವ ಮಣ್ಣಿನಲ್ಲಿ ಹೆಚ್ಚು ಭಾಗ ಈ ಹುಳುಗಳ ಹೊಟ್ಟೆಯಲ್ಲಿ ಹಾದು ಒಂದಿರುವುದನ್ನು ಯೋಚಿಸಿ ಕೊಂಡರೆ ಆಶ್ಚರ್ಯವಾಗುತ್ತದೆ. ಎಂದರೆ ಎರೆಹುಳುಗಳು ಶತಮಾನಗಳಿಂದಲೂ ಪ್ರಕೃತಿದೇವಿ ಸಿದ್ಧಪಡಿಸಿದ ನೇಗಿಲಿನೋಪಾದಿಯಲ್ಲಿ ಭೂಮಿಯನ್ನು ಉತ್ತು ಸಜ್ಜುಗೊಳಿಸುತ್ತಾ ಬಂದಿವೆ. ಈ ಕಾರ್ಯ ಮುಂದೆಯೂ ನಡೆಯುವುದಾಗಿದೆ. ಅನಂತ ಕಾಲದಿಂದಲೂ ಈ ದೀನ ವರ್ಗದ ಪ್ರಾಣಿಗಳು ಸಲ್ಲಿಸುತ್ತಿರುವ ಹಿರಿಯ ಸೇವೆಯನ್ನು ಡಾರ್ವಿನ್ ಕೊಂಡಾಡಿ ಈ ದಿನದ ಮಣ್ಣಿನ ನಿರ್ಮಾಣಕಾರ್ಯದಲ್ಲಿ ಅವು ವಹಿಸಿರುವ ಪಾತ್ರಕ್ಕಾಗಿ ಮಾನವನು ಋಣಿಯಾಗಿರುವನೆಂದು ಹೇಳಿರುವನು. ಸಸ್ಯಗಳ ಒಣ ಎಲೆಗಳನ್ನು ತಿಂದು ಜೀವಿಸುವ ಈ ಪ್ರಾಣಿಗಳು ಸಸ್ಯಗಳಿಗೆ ತಾವೆಂಥ ಸೇವೆಯನ್ನು ಸಲ್ಲಿಸುತ್ತಿವೆಯೆಂಬುದನ್ನು ವಿವರಿಸಿ, ಅವು ರೈತನಿಗೆ ಎಷ್ಟೊಂದು ನೆರವಾಗುವುವೆಂಬುದನ್ನು ತೋರಿಸಿಕೊಟ್ಟನು.

**ಕೊನೆಯ ಗ್ರಂಥ**

ಡಾರ್ವಿನ್ನನ ಅನೇಕ ಗ್ರಂಥಗಳನ್ನು ಲಂಡನ್ನಿನ 'ಮರ್ರೆ ಪ್ರಕಟನಾಲಯ' ದವರು ಪ್ರಕಟಿಸಿದ್ದರಷ್ಟೆ. ಈ ಕೊನೆಯ ಗ್ರಂಥವನ್ನೂ ಅವರೇ ಪ್ರಕಟಿಸಿದರು. ಎರೆಹುಳುಗಳ ಮೇಲಿನ ಈ ಗ್ರಂಥ ಬಹು ದಿನಗಳ ಹಿಂದಿನಿಂದಲೂ ಸಿದ್ಧವಾಗುತ್ತಿದ್ದರೂ ಅದು ಪ್ರಕಟವಾದುದು ಅವನ ಕೊನೆಯ ದಿನಗಳಲ್ಲಿ ಮಾತ್ರ. ಈ ಗ್ರಂಥಪ್ರಕಟನೆ ಮುಗಿದೊಡನೆ 'ಇದುವರೆಗೂ ನನ್ನ ಗ್ರಂಥಗಳನ್ನು ವಿಮರ್ಶಿಸಿ ಟೀಕಿಸುತ್ತಿದ್ದವರಿಗೆ ಇನ್ನು ಮುಂದೆ ನಾನು ಅಂಥ ಕಷ್ಟವನ್ನು ಕೊಡುವುದಿಲ್ಲ' ಎಂದುಕೊಂಡು ನಿಟ್ಟುಸಿರು ಬಿಟ್ಟನಂತೆ. ತನ್ನ ಬಾಳಿನ ಕೊನೆಯ ದಿನ ಸನ್ನಿಹಿತವಾಗುತ್ತಿದ್ದುದನ್ನು ಮಹಾನುಭಾವಿ ಡಾರ್ವಿನ್ ಮುಂಚಿತವಾಗಿಯೇ ಅರಿತುಕೊಂಡಿರಬೇಕು; ತನ್ನ ದೇಹದಲ್ಲಿ ನಿಶ್ಯಕ್ತಿ ಹೆಚ್ಚುತ್ತಿದ್ದುದನ್ನು ಗ್ರಹಿಸಿಕೊಂಡಿರಬೇಕು. ಆದರೂ ಇನ್ನೂ ಹಲವು ತಿಂಗಳುಗಳ ತನಕ ವಿಜ್ಞಾನ ಸಂಶೋಧನೆಗಳನ್ನು ಮುಂದುವರಿಸುತ್ತಲೇ ಇದ್ದನು.

ಡಾರ್ವಿನ್ನನ ಕೊನೆಯ ಗ್ರಂಥ ಪ್ರಕಟವಾದ ಮೇಲೆ ಅದೇ ವರ್ಷ ಅವನ ಅಣ್ಣನಾದ ಇರಾಸ್ಮಸ್ಸನು ತನ್ನ ಎಪ್ಪತ್ತೇಳನೆಯ ವಯಸ್ಸಿನಲ್ಲಿ

ಕಾಲವಾದನು. ಡಾರ್ವಿನ್ನನ ನೆರೆತ ಜೀವನದಲ್ಲಿ ಎಳೆಯತನದ ಮಾಧುರ್ಯವನ್ನು ಇನ್ನೂ ನೆನಪಿಗೆ ತರುತ್ತಿದ್ದ ಈ ಬಾಂಧವ್ಯ ಹರಿದು ಹೋದಾಗ ಅವನ ಮೃದು ಹೃದಯ ಘಾತಿಸಿದಂತಾಗಿರಬೇಕು.

**ಅಣ್ಣನ ಮರಣ**

೧೮೮೨ ನೆಯ ವರ್ಷದ ಮಾರ್ಚಿ ತಿಂಗಳವರೆಗೂ ಡಾರ್ವಿನ್ ಸುಮಾರು ಗೆಲುವಾಗಿದ್ದನು. ಅನಂತರ ಅವನ ಆರೋಗ್ಯ ಏಕಪ್ರಕಾರ ಕುಂದುತ್ತಾ ಬಂದಿತು. ಹೃದಯಕೋಶ ದುರ್ಬಲವಾಗಲು ರಕ್ತಚಲನೆ ಮಂದವಾಗುತ್ತಿತ್ತು. ಶರೀರ ಕ್ರಮಕ್ರಮವಾಗಿ ನಶಿಸುತ್ತಾ ಬಂದು ಮಹಡಿಯ ಮೆಟ್ಟಲುಗಳನ್ನು ಹತ್ತಿ ಇಳಿಯುವುದೂ ಕಷ್ಟವಾಯಿತು. ಆದರೂ ತನ್ನ ಸಂಶೋಧನಾಲಯವನ್ನು ಮಾತ್ರ ತ್ಯಜಿಸಿದವನಲ್ಲ; ಹಾಸಿಗೆ ಹಿಡಿದು ಮಲಗಿದವನೂ ಅಲ್ಲ. ಏಪ್ರಿಲ್ ೧೮ ನೆಯ ಮಂಗಳವಾರ ತಾನು ಹೊರಗಿನಿಂದ ತಂದಿದ್ದ ಯಾವುದೋ ಸಸ್ಯವೊಂದನ್ನು ಊಟವಾದ ಮೇಲೆ ಪರಿಶೀಲಿಸುತ್ತಾ ಇದ್ದು ಅದಕ್ಕೆ ಸಂಬಂಧಿಸಿದ ಗ್ರಂಥವೊಂದನ್ನು ಓದಿ ಮಲಗಿಕೊಂಡನು. ಅಂದಿನವರೆಗೂ ಅವನ ದೇಹಸ್ಥಿತಿ ಉತ್ಕಟಾವಸ್ಥೆಗೇನೂ ಹೋಗಿರಲಿಲ್ಲವೆಂದು ಅವನ ಹತ್ತಿರವಿದ್ದವರು ಹೇಳುವರು. ಮಾರನೆಯ ದಿನ ಹೃದಯದೌರ್ಬಲ್ಯ ಹೆಚ್ಚುತ್ತಾ ಬಂದಿತು. ತನ್ನ ಇಡೀ ಜೀವನವನ್ನೇ ವಿಜ್ಞಾನಸೇವೆಗಾಗಿ ಮೊಸಲಾಗಿಟ್ಟು ಕೊನೆಯ ದಿನವನ್ನೂ ಆ ಮಹಾಪೂಜೆಯಲ್ಲೇ ಕಳೆದು, ಡಾರ್ವಿನ್ ೧೮೮೨ನೆಯ ಏಪ್ರಿಲ್ ಹತ್ತೊಂಬತ್ತನೆಯ ಬುಧವಾರ ತನ್ನ ಎಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ಇಹಲೋಕದಿಂದ ಕಣ್ಮರೆಯಾದನು.

**ಡಾರ್ವಿನ್ನನ ಮರಣ**

ಜೀವಜಾತಿಗಳ ಹುಟ್ಟು ಗ್ರಂಥ ಪ್ರಕಟವಾದಾಗಿನಿಂದ ಒಂದೇ ಸಮನೆ ಬೆಳೆಯಲಾರಂಭಿಸಿದ್ದ ಡಾರ್ವಿನ್ನನ ಕೀರ್ತಿ ಅವನ ಕಾಲಾನಂತರ ಮಹಿಮಾರೂಪವನ್ನು ತಾಳಿತು. ದೇಶಾದ್ಯಂತವೂ ಪೂಜ್ಯನಿಸರ್ಗವಿಜ್ಞಾನಿಯ ನಿಧನಕ್ಕಾಗಿ ಮರುಗಿತು; ಅವನ ಸೇವೆಯನ್ನು ಸ್ಮರಿಸಿಕೊಂಡು ಅವನ ಕಾರ್ಯಮಹೋನ್ನತಿಯನ್ನು ಕೊಂಡಾಡಲಾರಂಭಿಸಿತು. ತಮ್ಮ ಕಾಲದಲ್ಲಿ ಹುಟ್ಟಿ, ಬಾಳಿ, ತಮ್ಮ ಕಣ್ಣೆದುರಿಗೆ ಮಹಾಪುರುಷನಾದ ಅವನ ಸೌಮ್ಯಮೂರ್ತಿಗೊಪ್ಪುವಂಥ

**ಸಾರ್ವಜನಿಕ ಸಂತಾಪ**

ಅಂತ್ಯ ಸಂಸ್ಕಾರವಾಗಬೇಕೆಂದು ದೇಶಕ್ಕೆ ದೇಶವೇ ಬಯಸಿತು. ಇಂಗ್ಲೆಂಡಿನ ಯಶೋದುಂದುಭಿಯನ್ನು ಸರ್ವತೋಮುಖವಾಗಿ ಮೊಳಗಿಸಿದ ಮಹಿಮರನೇಕರು ಮಲಗಿ ನಿದ್ರಿಸುತ್ತಿರುವ ವೆಸ್ಟ್‌ಮಿನಿಸ್ಟರ್ ಶ್ಮಶಾನಕ್ಷೇತ್ರದಲ್ಲಿ ಶವದ ಅಂತ್ಯಸಂಸ್ಕಾರವಾಗಬೇಕೆಂದು ತೀರ್ಮಾನವಾಯಿತು. ಭೌತಶಾಸ್ತ್ರ ವಿಶಾರದನಾಗಿ ಬಾಳಿ, ಆ ಶಾಸ್ತ್ರದ ಬೆಳವಣಿಗೆಗೆ ಅಡಿಗಲ್ಲು ಹಾಕಿಕೊಟ್ಟ ನ್ಯೂಟನ್ ಮಲಗಿ ನಿದ್ರಿಸುತ್ತಿರುವುದೂ ಅಲ್ಲೇ. ಆ ಸ್ಥಳಕ್ಕೆ ಹನ್ನೆರಡು ಅಡಿಗಳ ದೂರದಲ್ಲಿ ಡಾರ್ವಿನ್ನನ ಶ್ಮಶಾನವೇರ್ಪಡಬೇಕೆಂದು ನಿಶ್ಚಯವಾಯಿತು.

೧೮೮೨ನೆಯ ವರ್ಷದ ಏಪ್ರಿಲ್ ೨೬ನೆಯ ದಿನ. ಅಂದು ಶವಸಂಸ್ಕಾರ ವೆಸ್ಟ್‌ಮಿನಿಸ್ಟರ್ ಶ್ಮಶಾನ ಕ್ಷೇತ್ರದಲ್ಲಿ ನಡೆಯಲಿತ್ತು. ರಾಜಕಾರಣಪಟುಗಳು, ದಾರ್ಶನಿಕರು, ಸಾಹಿತಿಗಳು, ಕಲಾವಿದರು ಅಗಣಿತ ಸಂಖ್ಯೆಯಲ್ಲಿ ನೆರೆದು ಕಾದಿದ್ದರು. ಡಾರ್ವಿನ್ನನ ಶವಸಂಸ್ಕಾರಕಾರ್ಯದಲ್ಲಿ

ಅಂತ್ಯಕ್ರಿಯೆ

ಭಾಗವಹಿಸಿ ಭಕ್ತಿಗೌರವಪೂರಿತ ಸಂತಾಪವನ್ನು ಸೂಚಿಸಲು ದೇಶದ ಎಲ್ಲ ವಿಜ್ಞಾನ ಸಂಸ್ಥೆಗಳೂ ತಮ್ಮ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟಿದ್ದವು. ಕೂಲಿಕಾರರಿಂದ ಹಿಡಿದು ನಾಡಿನ ಅಪ್ರತಿಮ ಪ್ರತಿಭಾಶಾಲಿಗಳವರೆಗೂ ನೆರೆದು ಕಿಕ್ಕಿರಿದು ತುಂಬಿದ್ದರು. ಡಾರ್ವಿನ್ನನ ಪರಮ ಮಿತ್ರರೂ ವಿಖ್ಯಾತ ವಿಜ್ಞಾನ ಪಂಡಿತರೂ ಆದ ಹಕ್ಸ್ಲೀ, ಹೂಕರ್, ವ್ಯಾಲೇಸ್, ಲಯಲ್ ಮೊದಲಾದವರು ಗತಿಸಿದ ಮಹಾನುಭಾವಿಯ ಶವದ ಪೆಟ್ಟಿಗೆಯನ್ನು ಸೇವಾಸ್ಮರಣೆಯ ಗೌರವಪೂರಿತ ಮೌನದಿಂದ ಹೊತ್ತು ಗೊತ್ತಾದ ಸ್ಥಳಕ್ಕೆ ತಂದರು. ಕಾರ್ಲೈಲಿನ ಪಾದ್ರಿಗಳು ಅಂತ್ಯಕ್ರಿಯೆಯನ್ನು ನೆರವೇರಿಸಿದರು. ಮುಂದಿನ ಭಾನುವಾರ ಅವರು ಡಾರ್ವಿನ್ನನ ಸ್ಮಾರಕಬೋಧನೆಯ ಸಮಾರಂಭದಲ್ಲಿ ನೆರೆದಿದ್ದ ಅಪಾರ ಜನರನ್ನುದ್ದೇಶಿಸಿ ಮಾತನಾಡುತ್ತಾ 'ಚಾರ್ಲ್ಸ್ ಡಾರ್ವಿನ್ ಮತ್ತಾರೂ ಮಾಡದಿದ್ದ ಮಹಾಕಾರ್ಯವೊಂದನ್ನು ಸಾಧಿಸಿರುವನು. ಮೌನವಾಗಿದ್ದುಕೊಂಡು, ಜ್ಞಾನಪ್ರಪಂಚದಲ್ಲಿ ಉತ್ಕ್ರಾಂತಿಯುಂಟುಮಾಡಿ ನಮ್ಮ ದೃಷ್ಟಿಕೋನವನ್ನೇ ಬದಲಾಯಿಸಿಬಿಟ್ಟ ಯುಗಪುರುಷನಾಗಿರುವನು. ಅವನ ಆ ಕಾರ್ಯ ಹಲವರಿಗೆ ವಿರೋಧವಾಗಿ ಪರಿಣಮಿಸಿದ್ದರೂ ಅದನ್ನು ಮಾಡಲು

ಅವನು ಪೂರ್ಣ ಸ್ವತಂತ್ರನು' ಎಂದು ನುಡಿದು ಅವನ ಮಹೋನ್ನತ ಸ್ಥಾನವನ್ನು ಮುಕ್ತಕಂಠದಿಂದ ಒಪ್ಪಿ 'ಡಾರ್ವಿನ' ತನ್ನ ಪ್ರತಿಭೆಯ ಮಹಾಪ್ರಭೆಯಲ್ಲಿ ನಿಸರ್ಗದ ಅಂತರಾಳವನ್ನು ಹೊಕ್ಕು, ಶಾಂತಿಸಹನೆಗಳಿಂದ ದುಡಿದು, ಸತ್ಯಾನ್ವೇಷಣೆಯ ಕಾರ್ಯದಲ್ಲಿ ಜಯವನ್ನು ಪಡೆದು ಕೃತಕೃತ್ಯನಾದನು' ಎಂದು ಕೊಂಡಾಡಿದರು.

'ವೆಸ್ಟ್‌ಮಿನಿಸ್ಟರ್ ಆಬೆ'ಯಲ್ಲಿ ಆಂಗ್ಲರಾಷ್ಟ್ರದ ವೀರಾಗ್ರಣಿಗಳನೇಕರ ಸ್ಮಾರಕಗಳಿವೆ. ವಿಖ್ಯಾತರಾದ ಕವೀಶ್ವರರು, ಕಾದಂಬರಿಕಾರರು, ವಾಗ್ಮಿಗಳು, ಸಚಿವಶ್ರೇಷ್ಠರು, ಪೀಠಾಧೀಶ್ವರರು, ಇತ್ಯಾದಿ ಮಹಾಪುರುಷರು ಅಲ್ಲಿ ಚಿರನಿದ್ರೆಯಲ್ಲಿ ಮಲಗಿರುವರು. ಒಂದು ದೃಷ್ಟಿಯಲ್ಲಿ ನೋಡಿದರೆ ಅವರಲ್ಲಾರೂ ಮಾನವನ ಜ್ಞಾನವನ್ನು ಡಾರ್ವಿನ್ನನಷ್ಟು ಮಹತ್ತರ ಬದಲಾವಣೆಗೀಡು ಮಾಡಿರಲಿಲ್ಲವೆನ್ನಬಹುದು. ಮಾನವಕೋಟಿಗೆ ಅವನು ಮಾನಸ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟು ಅವರೆಲ್ಲರಿಗಿಂತಲೂ ಒಂದು ಕೈ ಮಿಗಿಲಾಗಿ ಜನತೆಯ ಕಲ್ಯಾಣವನ್ನು ಸಾಧಿಸಿದ್ದನು. ಆ ಕ್ಷೇತ್ರದಲ್ಲೇ ಮಲಗಿ ನಿದ್ರಿಸುತ್ತಿರುವ ಕವಿಪುಂಗವರ ಬಳಿ ಡಾರ್ವಿನ್ ತನ್ನ ಸ್ಥಾನವನ್ನು ಪಡೆದುದು ಅಸಮಂಜಸವೇನೂ ಅಲ್ಲ. ಕಾವ್ಯಕ್ಕೆಷ್ಟು ಪ್ರತಿಭೆ ಬೇಕೋ ವಿಜ್ಞಾನಸಂಶೋಧನೆಗೂ ಅಷ್ಟೇ ಬೇಕು. ಡಾರ್ವಿನ್ನನಲ್ಲಿ ಕವಿವಿಜ್ಞಾನಿಗಳಿಬ್ಬರ ಆತ್ಮತೇಜಸ್ಸೂ, ಪ್ರತಿಭಾಸಂಪತ್ತೂ ತುಂಬಿದ್ದುವು.

ಡಾರ್ವಿನ್ನನ ಕಾಲಾನಂತರ ಮತವಾದಿಗಳನೇಕರು ಅವನ ಮಹಾಕಾರ್ಯವನ್ನರಿತುಕೊಂಡು ಗೌರವಿಸುವಂತಾದರು. ದೇಶಕ್ಕೆ ದೇಶವೇ 'ಇದು ಡಾರ್ವಿನ್ ಯುಗ' ಎಂದು ಹೊಗಳಲಾರಂಭಿಸಿತು. ಸಾರ್ವಜನಿಕ ಸಂಸ್ಥೆಗಳೂ, ವಿಜ್ಞಾನಪ್ರೇಮಿಗಳೂ, ದೇಶಾಭಿಮಾನಿಗಳೂ ಒಟ್ಟುಗೂಡಿ ಅವನ ಹೆಸರನ್ನು ತಮ್ಮ ಜನಜೀವನದಲ್ಲಿ ಚಿರಸ್ಥಾಯಿಯಾಗಿಸುವಂಥ ಸ್ಮಾರಕವೊಂದನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಸ್ಮಾರಕನಿಧಿಯನ್ನು ತೆರೆದರು. ಯೂರೋಪಿನ ಬೇರೆ ಬೇರೆ ದೇಶಗಳಿಂದಲೂ, ಬ್ರಿಟಿಷ್ ಸಾಮ್ರಾಜ್ಯದ ಎಲ್ಲ ಕಡೆಗಳಿಂದಲೂ ಬ್ರೆಸಿಲ್, ಸಂಯುಕ್ತ ಸಂಸ್ಥಾನ ಮೊದಲಾದ ಅಮೆರಿಕದ ಬೇರೆ ಬೇರೆ ಭಾಗಗಳಿಂದಲೂ ಸ್ಮಾರಕನಿಧಿಗೆ ಧನ ಸಂಗ್ರಹವಾಯಿತು. ಕೂಲಿಗಳಿಂದ ಹಿಡಿದು ಸಾಧ್ವಿಗಳವರೆಗೆ ಎಲ್ಲ ವರ್ಗದವರೂ

ತಮ್ಮ ತಮ್ಮ ಕಾಣಿಕೆಯನ್ನು ಸಲ್ಲಿಸಿ ಸ್ಮಾರಕ ನಿಧಿಯನ್ನು ನಾಲ್ಕು ಸಹಸ್ರ ಪೌಂಡುಗಳಷ್ಟಕ್ಕೆ ಬೆಳೆಯಿಸಿದರು.

ಸ್ಮಾರಕ ಸಮಿತಿಯವರು ಡಾರ್ವಿನ್ನನ ಪ್ರತಿಮೆಯೊಂದನ್ನು ತಯಾರಿಸಿ ಬ್ರಿಟಿಷ್ ಮ್ಯೂಸಿಯಮ್ಮಿನಲ್ಲಿ ಸ್ಥಾಪಿಸಬೇಕೆಂದು ತೀರ್ಮಾನಿಸಿದರು. ಶಿಲ್ಪಕಲಾವಿಶಾರದರಾದ ಬೋಹೆಮ್‌ರವರು ಡಾರ್ವಿನ್ನನ ಪ್ರತಿಮೆಯನ್ನು ತಯಾರಿಸಿಕೊಟ್ಟರು. ೧೮೮೫ನೆಯ ವರ್ಷದ ಜೂನ್ ಒಂಬತ್ತನೆಯ ದಿನ ವೇಲ್ಸಿನ ರಾಜಕುಮಾರರು ಪ್ರತಿಮೆಯ ಪ್ರತಿಷ್ಠಾಪನ ಮಹೋತ್ಸವವನ್ನು ನೆರವೇರಿಸಿದರು. ಆ ಪ್ರತಿಮೆಯಲ್ಲಿ ಡಾರ್ವಿನ್ನನ ಗಾಂಭೀರ್ಯ, ಸರಳ ಸ್ವಭಾವ, ಮೊದಲಾದ ಎಲ್ಲ ಗುಣಗಳೂ ಪ್ರತಿಬಿಂಬಿತವಾಗಿವೆ. ಈ ಸ್ಮಾರಕ ಪ್ರತಿಮೆ ಬ್ರಿಟಿಷ್ ಮ್ಯೂಸಿಯಮ್ಮಿನಲ್ಲಿ ಹೆಬ್ಬಾಗಿಲಿಗೆ ಅನತಿದೂರದಲ್ಲಿದೆ.

**ಡಾರ್ವಿನ್ನನ ಸ್ಮಾರಕ**

ಅದರ ಸಮೀಪದಲ್ಲಿರುವ ಮರವೊಂದರ ಮೇಲೆ ಬೇರೆ ಬೇರೆ ಜಾತಿಯ ಪಾರಿವಾಳಗಳನ್ನು ಸಾಕಿರುವರು. ಯಾತ್ರಿಕರು ಅಲ್ಲಿ ಹೋದಾಗ ಡಾರ್ವಿನ್ನನ ಪ್ರತಿಮೆಯನ್ನು ನೋಡುವಷ್ಟರಲ್ಲಿ ಮರಗಳ ಮೇಲೆ ಹಾರಾಡುತ್ತಿರುವ ಪಾರಿವಾಳಗಳು ಅವರ ಮನವನ್ನು ಆಕರ್ಷಿಸುವುವು. ಅವನ ಕಾರ್ಯಸಾಧನೆಯಲ್ಲಿ ಆ ಪಾರಿವಾಳಗಳು ಎಷ್ಟೊಂದು ನೆರವಾದುವೆಂಬುದನ್ನು ಸ್ಮರಣೆಗೆ ತರಲೋಸ್ಕರವೇ ಅವುಗಳನ್ನು ಅಲ್ಲಿ ಸಾಕಿರುವುದು.

ಡಾರ್ವಿನ್ 'ಬೈಬಲ್ಲನ್ನು ಪ್ರತಿಭಟಿಸುವ ವಿಕಾಸತತ್ವವನ್ನು ಸಾರಿದ ನಾಸ್ತಿಕ'ನೆಂದು ಹೇಳತಕ್ಕವರು ಇಂದಿಗೂ ಇಲ್ಲದೇ ಇಲ್ಲ ಅವರೆಲ್ಲ ಕೇವಲ ಸಂಪ್ರದಾಯಕ್ಕೆ ಶರಣುಹೋಗತಕ್ಕವರೆಂದೇ ಹೇಳಬೇಕು. ಎಂದೋ ಯಾರೋ

**ಡಾರ್ವಿನ್ನನು ನಾಸ್ತಿಕನಲ್ಲ**

ಬರೆದಿಟ್ಟ ಆಧಾರ ಸನಾತನವಾದುದೆಂಬ ನಂಬಿಕೆಯಿಂದ ವಿಕಾಸವಾದವನ್ನು ಅವರು ಪ್ರತಿಭಟಿಸುವರು—ವಿಚಾರ ದೃಷ್ಟಿಯಿಂದಲ್ಲ. ಇತರ ಎಲ್ಲ ಮತಗಳಿಗಿಂತಲೂ ಕ್ರೈಸ್ತ ಮತದ ಮೇಲೆ ವಿಕಾಸವಾದ ಹೆಚ್ಚು ಪರಿಣಾಮ ಉಂಟುಮಾಡಿತೆಂದು ಹೇಳಬಹುದು. ಮತದ ಹಿಡಿಯಲ್ಲಿ ಸಿಕ್ಕಿ ಮೌಢ್ಯದಲ್ಲಿದ್ದ ಮಾನವನ ಮನಸ್ಸು ಡಾರ್ವಿನ್ನನ ಯುಗಪ್ರವರ್ತಕ ಕಾರ್ಯದಿಂದ ಮುಕ್ತಿಯನ್ನು

ಪಡೆದು ವಿರಾಜಿಸಲಾರಂಭಿಸಿತು. ಅವನು ಮಾನವಕೋಟಿಗೆ ನೀಡಿದ ದಿವ್ಯ ಪ್ರಸಾದವೆಂದರೆ ಈ ಮಾನಸಸ್ವಾತಂತ್ರ್ಯ. ಎಲ್ಲ ವಿಕಾಸವಾದಿಗಳೂ ಒಂದಲ್ಲ ಇನ್ನೊಂದು ವಿಧದಲ್ಲಿ ಮಾನವನಿಗೂ ಮಿಗಿಲಾದ ಮಹಾಶಕ್ತಿಯೊಂದು ಜಗತ್ತಿನಲ್ಲಿದೆಯೆಂದು ಒಪ್ಪಿಕೊಂಡೇ ಇರುವರು. ಆ ಮಹಾಶಕ್ತಿಯಿಂದಲೇ ಇಂದಿನ ಸಚೇತನ ವಸ್ತುಗಳು ತಮ್ಮ ತಮ್ಮ ಪ್ರತ್ಯೇಕ ಶಕ್ತಿಯನ್ನು ಪಡೆದಿರುವುವು. ವಿಕಾಸತತ್ವಜನಕನಾದ ಡಾರ್ವಿನ್ ಸಚೇತನ ಜಗತ್ತನ್ನು ವಿಮರ್ಶಿಸುತ್ತಾ 'ವಿಕಾಸತತ್ವದ ಬೆಳಕಿನಲ್ಲಿ ಸೃಷ್ಟಿ ಹೊಂಗಳೆಯೇರಿ ನಮ್ಮ ಕಣ್ಮನಗಳಿಗೆ ಸೌಂದರ್ಯಮಯವಾಗಿ ಕಾಣುವಂತಾಯಿತು. ಇಂಥ ಕಲಾಮಯ ಜಗತ್ತನ್ನು ನಿರ್ಮಿಸಲು ಆದಿಶಕ್ತಿ ಎಷ್ಟು ವಿಶಾಲವಾದ, ವಿಮಲವಾದ, ಕಲಾಪೂರ್ಣವಾದ ಕನಸನ್ನು ಕಂಡಿರಬೇಕು! ಇಂದಿನ ಇಡೀ ಜೀವವರ್ಗಕ್ಕೇ ವಿಕಾಸದ ತಳಹದಿಯಾದ ಆದಿಜೀವರಸವನ್ನು ಜಡವಸ್ತುಗಳ ಸಂಯೋಗದಿಂದ ನಿರ್ಮಿಸಿಕೊಳ್ಳುವಾಗ ಎಂಥ ಚತುರತಮ ಸನ್ನಿವೇಶಗಳನ್ನು ಕಲ್ಪಿಸಿಕೊಂಡಿರಬೇಕು' ಇತ್ಯಾದಿಯಾಗಿ ನುಡಿದು ವಿಕಾಸತತ್ವದ ಆಧ್ಯಾತ್ಮಿಕ ದೃಷ್ಟಿಯನ್ನು ವಿವರಿಸಿರುವನು. ತನ್ನ ಗ್ರಂಥರಾಶಿಯಲ್ಲೊಂದೆಡೆ ಮಾನವನ ನೈತಿಕದೃಷ್ಟಿಯನ್ನು ವಿವರಿಸುತ್ತಾ 'ಸರ್ವರ ಸುಖಶಾಂತಿಯೇ ಉಚ್ಚ ನೈತಿಕದೃಷ್ಟಿ'ಯೆಂಬುದಾಗಿ ತನ್ನ ಮನೋಭಾವನೆಯನ್ನು ಹೊರಗೆಡಹಿರುವನು. ಎಲ್ಲ ಮತಗಳೂ ಇಂಥ ಉನ್ನತ ತತ್ವಗಳನ್ನೇ ಅಳವಡಿಸಿಕೊಂಡಿವೆ. ಡಾರ್ವಿನ್ ಕ್ರೈಸ್ತಮತಕ್ಕೆ ವಿರೋಧಭಾವನೆಯನ್ನೆಂದೂ ಪ್ರದರ್ಶಿಸಿದವನಲ್ಲ. ಹಾಗೆ ಮತವನ್ನು ಖಂಡಿಸುವವರನ್ನು ಅವನು ಒಪ್ಪುತ್ತಿರಲಿಲ್ಲ. ಆದರೆ ಬೈಬಲ್ಲಿನಲ್ಲಿ ಹೇಳಿರುವ ಹಲವಂಶಗಳು ಹುಸಿಯೆಂದು ಸಕಾರಣವಾಗಿ ತೋರಿಸಿಕೊಟ್ಟನು. ಅಷ್ಟರಿಂದಲೇ ಅವನನ್ನು ನಾಸ್ತಿಕನೆಂದು ಕರೆಯುವುದು ಸರಿಯಲ್ಲ.

ಅವನು ಕ್ರೈಸ್ತಧರ್ಮವನ್ನು ವಿರೋಧಿಸುವ ಉದ್ದೇಶದಿಂದ ಹೊರಡಲೇ ಇಲ್ಲ. ವಿಚಾರಪರನಾಗಿ ವಿಜ್ಞಾನಸಂಶೋಧನೆಯ ಕಾರ್ಯದಲ್ಲಿ ತೊಡಗಿರುವಾಗ ಹಲವು ಸತ್ಯಾಂಶಗಳನ್ನು ಹೊರಗೆಡಹಿದನು. ಆ ತತ್ವಗಳು ಕ್ರೈಸ್ತಮತದ ಹಲವು ನಂಬಿಕೆಗಳನ್ನು ತಲೆಕೆಳಗೆ ಮಾಡಿದುದೇನೋ ನಿಜ, ಆದರೆ ಡಾರ್ವಿನ್ ಮತ ದ್ರೋಹಿಯಲ್ಲ. ಆ ನಂಬಿಕೆಗಳು ಸುಳ್ಳೆಂದು

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೮ | ೭ | ಮಾರ್ಗರೆಟ್ | ಬ್ಯಾರೆಟ್ |
| ೬೩ | ೨೬ | ಹರ್ಬರ್ಟ್ | ಹರ್ಬರ್ಟ್ರ್ |
| ೬೪ | ೨೪ | ೧೨೪೨ರಲ್ಲಿ | ೧೮೪೨ರಲ್ಲಿ |
| ೮೧ | ೧೪ | ತಕ್ಕತಕ್ಕುದು | ತಕ್ಕುದು |
| ೮೪ | ೨೭ | ವಿಜ್ಞಾನಿಗಳನ್ನೇಕರು | ವಿಜ್ಞಾನಿಗಳನೇಕರು |
| ೮೫ | ೧೦ | ಇಷ್ಟ್ರದಂತೆ | ಇಷ್ಟದಂತೆ |
| ೯೧ | ೬ | ಆರ್ಕ್ಟಿಯಾಪೆರಿಕ್ಸ್ | ಆರ್ಕಿಯಾಪ್ಟೆರಿಕ್ಸ್ |

---

# ಗ್ರಂಥಋಣ


1. L. Huxley : 'Charles Darwin'
2. G. T. Bettany : 'Darwin'
3. J. A. Thomson : 'Darwinism and human life'
4. Charles Darwin : 'Descent of m· ı'
5. Charles Darwin : 'Origin of
6. Burtrand Russel : 'Scientific ou..
7. T. H. Huxley : 'Collected essays'

etc., .tc.